ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ
ಕ.ರಾ.ಶಿ. ಸಂಸ್ಥೆಯ ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ

# ತಾಯ್ತನದ ವಿಭಿನ್ನ ಗ್ರಹಿಕೆಗಳು

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಸುನಿತಾ ಬಾಬುರಾವ

ಮಾರ್ಗದರ್ಶಕರು

ಡಾ. ಜಗನ್ನಾಥ ಹೆಬ್ಬಾಳೆ
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ–೫೮೩೨೭೬
೨೦೧೮

ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ
ಕ.ರಾ.ಶಿ. ಸಂಸ್ಥೆಯ ಹೈದ್ರಾಬಾದಕರ್ನಾಟಕ ಸಂಶೋಧನಕೇಂದ್ರ ಬೀದರ

# ತಾಯ್ತನದ ವಿಭಿನ್ನ ಗ್ರಹಿಕೆಗಳು

(ಪಿಹೆಚ್.ಡಿ. ಪದವಿಗಾಗಿಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



**ಸಂಶೋಧಕರು**

ಸುನಿತಾ ಬಾಬುರಾವ

**ಮಾರ್ಗದರ್ಶಕರು**

ಡಾ. ಜಗನ್ನಾಥ ಹೆಬ್ಬಾಳೆ
ಕರಾಶಿ ಸಂಸ್ಥೆಯ
ಹೈದ್ರಾಬಾದಕರ್ನಾಟಕ ಸಂಶೋಧನಕೇಂದ್ರ ಬೀದರ



ಜಾನಪದಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೮

# ಪ್ರಮಾಣ ಪತ್ರ

**ತಾಯ್ತನದ ವಿಭಿನ್ನ ಗ್ರಹಿಕೆಗಳು** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಜಗನ್ನಾಥ ಹೆಬ್ಬಾಳೆ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದಜಾನಪದಅಧ್ಯಯನ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ. ಈ ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲುಯಾವುದೇ ಪದವಿಗಾಗಿಇಲ್ಲವೇ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ:–20/02/2018

**ಸುನಿತಾ ಬಾಬುರಾವ**
ಸಂಶೋಧನಾ ವಿದ್ಯಾರ್ಥಿನಿ
ಕರಾಶಿ ಸಂಸ್ಥೆಯ
ಹೈದ್ರಾಬಾದಕರ್ನಾಟಕ ಸಂಶೋಧನ
ಕೇಂದ್ರ ಬೀದರ–585401

# ಮಾರ್ಗದರ್ಶಕರ ಪ್ರಮಾಣಪತ್ರ

ತಾಯ್ತನದ ವಿಭಿನ್ನ ಗ್ರಹಿಕೆಗಳು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸುನಿತಾ ಬಾಬುರಾವ ಅವರು ನನ್ನ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ:–20/02/2018

ಡಾ. ಜಗನ್ನಾಥ ಹೆಬ್ಬಾಳೆ
ಮಾರ್ಗದರ್ಶಕರು
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ
ಕೇಂದ್ರ ಬೀದರ–585401

ಸಂಯೋಜನಾಧಿಕಾರಿಗಳು
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ
ಬೀದರ

# ಪರಿವಿಡಿ

## ಅಧ್ಯಾಯ:-1 ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

- ಅಧ್ಯಯನದ ಉದ್ದೇಶ
- ಅಧ್ಯಯನದ ವ್ಯಾಪ್ತಿ
- ಅಧ್ಯಯನದ ಸ್ವರೂಪ
- ಅದ್ಯಯನದ ವೈಧಾನಿಕತೆ
- ಈ ವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ - 1

## ಪ್ರಸ್ತಾವನೆ

ಮಾನವ ಜನಾಂಗಕ್ಕೆ ತನ್ನದೆ ಆದ ಒಂದು ಇತಿಹಾಸವಿದೆ. ಮಾನವ ಎನ್ನುವ ಪದದ ಹಿಂದೆ ಸ್ತ್ರೀ ಮತ್ತು ಪುರುಷ ಎಂಬ ಅರ್ಥ ಒಳಗೊಂಡಿದೆ. ಮಾನವ ಜನಾಂಗ ಭೂಮಿಯ ಮೇಲೆ ಹುಟ್ಟು ಪಡೆದ ದಿನದಿಂದ ಆತನ ಪಯಣ ಅವಿರತವಾಗಿ ಸಾಗಿದೆ. ಮಾನವ ಜನಾಂಗವನ್ನು ಜೈವಿಕವಾಗಿ ಹೆಣ್ಣು ಮತ್ತು ಗಂಡು ಎಂಬುದಾಗಿ ವಿಭಾಗಿಸಬಹುದು. ಇವರಿಬ್ಬರಲ್ಲಿ ದೈಹಿಕ ವ್ಯತ್ಯಾಸ ಇರುವುದು ಪ್ರಕೃತಿಯ ನಿಯಮ.ಇಬ್ಬರೂ ಮಾನವ ರೂಪಿಯಾಗಿದ್ದರೂ ಕಾಲಾಂತರದಲ್ಲಿ ಸಾಂಸ್ಕೃತಿಕ ಬೆಳವಣಿಗೆಯಿಂದಾಗಿ ಅವರವರ ಅಂತಸ್ತು , ವೇಷ - ಭೂಷಣ , ಬದುಕುವ ರೀತಿ - ನೀತಿಗಳು ಬೇರೆ - ಬೇರೆ ಯಾದವು. ಪ್ರಾರಂಭದ ಹಂತದಲ್ಲಿ ಹೆಣ್ಣು ಮಾನ್ಯತೆ ಪಡೆದ ನಂತರದ ದಿನಗಳಲ್ಲಿ ಪುರುಷನ ಅಧಿನಳಾಗಿ ಬದುಕು ನಡೆಸುತ್ತ ಬಂದಿರುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ಹಿಂದಿನ ಕಾಲದಿಂದ ಇಂದಿನ ವರೆಗೆ ಹೆಣ್ಣು ಸವೆಸಿದ ದಾರಿ ಬಹು ಸಂಕೀರ್ಣವಾದದ್ದು.ಕಾಲದಿಂದ ಕಾಲಕ್ಕೆ ಸ್ತ್ರೀಯ ಸ್ಥಾನ ಮಾನ ಬದಲಾಗುತ್ತಾ ಸಾಗಿದೆ.

ಸಮಾಜ ತನ್ನ ಸಮತೋಲನವನ್ನು ಕಾಯ್ದುಕೊಳ್ಳಬೇಕಾದರೆ ಹೆಣ್ಣು ಮತ್ತು ಗಂಡು ಇಬ್ಬರ ಸಮಾನ ಪಾಲ್ಗೋಳ್ಳುವಿಕೆ ಅವಶ್ಯ ಮತ್ತು ಅನಿವಾರ್ಯ. ಒಂದು ಸಮಾಜ ಎಂದಾಗ ಅಲ್ಲಿ ಇಬ್ಬರ ಪಾಲ್ಗೊಳ್ಳುವಿಕೆ ಅವಶ್ಯ. ಇಲ್ಲಿ ಮೇಲು - ಕೀಳು ಎಂಬ ಧೋರಣೆಗೆ ಅವಕಾಶವಿರಬಾರದು ಆದರೆ ವಾಸ್ತವವಾಗಿ ದುರದುಷ್ಟವಶ ನಮ್ಮ ಸಮಾಜದಲ್ಲಿ ಹೆಣ್ಣು - ಗಂಡು ಎಂಬ ಭೇದದ ಒಂದು ದೊಡ್ಡ ಕಂದಕವೇ ಇದೆ. ಹೆಣ್ಣಿನ ಕುರಿತಂತೆ ಇರುವ ತಾರತಮ್ಯ. ಆಕೆಯ ಮೇಲೆ ಜರುಗುವ ಶೋಷಣೆ , ದಬ್ಬಾಳಿಕೆಗಳು ಪರಂಪರೆಯಿಂದ ನಡೆದೆ ಇವೆ. ಇದಕ್ಕೆ ಪೂರಕವಾಗಿ ನಮ್ಮಲ್ಲಿ ರೂಪು ಪಡೆದಿದೆ. ನಂಬಿಕೆ , ಆಚರಣೆ ಸಂಪ್ರದಾಯಗಳೆಲ್ಲ ಪುರುಷ ಪ್ರಧಾನತೆಯ ಸಂಕೇತವಾಗಿಯೇ ರಚನೆಗೊಂಡಿರುವುದು ಗಮನಿಸಬಹುದು.

ನಮ್ಮ ಸಮಾಜ ರಚನೆಗೊಂಡಿರುವುದು ನಮ್ಮಲ್ಲಿನ ಸಮಾಜ ಸಂಬಂಧಗಳಿಂದ ಇಲ್ಲಿ ತಂದೆ-ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ, ಅಜ್ಜ-ಅಜ್ಜಿ, ಸೋದರಮಾವ-ಸೋದರತ್ತೆ ಹೀಗೆ ಹಲವಾರು ಕೌಟುಂಬಿಕ ಸಂಬಂಧಗಳಿಂದ ಮಾನವನು ಬಂಧಿಸಲ್ಪಟ್ಟಿದ್ದಾನೆ. ಇದರಲ್ಲಿ ಗಂಡು ಮತ್ತು ಹೆಣ್ಣಿನ ಸಂಬಂಧ ಅತ್ಯಂತ ಪ್ರಮುಖವಾದದು. ಅದರಲ್ಲಿ ಮುಖ್ಯವಾಗಿ ಗಮನಿಸಬೇಕಾದ ವ್ಯಕ್ತಿ ಎಂದರೆ ಹೆಣ್ಣು. ನಮ್ಮ ಸಮಾಜದಲ್ಲಿ ಹೆಣ್ಣಿಗೆ ಶ್ರೇಷ್ಠ ಸ್ಥಾನವಿದ್ದರೂ ಹಲವು ಬಗೆಯ ಶೋಷಣೆಗೆ ಒಳಗಾಗಿದ್ದಾಳೆ. ಹೆಣ್ಣನ್ನು ತಾಯಿಯಾಗಿ ಗೌರವಯುತವಾದ ಸ್ಥಾನದಲ್ಲಿ ನಿಲ್ಲಿಸಿದ್ದಾರೆ. ಹೆಣ್ಣು ಕೇವಲ ಹೆಣ್ಣಾಗಿರದೆ ಆಕೆ ತಾಯಿ ಸ್ವರೂಪಿ ಎಂಬ ಗ್ರಹಿಕೆ ನಮ್ಮಲ್ಲಿ ಇದೆ.

ಈ ಕಾರಣಕ್ಕಾಗಿ ತಾಯಿ ಹಾಗೂ ಆಕೆಯಿಂದ ಹರಿದು ಬರುವ ತಾಯ್ತನ ಯಾವ ಸ್ವರೂಪದ್ದು ಈ ಕುರಿತಂತೆ ನಮ್ಮ ಜನಪದ ಗ್ರಹಿಕೆಗಳೇನು? ಎಂಬ ಪ್ರಶ್ನೆಯನ್ನು ಎದುರಿಸುತ್ತ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ಸಂಶೋಧನ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನ ಕೈಗೊಂಡಿರುತ್ತೇನೆ. ತಾಯ್ತನದ

ಕುರಿತಾದ ವಿಭಿನ್ನ ಧೋರಣೆಗಳನ್ನು ಗುರುತಿಸಿ ಆ ಮೂಲಕ ಮಹಿಳೆಯ ಬದುಕಿನ ಚೌಕಟ್ಟನ್ನು ಗುರುತಿಸುವುದು ಇಲ್ಲಿ ಮುಖ್ಯವಾಗಿದೆ. ತಾಯ್ತನದ ಮೂಲಕ ಮಹಿಳಾ ಬದುಕಿನ ವಾಸ್ತವ ಅಂಶಗಳನ್ನು ಅರಿತುಕೊಳ್ಳುವ ಕುತೂಹಲ ಇಲ್ಲಿ ಮುಖ್ಯವಾಗಿದೆ. ಮಹಿಳೆಯ ಚರಿತ್ರೆ ಒಂದರ್ಥದಲ್ಲಿ ತಾಯಂದಿರ ಚರಿತ್ರೆಯೆ ಆಗಿದೆ. ಕಾರಣ ಮಹಿಳೆ ತಾನು ಬದುಕುವ ವ್ಯಾಪ್ತಿಯಲ್ಲಿ ತನ್ನ ಮಕ್ಕಳ ಪಾಲನೆ - ಪೋಷಣೆಯಿಂದ ಹಾಗೂ ಕುಟುಂಬದಿಂದ ದೂರ ಉಳಿಯದೇ, ತನ್ನ ಚರಿತ್ರೆ ನಿರ್ಮಾಣ ಮಾಡಿಕೊಂಡವಳು. ಆದರೆ ದುರದುಷ್ಟವಶಾತ ತಾಯ್ತನವೇ ಆಕೆಯ ಪಾಲಿಗೆ ಬೇಲಿಯಾಯಿತು. ಶತ-ಶತಮಾನಗಳಿಂದಲೂ ತಾಯಂದಿರು ಅನುಭವಿಸಿದ ಅನುಭವಗಳು, ಯಾತನೆಗಳು, ಶೋಷಣೆಗಳು, ಸಂಘರ್ಷ ಮತ್ತು ಸವಾಲುಗಳನ್ನು ಎಳೆಎಳೆಯಾಗಿ ಬಿಡಿಸಿ ನೋಡಬೇಕಾದ ಅಗತ್ಯವಿದೆ.

ಹಿಂದಿಗಿಂತಲೂ ಇಂದು ಮಹಿಳೆಯ ಕುರಿತಾದ ಅಧ್ಯಯನಗಳು ಬಹು ವ್ಯಾಪಕವಾಗಿ ನಡೆದಿವೆ. ಹಲವಾರು ನೆಲೆಗಳಿಂದ ಆಕೆಯ ಬದುಕನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ. ಈ ನನ್ನ ಅಧ್ಯಯನವೂ ಒಂದು ಚಿಕ್ಕ ಪ್ರಯತ್ನವಾಗಿದೆ. ಇತಿಹಾಸದುದ್ದಕ್ಕೂ ಮಹಿಳೆಯ ಚರಿತ್ರೆ ಗೌಣವಾಗಿ ಯೇ ಪ್ರತಿಬಿಂನಿಸಲಾಗಿದೆ. ಅಧ್ಯಯನ ಕೈಗೊಳ್ಳುವ ಸಂಧರ್ಭದಲ್ಲಿ ನಮ್ಮ ಸಂಸ್ಕೃತಿಯಲ್ಲಿನ ಎಳೆಗಳನ್ನು ಸಾಹಿತ್ಯದಲ್ಲಿನ ಗ್ರಹಿಕೆಗಳನ್ನು ಗಮನಿಸಬೇಕಾಗುತ್ತದೆ. ತಾಯ್ತನಕ್ಕೆ ಸಂಬಂಧಿಸಿದಂತೆ, ಮಹಿಳೆಯರು ಅನುಭವಿಸಿದ ಅವರ ಅನುಭವಗಳನ್ನು ಸಾಹಿತ್ಯದ ಮೂಲಕ ನೋಡಬೇಕಾಗುತ್ತದೆ. ಅದರಲ್ಲಿಯೂ ಜನಪದ ಸಾಹಿತ್ಯದ ಮುಖ್ಯ ಪ್ರಕಾರಗಳಾದ ಗೀತೆ, ಕಥನಗೀತೆ, ಗಾದೆಗಳಲ್ಲಿ ನಮ್ಮ ತಾಯಂದಿರ ಬದುಕು ಚಿತ್ರಣ ಗೊಂಡ ಬಗೆಯನ್ನು ಗಮನಿಸಿದರೆ ಅವಳ ಅಂತರಂಗದ ನೋವು-ನಲಿವುಗಳನ್ನು ಗುರುತಿಸುವುದು ಸುಲಭವಾಗಬಹುದು.

ಮಾತೃಪ್ರಧಾನ ಸಮಾಜದಿಂದ ಇಂದಿನವರೆಗೆ ತಾಯಿಯ ಬದುಕು, ಆಸೆ ಸವೆಸಿದ ದಾರಿ, ಇಟ್ಟ ಹೆಜ್ಜೆ ಮತ್ತು ತೊಟ್ಟ ರೂಪಗಳನ್ನು ಈ ಅಧ್ಯಯನದ ಮೂಲಕ ಅರಿತುಕೊಳ್ಳಲು ಪ್ರಯತ್ನಿಸಲಾಗಿದೆ. ಮಹಿಳೆಯ ಬದುಕಿನೊಂದಿಗೆ ಬೆಳೆದು ಬಂದ ಜನಪದ ಸಾಹಿತ್ಯದ ಮೂಲಕ ತಾಯ್ತನವನ್ನು ಗ್ರಹಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ಜನಪದ ತಾಯಂದಿರು ತಾವು ಕಂಡುಕೊಂಡ ಸುಖ - ದುಖಗಳನ್ನು ಹಾಡುಗಳ ಮೂಲಕವಾಗಿ ಹೊರಹಾಕಿದ್ದಾರೆ. ಇವು ಮೇಲ್ನೋಟಕ್ಕೆ ಭಾವನಾ ಪ್ರಧಾನವಾಗಿ ಕಂಡರೂ ಅವು ಆಕೆಯ ಬದುಕಿನ ವಾಸ್ತವ ಅಂಶಗಳನ್ನು ತೆಗೆದು ತೋರಿಸುವ ಬೀಗದ ಕೈಗಳಾಗಿದೆ. ಜನಪದ ಸಾಹಿತ್ಯವೆಂದರೆ ಅದು ಹಳ್ಳಿಗರ ಸಾಹಿತ್ಯ, ಹೆಣ್ಣು-ಮಕ್ಕಳ ಸಾಹಿತ್ಯವೆಂದು ಮೂಗು ಮುರಿಯುವ ಕಾಲವೊಂದಿತ್ತು. ಆದರೆ ಇಂದು ಜನಪದ ಸಾಹಿತ್ಯದ ಮೂಲಕವಾಗಿಯೇ ಬದುಕಿನ ಚರಿತ್ರೆಯನ್ನು ನಿರ್ಮಿಸಬಹುದಾಗಿದೆ ಎಂಬ ನಿಲುವಿಗೆ ವಿದ್ವಾಂಸರು ಬಂದಿದ್ದಾರೆ. ಈ ಹಿನ್ನೆಲೆಯ ತಾಯ್ತನದ ಕುರಿತಂತೆ ಚರಿತ್ರೆಯೊಂದ ನಿರ್ಮಿಸಬಹುದಾಗಿದೆ. ಪ್ರಾರಂಭದ ಹಂತದಲ್ಲಿ ಮಹಿಳೆ ಹೇಗೆ ಸ್ವತಂತ್ರಳಾಗಿದ್ದಳು, ಮಾತೆಯರಿಗೆ ಅಗ್ರಸ್ಥಾನವಿತ್ತು ಎಂಬುದನ್ನು ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು ಗುರಿತಿಸಿದ್ದಾರೆ. ನಂತರದ ದಿನಗಳಲ್ಲಿ ಪುರುಷಪ್ರಧಾನತೆಯಲ್ಲಿ ಮಾತೆಯರ ಅಂದರೆ ನಮ್ಮ ತಾಯಂದಿರ ಬದುಕು ಹೇಗೆ ಪರತಂತ್ರಕ್ಕೆ

ಗುರಿಯಾಗಿ, ಪುರುಷರ ಅಧೀನಳಾಗಿ ಬದುಕು ನಡೆಸುತ್ತಿದ್ದಾಳೆ ಎಂಬುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ.

ತಾಯ್ತನಕ್ಕೆ ಸಂಭಂದಿಸಿದಂತೆ ಇಲ್ಲ ಚರ್ಚಿಸಲಾಗುವ ಎಲ್ಲ ವಿಷಯಗಳು ಜಾನಪದದ ನೆಲೆಯಲ್ಲಿಯೇ ಗ್ರಹಿಸಲಾಗಿದೆ. ಆಧುನಿಕ ಸಂದರ್ಭಕ್ಕೆ ಬಂದಾಗ ತಾಯ್ತನವೆಂಬುದು ಹೇಗೆ ತನ್ನ ರೂಪವನ್ನು ಬದಲಾಯಿಸಿಕೊಂಡಿದೆ ಎಂಬುದನ್ನು ಗಮನಿಸಲಾಗಿದೆ. ಆಧುನಿಕ ಸಂದರ್ಭದಲ್ಲಿ ತಾಯ್ತನದ ಸವಾಲುಗಳು ನಮ್ಮ ಪರಂಪರಾಗತವಾಗಿ ಸಾಗಿಬಂದ ತಾಯಂದಿರ ಮುಂದುವರೆದ ರೂಪವೇ ಆಗಿದೆ ಎಂಬುದು ಮುಖ್ಯವಾಗಿ ಗಮನಿಸಬೇಕು.

## ಅಧ್ಯಯನದ ಉದ್ದೇಶ ಮತ್ತು ಮಹತ್ವ

'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ವಿಷಯವನ್ನು ಸಂಶೋಧನೆಗೆ ಆಯ್ದುಕೊಂಡಿದ್ದೇನೆ. ಈ ಅಧ್ಯಯನದ ಪ್ರಮುಖ ಉದ್ದೇಶಗಳನ್ನು ಈ ಮುಂದಿನಂತೆ ಗುರುತಿಸಬಹುದು.

- ಮಹಿಳೆಯ ಬದುಕನ್ನು ಸಮಗ್ರವಾಗಿ ಗ್ರಹಿಸುವುದರ ಜೊತೆಗೆ ತಾಯ್ತನದ ಸಂಬಂಧವನ್ನು ಅರಿಯುವುದಾಗಿದೆ.
- ಜಾನಪದ ಸಾಹಿತ್ಯ ಮುಖ್ಯವಾಗಿ ಜನಪದ ಗೀತೆ , ಕಥನ ಗೀತೆ ಮತ್ತು ಗಾದೆಗಳಲ್ಲಿ ತಾಯ್ತನದ ಗ್ರಹಿಕೆಯನ್ನು ಗ್ರಹಿಸುವುದು.
- ತಾಯ್ತನದ ಕುರಿತಂತೆ ಅರ್ಥವನ್ನು ಗ್ರಹಿಸುವುದು ಮತ್ತು ಆ ನಿಟ್ಟಿನಲ್ಲಿ ಇರುವ ವಿರೋಧಾಭಾಸಗಳನ್ನು ಗುರುತಿಸುವ ಉದ್ದೇಶ ಹೊಂದಲಾಗಿದೆ.
- ಮಾತೃ ಪ್ರಧಾನತೆಯ ಸಂದರ್ಭದ ಸಮಾಜದಲ್ಲಿನ ತಾಯಂದಿರ ಸ್ಥಿತಿ ಹಾಗೂ ಇಂದಿನ ತಾಯಂದಿರ ಸ್ಥಿತಿಗಳ ಕುರಿತು ಇರುವ ವಿಭಿನ್ನ ಗ್ರಹಿಕೆಗಳ ಕುರಿತು ಅಧ್ಯಯನ ಕೈಗೊಳ್ಳುವುದು.
- ನಮ್ಮ ಸಂಸ್ಕೃತಿಯಲ್ಲಿ ಮುಖ್ಯವಾಗಿ ಆಚರಣೆ-ನಂಬಿಕೆಗಳಲ್ಲಿ ನಮ್ಮ ತಾಯಂದಿರ ಪ್ರತಿನೀಧಿಕರಣದ ನೆಲೆಯಾವುದು ಹಾಗೂ ಆಕೆ ಸಾಂಸ್ಕೃತಿಕ ಬದುಕನ್ನು ಹೇಗೆ ಕಟ್ಟಿಕೊಂಡಳು ಎಂಬುದನ್ನು ತಿಳಿದುಕೊಳ್ಳುವುದು.
- ತಾಯಂದಿರ ಬದುಕಿನ ಬಹು ಮುಖ್ಯ ಘಟ್ಟಗಳಾಗಿರುವ ಜನನ, ಮೈನೆರೆಯುವಿಕೆ, ವಿವಾಹ-ಸೋಬಾನೆ, ಬಸಿರು-ಬಾಣಂತಿತನ, ಮರಣ ಮುಂತಾದ ಆಚರಣೆಗಳಲ್ಲಿ ತಾಯ್ತನ ಗ್ರಹಿಕೆಗಳೇನಾಗಿವೆ ಎಂಬುದು ಮುಖ್ಯವಾಗಿ ಗಮನಿಸುವುದಾಗಿದೆ.
- ತಾಯಂದಿರ ಕುರಿತಂತೆ ಸ್ತ್ರೀವಾದಿಗಳ ನಿಲುವುಗಳು ಹೇಗಿವೆ ಎಂಬುದನ್ನು ವಿಶ್ಲೇಷಿಸುವ ಉದ್ದೇಶ ಹೊಂದಲಾಗಿದೆ. ಇದು ಕೇವಲ ತಾಯಂದಿರ ಕುರಿತಂತೆ ಇರುವ ಸ್ತ್ರೀವಾದಿಗಳ ಗ್ರಹಿಕೆ ಕುರಿತು ಮಾತ್ರ ವಿಶ್ಲೇಷಿಸಲಾಗಿದೆ.
- ಮಹಿಳೆಯ ಬದುಕನ್ನು ಗ್ರಹಿಸುವಲ್ಲಿ ತಾಯ್ತನಕ್ಕೆ ಸಂಬಂಧಿಸಿದ ವಿಭಿನ್ನ ಬಗೆಯ ಚರ್ಚೆಗಳ ಕಡೆಗೆ ಗಮನ ಹರಿಸುವುದು. ಅವು ತಾಯ್ತನದ ಪರಿಕಲ್ಪನೆ ಕಟ್ಟಿಕೊಡುವಲ್ಲಿ ಹೇಗೆ ಸಹಕಾರಿಯಾಗಿವೆ ಎಂಬುದನ್ನು ಚರ್ಚಿಸುವ ಉದ್ದೇಶ ಹೊಂದಲಾಗಿದೆ.

- ಹೆಣ್ಣು, ಹೆಣ್ತನದ ಮೂಲಕ ತಾಯಿ, ತಾಯ್ತನದ ಮೂಲಕ ಹೇಗೆ ಶೋಷಣೆಗೆ ಒಳಗಾಗಿದ್ದಾಳೆ ಎಂಬುದನ್ನು ವಿವೇಚಿಸುವುದಾಗಿದೆ.
- ಪುರುಷ ಕೇಂದ್ರಿತ ಗ್ರಹಿಕೆಗಳು ತಾಯ್ತನವನ್ನು ಹೇಗೆ ಪ್ರಭಾವಿಸಿವೆ ಎಂದು ಕಾರಣಗಳನ್ನು ಹುಡುಕುತ್ತ ಈ ಅಧ್ಯಯನಕ್ಕೆ ಪೂರಕವಾಗಿ ಆಕರಗಳನ್ನು ಹುಡುಕುವುದಾಗಿದೆ.
- ಪಾರಂಪರಿಕ ಯೋಚನಾಕ್ರಮದಿಂದ ದೂರ ಸರಿದು ವಾಸ್ತವವಾಗಿ ಇಂದು ನಮ್ಮ ತಾಯಂದಿರು ಯೋಚಿಸುವ ಬಗೆ ಯಾವುದು ಎಂಬುದನ್ನು ಕಂಡುಕೊಳ್ಳುವುದಾಗಿದೆ.
- ವರ್ಗ, ವರ್ಣ, ಜಾತಿ, ಪ್ರದೇಶವೆಂಬ ತಾರತಮ್ಯದಿಂದ ದೂರವಾಗಿ ತಾಯ್ತನ ಹಲವಾರು ಸವಾಲುಗಳನ್ನು ಎದುರಿಸುತ್ತಿರುವುದನ್ನು ಇಲ್ಲಿ ಗಮನಿಸುವ ಉದ್ದೇಶ ಹೊಂದಲಾಗಿದೆ.
- ನಮ್ಮ ಸಮಾಜ ತಾಯ್ತನದ ಮೂಲಕವಾಗಿ ಅಭಿವ್ಯಕ್ತಿಗೊಂಡ ಬದುಕಿನಲ್ಲಿ ಮಾನಸಿಕ ಹಾಗೂ ದೈಹಿಕ ಸಂಘರ್ಷಗಳನ್ನು ಹೇಗೆ ಗ್ರಹಿಸಬಹುದು ಎಂಬುದನ್ನು ಗುರುತಿಸುವ ಉದ್ದೇಶ ಹೊಂದಲಾಗಿದೆ.

ಹೀಗೆ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಹಲವು ವಿಷಯಗಳನ್ನು ಪ್ರಮುಖವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಅದಲ್ಲದೆ ಸಂಶೋಧನೆ ಸೈದ್ಧಾಂತಿಕ ಚೌಕಟ್ಟಿಗನುಗುಣವಾಗಿ ಹಲವು ಮೂಲಗಳಿಂದ ಮಾಹಿತಿ ಸಂಗ್ರಹಿಸಿ ಬಳಸಿಕೊಳ್ಳಲಾಗಿದೆ.

ಜನಪದ ಸಾಹಿತ್ಯ ಮಾನವನ ಬದುಕನ್ನು ಅರಿತುಕೊಳ್ಳುವಲ್ಲಿ ಸಹಕಾರಿಯಾಗಿವೆ. ಅದರಲ್ಲಿಯೂ ಹೆಚ್ಚಾಗಿ ಮಹಿಳೆಯಿಂದ ಸೃಷ್ಟಿಸಲ್ಪಟ್ಟ ಜಾನಪದ ಗೀತೆ, ಕಥನಗೀತೆ, ಗಾದೆಗಳು ಅವಳ ಬದುಕಿನ ಹಲವು ಆಯಾಮಗಳನ್ನು ಪರಿಚಯಿಸುತ್ತವೆ. ಅದಕ್ಕಾಗಿ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿ ತಾಯ್ತನದ ಕುರಿತ ಗ್ರಹಿಕೆಗಳನ್ನು ಗ್ರಹಿಸುವುದು ಮಹತ್ವದ್ದಾಗಿದೆ. ತಾಯಂದಿರ ಬದುಕನ್ನು ಅರ್ಥೈಸಿಕೊಳ್ಳಲು ಈ ಅಧ್ಯಯನ ಪ್ರಸ್ತುತ ಸಂದರ್ಭದಲ್ಲಿ ಬಹು ಮಹತ್ವ ಪಡೆದುಕೊಂಡಿದೆ. ಏಕೆಂದರೆ 'ತಾಯಿ ಮೊದಲು ಗುರು ಮನೆಯೇ ಮೊದಲ ಪಾಠಶಾಲೆ' ಎಂಬ ಗಾದೆಯಂತೆ. ಸಮಾಜದ ನಿರ್ಮಾಣದಲ್ಲಿ ತಾಯಿಯ ಪಾತ್ರ ಹಿರಿದಾದದ್ದು ಆದರೆ ಆ ನಿಟ್ಟಿನಲ್ಲಿ ತಾಯಿ ಯಾವ ಸ್ಥಿತಿಯಲ್ಲಿದ್ದಾಳೆ ಅವಳ ಬದುಕಿನ ಕ್ರಮ ಹೇಗಿದೆ ಎಂದು ತಿಳಿದುಕೊಳ್ಳುವುದು ಮುಖ್ಯವಾಗಿದೆ.

ನಮ್ಮ ಸಮಾಜದಲ್ಲಿ ಬಂಜೆತನದ ಬವಣೆ ಅಪಾರ ಹಾಗಂತ ಮಕ್ಕಳನ್ನು ಪಡೆದ ತಾಯಿ ಸುಖವಾಗಿದ್ದಾಳೆಂದು ಹೇಳಲಾಗದು 'ಹೆರದಿದ್ದರೆ ಒಂದು ಚಿಂತೆ ಹೆತ್ತರೆ ನೂರಾರು ಚಿಂತೆ' ಎಂಬಂತೆ ನಮ್ಮ ತಾಯಂದಿರು ತಮ್ಮ ಬದುಕನ್ನು ಯಾತನಾಪೂರ್ವಕವಾಗಿ ನಡೆಸುತ್ತಿದ್ದಾರೆ ಎಂಬುದನ್ನು ಈ ಅಧ್ಯಯನದ ಮೂಲಕ ತಿಳಿದುಕೊಂಡು ಅವಳ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ಇದೊಂದು ಅಲ್ಪ ಪ್ರಯತ್ನವಾಗಬಹುದು.

ಜಾನಪದ ಸಾಹಿತದಲ್ಲಿ ಅದರಲ್ಲೂ ಗೀತೆ, ಕಥನಗೀತೆ ಮತ್ತು ಗಾದೆಗಳಲ್ಲಿ ತಾಯಂದಿರ ಬದುಕು ಬವಣೆ ವಿಭಿನ್ನವಾಗಿ ಮೂಡಿ ಬಂದಿದೆ. ಈ ನನ್ನ ಅಧ್ಯಯನ ಅದಕ್ಕೆ ಕೇಂದ್ರೀಕೃತಗೊಂಡಿದೆ. ಜಾನಪದ

ಸಂಸ್ಕೃತಿಯೂ ಬದುಕಿನ ಪ್ರತಿಬಿಂಬವಾಗಿದೆ. ಅದಕ್ಕಾಗಿ ಇವುಗಳ ಅಧ್ಯಯನ ಹಿಂದಿಗಿಂತಲೂ ಇಂದು ಬಹು ಮಹತ್ವ ಪಡೆದುಕೊಂಡಿದೆ.

ಮಹಿಳೆಯನ್ನು ತಾಯಿಯಾಗಿ ನಮ್ಮ ಜನಪದ ಸಮಾಜ ಹೇಗೆ ಗ್ರಹಿಸಿದೆ. ಅದು ಯಾವ ನೆಲೆಯಲ್ಲಿ ತಾಯ್ತನವನ್ನು ಹುಟ್ಟುಹಾಕಿದೆ ಎಂಬುದನ್ನು ಅರಿಯುವಲ್ಲಿ ಇಂಥ ಅಧ್ಯಯನ ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ. ಒಂದು ಸಂಸ್ಕೃತಿಯಲ್ಲಿ ಜನರು ತಮ್ಮ ಕಳ್ಳು-ಬಳ್ಳಿ ಸಂಬಂಧವನ್ನು ಹೇಗೆ ನಡೆಸಿಕೊಂಡು ಬಂದಿದ್ದಾರೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

ಶ್ರೀಮಂತಿಕೆಯಿಂದ ಕೂಡಿದ ನಮ್ಮ ಜಾನಪದ ಸಾಹಿತ್ಯ. ಹೇಗೆ ಹಲವು ಮಗ್ಗಲುಗಳಿಂದ ಅಧ್ಯಯನ ಕೈಗೊಳ್ಳಬಹುದು ಎಂಬುದಕ್ಕೆ ಇಂಥ ಅಧ್ಯಯನಗಳು ಮಾದರಿಯಾ ಗಬಲ್ಲವು. ಜಾನಪದದ ನೆಲೆಯಲ್ಲಿ ರೂಪುಪಡೆದ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಗ್ರಹಿಸುವುದರ ಮೂಲಕ ಹೆಣ್ಣಿನ ಮುಖ್ಯ ಘಟ್ಟವನ್ನು ಅಧ್ಯಯನಕ್ಕೆ ಒಳಪಡಿಸಿದಂತಾಗುತ್ತದೆ. ಈ ಅಧ್ಯಯನ ತಾಯ್ತನಕ್ಕೆ ಸೀಮಿತವಾದ ಅಧ್ಯಯನವಾದರೂ ಒಂದು ನಿಟ್ಟಿನಲ್ಲಿ ಮಹಿಳಾ ಅಧ್ಯಯನವೆಂದೇ ಕರೆಯಬಹುದು. ಈ ಮೂಲಕ ಇಂದು ಇದು ಮಹತ್ವ ಪಡೆದುಕೊಳ್ಳುತ್ತದೆ. ಮಹಿಳೆಯ ಬದುಕಿನೊಂದಿಗೆ ಸಮಾಜದ ಅಧ್ಯಯನವೂ ಪೂರಕವಾಗಿ ನಡೆದೆ ಇರುತ್ತದೆ. ಈ ಹಿನ್ನೆಲೆಯಲ್ಲಿಯೂ ಈ ನನ್ನ ಅಧ್ಯಯನ ಮಹತ್ವ ಪಡೆದುಕೊಂಡಿದೆ.

ಒಟ್ಟಿನಲ್ಲಿ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ಈ ನನ್ನ ಅಧ್ಯಯನ ತನ್ನದೇ ಆದ ಉದ್ದೇಶವನ್ನು ಹೊತ್ತುಕೊಂಡು ಸಾಗಿದೆ. ಈ ಉದ್ದೇಶಕ್ಕೆ ಪೂರಕವಾಗಿ ಹಲವು ಮಹತ್ವದ ವಿಷಯಗಳು ಇಲ್ಲಿ ಚರ್ಚಿಗೊಂಡಿವೆ. ಇಂತಹ ಅಧ್ಯಯನದ ಮೂಲಕ ನಮ್ಮ ಮಹಿಳೆಯರ ಹಲವು ಗಂಭೀರ ಸಮಸ್ಯೆಗಳನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆಗೊಳಿಸಲು ಸಾಧ್ಯವಾಗಬಹುದು. ಈ ಮೂಲಕ ತಾಯ್ತನದ ಕುರಿತಂತೆ ಇರುವ ನಕಾರಾತ್ಮಕ ಆಲೋಚನೆಗಳನ್ನು ದೂರ ಮಾಡಲು ಇಂತಹ ಅಧ್ಯಯನಗಳಿಂದ ಮಾತ್ರ ಸಾಧ್ಯ. ಸಂಸ್ಕೃತಿಯ ಆಗರವಾಗಿರುವ ತಾಯಿಯ ಒಟ್ಟು ಬದುಕನ್ನು ಅನಾವರಣಗೊಳಿಸಿ ಹೆಣ್ಣಿನ ಮಹತ್ವವನ್ನು ಮನಗಾಣುವಂತೆ ಮಾಡಲಾಗುವುದು. ತಾಯ್ತನದ ವಾಸ್ತವ ಸಂಗತಿಗಳ ಮೂಲಕ ತನ್ನ ದೇಹದ ಮೇಲೆ ತನಗಿರುವ ಹಕ್ಕು , ಆಲೋಚನೆಗಳನ್ನು ಗುರುತಿಸಿಕೊಳ್ಳುವ ಬಗೆಬಗೆಯ ಕ್ರಮಗಳನ್ನು ವಿಭಿನ್ನ ನೆಲೆಯಲ್ಲಿ ಗುರುತಿಸುವ ಮೂಲಕ ಈ ನನ್ನ ಅಧ್ಯಯನ ಮಹತ್ವ ಪಡೆದುಕೊಂಡಿದೆ.

## ಅಧ್ಯಾಯನದ ವ್ಯಾಪ್ತಿ

ಅಧ್ಯಯನದ ಅನುಕೂಲಕ್ಕಾಗಿ ಆಯ್ದುಕೊಂಡ ವಿಷಯಕ್ಕೆ ಅನುಗುಣವಾಗಿ ವ್ಯಾಪ್ತಿಯನ್ನು ಗುರುತಿಸಿಕೊಳ್ಳುವುದು ಮುಖ್ಯವಾಗಿದೆ. 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ತಲೆಬರಹದ ಅಡಿಯಲ್ಲಿ ಕೈಗೊಳ್ಳುವ ಈ ಅಧ್ಯಯನ ಮಹಿಳೆಯ ಬದುಕಿಗೆ ಸಂಬಂಧಿಸಿದಂತಹದ್ದು. ಇಲ್ಲಿ ಮಹಿಳೆ ತಾಯಿಯಾಗಿ

ವಿಭಿನ್ನ ನೆಲೆಯಲ್ಲಿ ಗುರುತಿಸಲ್ಪಟ್ಟಿದ್ದಾಳೆ ಎಂಬುದನ್ನು ಅರಿತುಕೊಳ್ಳಲು ಪ್ರಯತ್ನಿಸಲಾಗಿದೆ. ತಾಯಿಯ ತಾಯ್ತನವನ್ನು ಜಾನಪದ ಸಾಹಿತ್ಯದಲ್ಲಿ ಹೇಗೆ ಮೂಡಿಬಂದಿದೆ ಎಂಬುದರ ಕುರಿತು ಈ ಅಧ್ಯಯನ ಚೌಕಟ್ಟನ್ನು ರೂಪಿಸಿಕೊಂಡಿದೆ ಜಾನಪದ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಅಧ್ಯಯನ ಮಾಡುವುದು ಹಾಗೂ ಅವುಗಳನ್ನು ತಾಯ್ತನದ ಗ್ರಹಿಕೆಗಳನ್ನು ಗುರುತಿಸುವುದು ಕಷ್ಟದ ಕೆಲಸ.

ಹೀಗಾಗಿ ಅಧ್ಯಯನದ ಅನುಕೂಲತೆಗಾಗಿ ಜಾನಪದ ಸಾಹಿತ್ಯ ಪ್ರಕಾರಗಳಾದ ಗೀತೆ, ಕಥನಗೀತೆ ಮತ್ತು ಗಾದೆಗಳನ್ನು ಮಾತ್ರ ಅಧ್ಯಯನಕ್ಕಾಗಿ ಆಯ್ದುಕೊಳ್ಳಲಾಗಿದೆ. ಏಕೆಂದರೆ ನಮ್ಮ ತಾಯಂದಿರ ಬದುಕು ಬವಣೆಗಳನ್ನು ಈ ಸಾಹಿತ್ಯ ಪ್ರಕಾರಗಳು ಹೆಚ್ಚು ಪ್ರಭಾವಿಸಿವೆ. ಗೀತೆ, ಕಥನಗೀತೆ ಹಾಗೂ ಕಾವ್ಯಾಂಗವೇ ಆಗಿರುವ ಗಾದೆಗಳು ನಮ್ಮ ಬದುಕನ್ನು ಪ್ರತಿಬಿಂಬಿಸಿವೆ. ಅದಕ್ಕಾಗಿ ತಾಯ್ತನದ ಕುರಿತು ಗ್ರಹಿಕೆಗಳನ್ನು ಗುರುತಿಸುವಾಗ ಇವುಗಳ ನೆಲೆಯಲ್ಲಿಯೆ ತಾಯ್ತನವನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಲಾಗಿದೆ.

ಇದಕ್ಕೆ ಪೂರಕವಾಗಿ ನಮ್ಮ ಸಂಸ್ಕೃತಿಯಲ್ಲಿ ನೆಲೆಗೊಂಡ ನಂಬಿಕೆ ಆಚರಣೆಗಳು ತಾಯ್ತನದ ಕುರಿತಂತೆ ಕಟ್ಟಿಕೊಡುವ ಗ್ರಹಿಕೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಸಾಮೂಹಿಕ ಹಾಗೂ ಸಾರ್ವತ್ರಿಕವೂ ಆದ ತಾಯ್ತನದ ಕುರಿತ ಅಧ್ಯಯನಕ್ಕೆ ಚೌಕಟ್ಟು ರೂಪಿಸಿಕೊಳ್ಳುವುದು ಅಸಾಧ್ಯವೇ ಸರಿ. ಆದರೂ ಸಹ ಅಧ್ಯಯನದ ಚೌಕಟ್ಟಿಗೆ ಒಳಪಡಲೇಬಾಕಾಗಿರುವುದರಿಂದ ಇದು ಅನಿವಾರ್ಯವೂ ಆಗಿದೆ. ತಾಯ್ತನವೆಂಬ ವಿಷಯ ಜಾಗತೀಕವಾಗಿರುವಂತೆ ಸ್ಥಳೀಯವೂ ಆಗಿದೆ. ಸಮಷ್ಟಿಗೆ ಸಂಬಂಧಿಸಿದಂತೆ ವ್ಯಕ್ತಿಗತವೂ ಆಗಿದೆ. ಅದಕ್ಕಾಗಿ ಪರಂಪರಾಗತವಾಗಿ ಮೂಡಿಬಂದ ಗ್ರಹಿಕೆಗಳು ಒಂದು ಕಡೆಯಾದರೆ ಅದನ್ನು ಮೀರಿ ಇನ್ನೋಂದು ಬಗೆಯ ಹೊಸ ಆಲೋಚನೆಗಳ ನೆಲೆಯಲ್ಲಿ ತಾಯ್ತನವನ್ನು ಗ್ರಹಿಸುವುದು ಮುಖ್ಯವಾಗಿದೆ. ಈ ನಿಟ್ಟಿನಲ್ಲಿ ತಾಯ್ತನದ ಕುರಿತ ಅಧ್ಯಯನವು ಒಂದೇ ನೆಲೆಯಲ್ಲಿ ನಿಂತು ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ.ಅದನ್ನು ಅಧ್ಯಯನದ ಶಿಸ್ತಿಗೆ ಒಳಪಡಿಸಿ ಸಂಕೀರ್ಣವಾದ ತಾಯ್ತನದ ಪರಿಕಲ್ಪನೆಯ ಸಮಚಿತ್ತದಿಂದ ಚಿತ್ರಣ ಬಿಡಿಸಿ ಕೊಡುವುದು ಮುಖ್ಯವಾಗಿದೆ. ಅಂಥಹ ಒಂದು ಚಿಕ್ಕ ಪ್ರಯತ್ನ ಇಲ್ಲಿ ಮಾಡಲಾಗಿದೆ.

ನಮ್ಮ ಸಮಾಜದಲ್ಲಿ ತಾಯ್ತನದ ಕುರಿತಂತೆ ಇರುವ ನಂಬಿಕೆ-ಆಚರಣೆಗಳು ಚಾಲ್ತಿಯಲ್ಲಿವೆ. ಅವು ತಾಯಿಯ ಸಂಬಂಧವನ್ನು ಹೇಗೆ ಪ್ರಭಾವಿಸಿವೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ತಾಯಿ ಒಂದು ಕುಟುಂಬದ, ಸಮಾಜದ ಹಾಗೂ ಸಂಸ್ಕೃತಿಯ ಪ್ರತಿನಿಧಿತ್ವವನ್ನು ವಹಿಸಿಕೊಂಡಿರುತ್ತಾಳೆ. ಇಂದು ಸಹ ತಾಯ್ತನದ ಜವಾಬ್ದಾರಿಗಳು ತುಂಬಾ ಸಂಕೀರ್ಣಗೊಂಡಿವೆ. ತಾಯಿಯ ತಾಯ್ತನ ಕಾರಣಾಂತರಗಳಿಂದ ಅದುಮಿ ಹೋಗುತ್ತಿದೆ. ಈ ಅದುಮಿವಿಕೆಯ ಬದುಕು ಆಕೆಗೆ ಅನಿವಾರ್ಯವಾಗಿದೆ. ಇಂತಹ ಅನಿವಾರ್ಯತೆಗಳು ಸಮಾಜದ ಮೇಲೆ ಹೇಗೆ ಪರಿಣಾಮ ಬೀರುತ್ತಿವೆ ಎಂದು ಚರ್ಚಿಸುವುದು ನನ್ನ ಅಧ್ಯಯನ ವ್ಯಾಪ್ತಿಗೆ ಒಳಗಾಗಿರುತ್ತದೆ.

ಇಂದೀನ ದಿನಮಾನಗಳಲ್ಲಿ ಹೆಣ್ಣು ತಾನು ಪಡೆದುಕೊಳ್ಳುತ್ತಿರುವ ಶಿಕ್ಷಣ, ಉದ್ಯೋಗ, ಸಾಮಾಜಿಕ ಜವಾಬ್ದಾರಿಗಳು ತಾಯ್ತನಕ್ಕೆ ಸವಾಲಾಗಿ ಪರಿಣಮಿಸಿವೆ. ದ್ವಂದ್ವ ಸ್ಥಿತಿಯಲ್ಲಿರುವ ತಾಯಿಯ

ದೈಹಿಕ ಹಾಗೂ ಮಾನಸಿಕ ಆರೋಗ್ಯ ಹದೆಗೆಡುತ್ತಿದೆ. ಈ ಹಿನ್ನೆಲೆಯಲ್ಲಿ ತಾಯಿಯ ಆರೋಗ್ಯದ ಸಮಾಲುಗಳನ್ನು ಸಹ ಇಲ್ಲಿ ಗುರುತಿಸಲಾಗಿದೆ.

ಒಟ್ಟಾರೆಯಾಗಿ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ವಿಷಯ ವ್ಯಾಪ್ತಿ ವಿಭಿನ್ನ ಹಾಗೂ ವಿಶಾಲವೂ ಆಗಿದೆ. ಮಹಿಳೆಯ ಬಹುಮುಖ್ಯ ಘಟ್ಟವಾದ ತಾಯಿಯಿಂದ ಹರಿದು ಬರುವ ತಾಯ್ತನ ಇದಕ್ಕೆ ಮಾತ್ರ ಸೀಮಿತವಾದ ಈ ನನ್ನ ಅಧ್ಯಯ ತನ್ನ ವ್ಯಾಪ್ತಿಯಲ್ಲಿ ಹಲವು ವಿಷಯಗಳನ್ನು ಸೇರಿಸಿಕೊಳ್ಳುವುದು ಅನಿವಾರ್ಯವಾಗಿದೆ. ಜಾನಪದ ಗೀತೆ, ಕಥನಗೀತೆ, ಗಾದೆಗಳಷ್ಟೇ ಅಲ್ಲದೆ. ಆಚರಣೆ, ನಂಬಿಕೆ, ಕಾನೂನು, ಸಹಕಾರದ ಯೋಜನೆಗಳು ಹೀಗೆ ಹತ್ತು ಹಲವು ಆಯಾಮಗಳಲ್ಲಿ ಚರ್ಚಿಸಿರುವುದು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.

ಇಲ್ಲಿ ತಾಯ್ತನದ ವಿಭಿನ್ನ ಗ್ರಹಿಕೆಗಳು ಎನ್ನುವಾಗ ವಿಭಿನ್ನ ಎಂಬುದರ ಮತ್ತು ಗ್ರಹಿಕೆ ಎಂಬುದರ ಕುರಿತು ನಾನು ತಿಳಿದುಕೊಂಡಿರುವ ಅರ್ಥದ ನೆಲೆಯಲ್ಲಿಯೇ ಈ ಅಧ್ಯಯನ ಸಾಗಿರುತ್ತದೆ. ಅದಕ್ಕಾಗಿ ವಿಭಿನ್ನ ಹಾಗೂ ಗ್ರಹಿಕೆಗಳು ಎಂಬುದರ ಕುರಿತು ನಾನು ತಿಳಿದುಕೊಂಡಿರುವ ಅರ್ಥ ಹೀಗಿದೆ. ವಿಭಿನ್ನ ಎಂದರೆ ವಿವಿಧ, ಅನೇಕ, ಬದಲಾದ ಎಂಬ ಅರ್ಥದಲ್ಲಿ ಬಳಸಲಾಗಿದೆ. ಗ್ರಹಿಕೆ ಎಂದರೆ ಅಭಿಪ್ರಾಯ, ಸ್ವೀಕರಿಸಲ್ಪಟ್ಟ, ತಿಳಿದುಕೊಂಡಿರುವ, ಅಂದುಕೊಂಡಿರುವ ಎಂಬ ಅರ್ಥದಲ್ಲಿ ಈ ಪದ ಸ್ವೀಕರಿಸಲಾಗಿದೆ. ಇದೇ ಅರ್ಥದಲ್ಲಿ ಈ ಪ್ರಭಂದದುದ್ದಕ್ಕೂ ಈ ಪದಗಳನ್ನು (ವಿಭಿನ್ನ-ಗ್ರಹಿಕೆಗಳು) ಬಳಸಲಾಗಿದೆ.

## ಅಧ್ಯಯನದ ಸ್ವರೂಪ

'ತಾಯ್ತನದ ವಿಭಿನ್ನ ಗ್ರಹಿಕೆಗಳು' ಕುರಿತ ಈ ನನ್ನ ಅಧ್ಯಯನಕ್ಕೆ ಪೂರಕವಾದ ನೆಲೆಯಲ್ಲಿ ಅದರ ಸ್ವರೂಪವನ್ನು ಏಳು ಅಧ್ಯಾಯಗಳಲ್ಲಿ ವಿವೇಚಿಸಲಾಗಿದೆ. ಅವುಗಳ ಸ್ವರೂಪ ಮುಂದಿನಂತಿರುತ್ತದೆ.

ಅಧ್ಯಾಯ:-1 : ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ, ವೈಧಾನಿಕತೆ, ಸ್ವರೂಪ ಈ ವರೆಗೆ ನಡೆದ ಅಧ್ಯಯನಗಳು

ಅಧ್ಯಾಯ:-2 : ತಾಯ್ತನದ ಅರ್ಥ ಮತ್ತು ಸ್ವರೂಪ

ಅಧ್ಯಾಯ:-3 : ಜನಪದ ಗೀತೆಗಳಲ್ಲಿನ ಗ್ರಹಿಕೆಗಳು

ಅಧ್ಯಾಯ:-4 : ಕಥನ ಗೀತೆಗಳಲ್ಲಿನ ಗ್ರಹಿಕೆಗಳು

ಅಧ್ಯಾಯ:-5 : ಗಾದೆಗಳಲ್ಲಿನ ಗ್ರಹಿಕೆಗಳು

ಅಧ್ಯಾಯ:-6 : ತಾಯ್ತನದ ಇಂದಿನ ಸ್ಥಿತಿ-ಗತಿ

ಅಧ್ಯಾಯ:-7 : ಸಮಾರೋಪ

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ಸ್ವರೂಪ, ವೈಧಾನಿಕತೆ ಹಾಗೂ ಈ ವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಎಂಬ ಉಪಶೀರ್ಷಿಕೆಗಳನ್ನು ವಿವರಿಸಲಾಗಿದೆ. ಇಲ್ಲಿ ನಾನು ಯಾವ ಬಗೆಯ ಅಧ್ಯಯನ ಕೈಗೊಂಡಿದ್ದೇನೆ ಎಂಬುದನ್ನು ಸ್ಪಷ್ಟಪಡಿಸಿದ್ದೇನೆ. ಅಧ್ಯಯನಕ್ಕೆ ಪೂರಕವಾದ ಆಲೋಚನ ಕ್ರಮವನ್ನು ಈ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ತಾಯ್ತನದ ಅರ್ಥ ಸ್ವರೂಪದ ಕುರಿತು ಇರುವ ಗ್ರಹಿಕೆಗಳನ್ನು ವಿವರಿಸಲಾಗಿದೆ. ಹಿಂದಿನಿಂದಲೂ ತಾಯ್ತನದ ಕುರಿತು ಸಮಾಜದ ನಿಲುವನ್ನು ಕೂಲಂಕುಶವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿನ ತಾಯ್ತನದ ನಿಲುವು ಹಾಗೂ ಪುರುಷಪ್ರಧಾನ ವ್ಯವಸ್ಥೆಯಲ್ಲಿನ ತಾಯ್ತನದ ವೈಭವೀಕರಣ ಮತ್ತು ಗೌರವದ ನಿಲುವು ಸಂಸ್ಕೃತಿಯಲ್ಲಿ ಮೂಡಿಬಂದ ಅಂದರೆ ನಂಬಿಕೆ, ಆಚರಣೆಗಳಲ್ಲಿ ತಾಯಿಯ ಸ್ಥಾನದ ಕುರಿತು ಚರ್ಚಿಸಲಾಗಿದೆ. ಆಧುನಿಕ ಪರಿಕಲ್ಪನೆಯಾದ ಸ್ತ್ರೀ ವಾದದ ದೃಷ್ಟಿಯಲ್ಲಿ ತಾಯ್ತನದ ನಿಲುವನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಜನಪದ ಗೀತ ಸಾಹಿತ್ಯದಲ್ಲಿ ದಾಖಲೆಗೊಂಡ ತಾಯಿಯ ಬದುಕು ಮುಖ್ಯವಾಗಿ ಎರಡು ನೆಲೆಯಲ್ಲಿ ಗುರುತಿಸಲಾಗಿದೆ. ಒಂದು ತವರುಮನೆಯನ್ನು ನೆನೆಸಿಕೊಳ್ಳುವುದು. ಇನ್ನೊಂದು ಗಂಡನ ಮನೆಯನ್ನು ತಾನು ಅನುಭವಿಸುತ್ತಿರುವ ಸುಂದರ ಹಾಗೂ ಯಾತನಾ ಪೂರ್ವವಾಗಿರುವ ಭಾವನೆಗಳನ್ನು ಹಾಡಿನ ಮೂಲಕ ವ್ಯಕ್ತಪಡಿಸಿರುವುದು. ಕೊಟ್ಟ ಮಗಳು ಕುಲಕ್ಕೆ ಹೊರಗಾಗಿ ಬದುಕಬೇಕಾಗುತ್ತದೆ. ಕುಲಕ್ಕೆ ಹೊರಗಾಗಿ, ಹೆಂಡತಿಯಾಗಿ, ಸೊಸೆಯಾಗಿ, ನಂತರ ತಾಯಿಯಾಗಿ ತನ್ನ ಅನುಭವಗಳನ್ನು ವ್ಯಕ್ತಪಡಿಸಿದ್ದಾಳೆ . ತಾಯಿಯ ಬದುಕಿನ ಬವಣೆ ಹೇಗೆ ಹಾಡಾಗಿ ಹೊರಹೊಮ್ಮಿದೆ ಇಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಜನಪದ ಕಥನಗೀತೆಗಳು ಸಾಮಾನ್ಯ ಜನರ ಅನುಭವದ ಪ್ರತೀಕವಾಗಿವೆ. ಜನಪದ ಸಾಹಿತ್ಯದ ಯಾವುದೇ ಪ್ರಕಾರ ತೆಗೆದುಕೊಂಡರು ಅವು ಮನುಷ್ಯನ ಸುತ್ತಲಿನ ಸಂಬಂಧಗಳನ್ನು ಅರಿಯಬಹುದಾಗಿ ಕಾಣುತ್ತದೆ. ತಾಯಂದಿರ ಬದುಕಿನ ರೀತಿ-ನೀತಿಗಳನ್ನು ಇವುಗಳಿಂದ ಅರಿಯಬಹುದಾಗಿ ಈ ಕಥನಗೀತೆಗಳು ಹೆಚ್ಚಾಗಿ ಸ್ತ್ರೀ ಕೇಂದ್ರೀತ ರಚನೆಗಳೇ ಆಗಿವೆ. ಮೇಲ್ನೋಟಕ್ಕೆ ಸುಂದರವಾಗಿ, ರೋಚಕತೆಯಿಂದ ಕೂಡಿದ ಇಲ್ಲಿನ ಕಥೆಗಳು ಪುರುಷ ಸಮಾಜದ ವ್ಯವಸ್ಥಿತ ಕ್ರೌರ್ಯವೇ ಇಲ್ಲಿ ಅಡಗಿದೆ ಎಂಬುದು ಇವುಗಳ ಎದೆ ಬಗೆದು ನೋಡಿದಾಗ ಗಮನಕ್ಕೆ ಬರುತ್ತದೆ. ನಮ್ಮ ಸಮಾಜ ತಾಯಂದಿರನ್ನು ಯಾವ - ಯಾವ ಬಗೆಗಳಲ್ಲಿ ಶೋಷಣೆಗೆ ಈಡು ಮಾಡಿದೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಬಂಜೆತನದ ಕ್ರೌರ್ಯ, ಗರ್ಭಿಣಿಯ ಹಿಂಸೆ, ತಾಯ್ತನದ ತ್ಯಾಗ, ಬಲಿದಾನಗಳ ನೆಲೆಯಲ್ಲಿ ಕಥನಗೀತೆಗಳನ್ನು ಗುರುತಿಸಲಾಗಿದೆ.

ಅಧ್ಯಾಯ ಐದರಲ್ಲಿ ಜನಪದ ಗಾದೆಗಳಲ್ಲಿನ ತಾಯ್ತನದ ಗ್ರಹಿಕೆಯ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಜನಪದ ಕಾವ್ಯಾಂಗವೆಂದೆ ಕರೆಯಿಸಿಕೊಳ್ಳುವ ಗಾದೆಗಳು ಜನರ ಬದುಕಿನ ವಾಸ್ತವ ಸಂಗತಿಗಳನ್ನು ಪ್ರತೀನಿಧಿಸುತ್ತವೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬಂತೆ, ಗಾದೆ

ಮಹಿಳೆಯರ ಗುಣ ಸ್ವಭಾವ ಬದುಕಿನ ರೀತಿ, ಆಲೋಚನ ಕ್ರಮಗಳನ್ನು ಪರಿಚಯಿಸುತ್ತವೆ. ಈ ಅಧ್ಯಾಯದಲ್ಲಿ ತಾಯಂದಿರ ಕುರಿತಂತೆ ಸೃಷ್ಟಿಗೊಂಡ ಗಾದೆಗಳ ವಿಶ್ಲೇಷಣೆ ಇಲ್ಲಿ ಮಾಡಲಾಗಿದೆ.

ಅಧ್ಯಾಯ ಆರರಲ್ಲಿ ತಾಯ್ತನದ ಆಧುನಿಕ ಸ್ಥಿತಿ-ಗತಿಗಳನ್ನು ವಿವರಿಸಲಾಗಿದೆ. ಇಪ್ಪತ್ತೊಂದನೆ ಶತಮಾನದಲ್ಲಿ ಕಾಲಿಟ್ಟ ನಮ್ಮ ತಾಯಂದಿರ ಸ್ಥಿತಿ-ಗತಿ ಗಮನಿಸಿದರೆ ನಿಜವಾಗಿ ಕ್ರೂರ ಸತ್ಯಗಳು ಎದುರಾಗುತ್ತವೆ. ಆಧುನಿಕ ಸಂದರ್ಭದಲ್ಲಿ ತಾಯಂದಿರ ಸ್ಥಿತಿ-ಗತಿಗಳು ಶಿಕ್ಷಣ ಮತ್ತು ಕಾನೂನುಗಳ ಮೂಲಕ ಬದಲಾವಣೆ ಹಂತ ತಲುಪಿವೆ. ಈ ಬದಲಾದ ಜಗತ್ತಿನಲ್ಲಿ ತಾಯಂದಿರು ಎದುರಿಸುವ ಹೊಸ ಬಗೆಯ ಸವಾಲುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ವಿವಾಹಪೂರ್ವ ತಾಯ್ತನ, ಒಂಟಿ ತಾಯ್ತನ, ಬಾಡಿಗೆ ತಾಯ್ತನಗಳಂಥ ಹೊಸ ಬಗೆಯ ಪರಿಕಲ್ಪನೆಯ ಮಧ್ಯ ತನ್ನ ಬದುಕನ್ನು ಹೇಗೆ ನಿರ್ವಹಿಸಿಕೊಂಡು ಬರುತ್ತಿದ್ದಾಳೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಏಳರಲ್ಲಿ ಅಧ್ಯಾಯದ ಒಟ್ಟು ಫಲಿತಗಳ ಕುರಿತು ಹೇಳಲಾಗಿದೆ. ನಾನು ನಡೆಸಿದ ಅಧ್ಯಯನದ ಒಟ್ಟು ಫಲವನ್ನು ಇಲ್ಲಿ ವಿವರವಾಗಿ ತಿಳಿಸಿಕೊಡಲಾಗಿದೆ. ಜೊತೆಗೆ ಮುಂಬರುವ ಸಂಶೋಧಕರು ತಾಯ್ತನದ ಕುರಿತಂತೆ ಯಾವ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಬಹುದು ಎಂಬುದನ್ನು ಹೇಳಲಾಗಿದೆ. ಅಂದರೆ ಅಧ್ಯಯನದ ಸಾಧ್ಯತೆಯ ಕುರಿತು ಚರ್ಚಿಸಲಾಗಿದೆ. ಕೊನೆಯಲ್ಲಿ ಅನುಬಂಧ ಕೊಡಲಾಗಿದೆ.

## ಅಧ್ಯಯನದ ವೈಧಾನಿಕತೆ

ಜಾನಪದ ನೆಲೆಯಲ್ಲಿ ತಾಯ್ತನದ ವಿಭಿನ್ನ ಗ್ರಹಿಕೆಗಳನ್ನು ಅಧ್ಯಯನ ಶಿಸ್ತಿಗೆ ಅಳವಡಿಸಲು ಈ ಮುಂದಿನ ವೈಧಾನಿಕತೆಯನ್ನು ಅನುಸರಿಸಲಾಗಿದೆ.

ಪ್ರಸ್ತುತ ಅಧ್ಯಯನ ವಿಷಯವು ಜಾನಪದ ಸಾಹಿತ್ಯ ಪ್ರಕಾರಗಳ (ಗೀತೆ, ಕಥನಗೀತೆ,ಗಾದೆ)ಗಳ ಮೂಲಕ ಆಕರಗಳನ್ನು ಬಳಸಿಕೊಂಡು ನಡೆಸಲಾಗಿದೆ. ಹೀಗಾಗಿ ತಾಯ್ತನದ ಕುರಿತಾದ ಜಾನಪದ ಸಾಹಿತ್ಯವನ್ನು ಅಧ್ಯಯನ ಮಾಡುವ ಪೂರ್ವದಲ್ಲಿ ಮಹಿಳೆಗೆ ಸಂಬಂಧಿಸಿದ ಜಾನಪದ ಸಾಹಿತ್ಯದ ಕೃತಿಗಳನ್ನು ಸಂಗ್ರಹಿಸುವುದು ಮುಖ್ಯವಾಗಿರುತ್ತದೆ. ಅದಕ್ಕಾಗಿ ಕ್ಷೇತ್ರಕಾರ್ಯದ ಮೂಲಕ ಗೀತ ಸಾಹಿತ್ಯ , ಕಥನ ಗೀತ ಸಾಹಿತ್ಯ ಮತ್ತು ಗಾದೆಗಳ ಕುರಿತಾದ ಕೃತಿಗಳನ್ನು ಸಂಗ್ರಹಿಸಲಾಯಿತು. ಕ್ಷೇತ್ರಕಾರ್ಯದ ವಿಧಾನವನ್ನು ಬಳಸಿಕೊಂಡು ಆಕರಗಳನ್ನು ಸಂಗ್ರಹಿಸಿಕೊಳ್ಳಲಾಯಿತು ಸಂಗ್ರಹಿಸಿದ ಈ ಕೃತಿಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಯಿತು.

ಪ್ರಸ್ತುತ ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸಲು ಕೌಟುಂಬಿಕವಾಗಿ ನಡೆಯುವ ವಿಶೇಷ ಸಾಂಸ್ಕೃತಿಕ ಸನ್ನಿವೇಶಗಳ ಸಂದರ್ಭದಲ್ಲಿ ಭೇಟಿ ನೀಡಿ ಕ್ಷೇತ್ರಕಾರ್ಯ ಕೈಗೊಂಡ ಮಾಹಿತಿ ಪಡೆದು ಸಂಶೋಧನೆಗೆ ಅಳವಡಿಸಿಕೊಳ್ಳಲಾಯಿತು. ಹುಟ್ಟು-ಸಾವು, ಮೈನೆರೆಯುವಿಕೆ, ಬಸಿರು-ಬಾಣತನ, ತೊಟ್ಟಿಲು ಹೀಗೆ ತಾಯ್ತನಕ್ಕೆ ಸಂಬಂಧಿಸಿದಂತೆ ಜರುಗುವ

ಆಚರಣೆಗಳನ್ನು ಗಮನಿಸಿ ಅದರ ಹಿಂದಿನ ವಾಸ್ತವ ವಿಷಯಗಳನ್ನು ಅರಿತುಕೊಳ್ಳಲಾಯಿತು. ಇದು ಸಂಶೋಧನೆಗೆ ಪೂರಕವಾಗಿ ವಿಷಯ ಕಟ್ಟಿಕೊಡಲು ಸಹಕಾರಿಯಾಯಿತು.

ಮಾಹಿತಿಯನ್ನು ಸಂಗ್ರಹಿಸುವಲ್ಲಿ ಸಂದರ್ಶನ, ಸಂವಾದಗಳನ್ನು ನಡೆಸಲಾಯಿತು. ಸಂವಾದ ಹಾಗೂ ಚರ್ಚೆಯ ಸಂದರ್ಭದಲ್ಲಿ ಪ್ರಶ್ನಾವಳಿಯನ್ನು ಬಳಸಿಕೊಳ್ಳಲಾಯಿತು.ವಿದ್ವಾಂಸರನ್ನು, ಮಹಿಳೆಯನ್ನು, ಜಾನಪದ ಕಲಾವಿದರನ್ನು, ವಕ್ತೃಗಳೊಂದಿಗೆ ಚರ್ಚೆ ನಡೆಸಲಾಗಿದೆ. ಈ ಮೂಲಕ ಸಂಶೋಧನೆಗೆ ಪೂರಕವಾದ ಅಂಶಗಳನ್ನು ಪಡೆದುಕೊಳ್ಳಲಾಯಿತು. ಇದು ನನ್ನ ಅಧ್ಯಯನದ ವೈಧಾನಿಕತೆಯೇ ಆಗಿದೆ.

ಸಂಗ್ರಹಿಸಿದ ಮಾಹಿತಿ, ಪ್ರಮುಖ ಜಾನಪದ ಗೀತೆಗಳ ಸಂಗ್ರಹಗಳ ಮೂಲಕ ವಿಶ್ಲೇಷಣೆ ಕೈಗೊಂಡು ವ್ಯಾಖ್ಯಾನಾತ್ಮಕ ನೆಲೆಯಲ್ಲಿ ವಿವರಿಸಲಾಗಿದೆ. ಪುರುಷರಿಂದ ಸಂಗ್ರಹಿಸಲ್ಪಟ್ಟ ಕೃತಿಗಳನ್ನು ಅಷ್ಟೇ ಅಲ್ಲ ಮಹಿಳಾ ಸಂಗ್ರಹಕಾರರ ಕೃತಿಗಳನ್ನು ಸಹ ಇಲ್ಲಿ ಬಳಸಿಕೊಳ್ಳಲಾಗಿದೆ. ಇವುಗಳ ಆಧಾರದಿಂದ ಸಂಶೋಧನೆ ಮುಂದುವರೆಸಲಾಗಿದೆ.

ಪ್ರಸ್ತುತ ಅಧ್ಯಯನವು ಮಹಿಳೆಗೆ ಸಂಬಂಧಿಸಿದ್ದಾದರೂ ಇಲ್ಲಿ ತಾಯಿಯನ್ನೇ ಕೇಂದ್ರವಾಗಿಸಿಕೊಂಡಿದೆ. ಈಗಾಗಲೇ ಸಂಗ್ರಹಿತವಾದ ತಾಯ್ತನಕ್ಕೆ ಸಂಬಂಧಿಸಿದ ಜನಪದ ಸಾಹಿತ್ಯವನ್ನು, ಕೆಲವು ಆಚರಣೆಗಳ ಮಾಹಿತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳನ್ನು, ಲೇಖನಗಳನ್ನು, ಪತ್ರಿಕೆಗಳಿಂದ ಮಾಹಿತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಅಂದರೆ ಈ ನನ್ನ ಅಧ್ಯಯನದಲ್ಲಿ ಲಿಖಿತ - ಅಲಿಖಿತ, ಪ್ರಕಟಿತ - ಅಪ್ರಕಟಿತ, ಪ್ರಾಥಾಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಈ ಅಧ್ಯಯನವು ಸ್ತ್ರೀ ನಿಷ್ಠ ನೆಲೆಯಲ್ಲಿ ಕೈಗೊಂಡಿದೆ. ಇದು ಈ ನನ್ನ ಅಧ್ಯಯನದ ವೈಶಿಷ್ಟ್ಯತೆಯೂ ಆಗಿದೆ. ಜಾನಪದ ಕ್ಷೇತ್ರ ಬಹು ವಿಶಾಲವೂ ವ್ಯಾಪಕವೂ ಆಗಿರುವುದರಿಂದ , ಹಲವು ವಿಷಯಗಳನ್ನು ತನ್ನ ತೆಕ್ಕೆಯಲ್ಲಿ ಇಟ್ಟುಕೊಂಡಿದೆ. ಅದರಲ್ಲಿ ತಾಯ್ತನಕ್ಕೆ ಸಂಬಂಧಿಸಿದಂತೆ ವಿಷಯಗಳನ್ನು ಕ್ರೂಢಿಕರಿಸಲು ಬೇಕಾಗಿರುವ ಹಲವು ವಿಧಾನಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಆ ಮೂಲಕವಾಗಿ ಪ್ರಸ್ತುತ ಅಧ್ಯಯನದ ವೈಧಾನಿಕತೆಯನ್ನು ಗುರುತಿಸಿ ಪ್ರಬಂಧವನ್ನು ರಚಿಸಲಾಗಿದೆ.

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಜಾನಪದ ಕ್ಷೇತ್ರದಲ್ಲಿ ತಾಯ್ತನಕ್ಕೆ ಸಂಬಂಧಿಸಿದಂತೆ ವಿಸ್ತೃತ ನೆಲೆಯಲ್ಲಿ ಅಧ್ಯಯನಗಳು ನಡೆದದ್ದು ಕಡಿಮೆ ಎಂದೆ ಹೇಳಬಹುದು. ಮಾತೃದೇವತಾ ಆರಾಧನೆ ಕುರಿತು ಸಂಶೋಧನೆ ಕೈಗೊಂಡ ಕಲವೀರ ಮನ್ವಾಚಾರರು 'ಕನ್ನಡದಲ್ಲಿ ಮಾತೃದೇವತೆಯ ಕುರಿತ ಅಧ್ಯಯನಗಳು ಇಲ್ಲವೇ ಇಲ್ಲ ಎಂದು ಹೇಳಬಹುದು 'ಎಂದಿದ್ದಾರೆ. ಮಾತೃತ್ವ ಕುರಿತು ಕನ್ನಡದಲ್ಲಿ ಹೇಳಿಕೊಳ್ಳುವ ರೀತಿಯಲ್ಲಿ ಅಧ್ಯಯನಗಳು ನಡೆದಿಲ್ಲ. ತಾಯ್ತನಕ್ಕೆ ಸಂಬಂಧಿಸಿದಂತೆ ಹಲವು ವಿಷಯಗಳು

ಸಂದರ್ಭಕ್ಕನುಗುಣವಾಗಿ ಚರ್ಚೆಗೊಂಡಿದ್ದು ಗಮನಿಸಬಹುದು. ೧೯೩೧ ರಲ್ಲಿ ಪ್ರಕಟಗೊಂಡ 'ಗರತಿ ಹಾಡು' ತ್ರಿಪದಿಗಳ ಸಂಗ್ರಹದ ಪರಿಚಯಕೊಡುತ್ತ ಜನಪದ ಹೆಣ್ಣುಮಗಳು ತಾಯಿಯಾಗಿ ತನ್ನ ತಾಯ್ತನವನ್ನು ಹಾಡಿನ ಮೂಲಕ ಹೇಗೆ ವ್ಯಕ್ತಪಡಿಸಿದ್ದಾಳೆ ಎಂಬುದನ್ನು ದ.ರಾ. ಬೇಂದ್ರೆಯವರು ಹೀಗೆ ಹೇಳಿದ್ದಾರೆ. ಈ ಗರತಿಯ ಹಾಡಿನಲ್ಲಿ ಬೀಸುವ ಕಲ್ಲಿನ ಪದಗಳೂ ಮಕ್ಕಳ ಲಾಲಿಗಳೂ ಇವೆ. ಮಕ್ಕಳು ಎಂದರೆ ಸಾಕು ಹೆಣ್ಮಕ್ಕಳಿಗೆ ಬಲು ಮುದ್ದು. ನಮ್ಮ ಮಕ್ಕಳು ನಿಮ್ಮ ಮಕ್ಕಳು ಎಂಬ ಭೇಧಭಾವನೆಗೆ ಅಲ್ಲಿ ಎಡೆಯಿಲ್ಲ. ವಿಷ್ಣುವಿನ ಲೋಕ ಪಾಲನ ಶಕ್ತಿಯೇ ಮೂರ್ತಿ ಗೊಂಡು ಬಂದವಳಲ್ಲವೇ ಅವಳಿಗೆ? ತಾಯಿಯ ಮೊಲೆಯು ಕ್ಷೀರಸಾಗರದ ನೆಲೆಯಲ್ಲವೆ ? ಅವಳಿಗೆ ಮಕ್ಕಳ ಆಟನೋಟ, ಮಾತುಕಥೆ, ನಗೆ ನಡೆ ಎಂದರೆ ಹಿರಿಹಿಗ್ಗು, ತೀರ ಹುಚ್ಚು. ಮಕ್ಕಳಿಗೆ ಆ ಹಾಡಿನ ಮಾತು ತಿಳಿಯಲಿ ಬಿಡಲಿ, ಸಾಮಾನ್ಯವಾಗಿ ತಾಯಿಯು ತನ್ನ ದು:ಖವನ್ನು ನುಂಗಿ ತನ್ನ ಸುಖವನ್ನೇ ನೆನೆಸಿ ಹಾಡುವಳು. ಯಾಕೆಂದರೆ ತಾಯಿಯ ಧ್ವನಿಯಿಂದಲೇ, ಅವಳ ಮುಖಮುದ್ರೆ, ದೃಷ್ಠಿಗಳಿಂದಲೇ ಕೂಸು ಹಾಡಿನ ಹುರುಳನ್ನು ಹೀರಿಕೊಳ್ಳುವುದು. ಆದರೂ ತಿಳಿದೋ ತಿಳಿಯದೆಯೋ ಒಮ್ಮೊಮ್ಮೆ ತನ್ನ ದು:ಖವನ್ನು ಕೂಡ ತಾಯಿಯು ಕೂಸಿನಿಂದ ಸಮಾಧಾನವನ್ನಿಯಲೂ, ಅದನ್ನು ಹಾಡಿಹರಸಲೂ ಅದನ್ನು ಕಂಡು ನಲಿದುಲಿಯಲೂ ಲಾಲಿಗಳ ಜನ್ಮವಾಗಿದೆ ಎಂದು ಮಾರ್ಮಿಕವಾಗಿ ಹೇಳಿದ್ದಾರೆ.

ಮೂವತ್ತರ ದಶಕದಲ್ಲಿ ಪ್ರಕಟಗೊಂಡ ಇನ್ನೊಂದು ಜನಪ್ರೀಯ ಗೀತ ಸಂಕಲನವಾದ 'ಮಲ್ಲಿಗೆ ದಂಡೆ' ಇದನ್ನು ಕಾಪಸೆ ರೇವಪ್ಪನವರು ಸಂಗ್ರಹಿಸಿದ್ದಾರೆ. ಇದರಲ್ಲೂ ಸಹ ಜನಪದ ಮಹಿಳೆಯರು ತಲೆಮಾರುಗಳಿಂದ ಸೃಷ್ಠಿಸಿಕೊಂಡು ಬಂದ ಬದುಕಿನ ಬವಣೆಗಳನ್ನು ವ್ಯಕ್ತಪಡಿಸಿದ್ದಾರೆ. ತಾಯ್ತನದ ಕುರಿತಂತೆ. ಇಲ್ಲಿ ಹಲವು ಹಾಡುಗಳು ಸಂಗ್ರಹಗೊಂಡಿವೆ. ಮಳೀ ಹಾಡು, ಬರದ ಹಾಡು, ಕೂಸು ಒಪ್ಪಿಸುವ ಹಾಡು, ಕುಬಸಾ ಮಾಡೋ ಹಾಡು, ಬಯಕೆಯ ಹಾಡು, ಬೇನೆ ತಿನ್ನುವ ಹಾಡು, ತೊಟ್ಟಿಲಲ್ಲಿ ಹಾಕುವ ಹಾಡು ಹೀಗೆ ಮುಂತಾದ ಹಾಡುಗಳು ತಾಯ್ತನದ ಕುರಿತಂತೆ ಸಂಗ್ರಹಿಸಿದ್ದಾರೆ. ಈ ಸಂಗ್ರಹ ಮುಖ್ಯವಾಗಿ ತಾಯ್ತನದ ಹಾಡುಗಳನ್ನು ಕೇಂದ್ರವಾಗಿಟ್ಟುಕೊಂಡು ಸಂಗ್ರಹ ಮಾಡಿಲ್ಲವಾದರು, ಸಂದರ್ಭಕ್ಕನುಗುಣವಾಗಿ ಅನೇಕ ಹಾಡುಗಳು ತಾಯ್ತನದ ಕುರಿತಂತೆ ಆಕರವನ್ನು ಒದಗಿಸುತ್ತವೆ.

೧೯೩೦ರ ಸಂದರ್ಭದಲ್ಲಿ ಜಾನಪದ ಎಂದರೆ ಜನಪದ ಗೀತೆಗಳೇ ಎಂಬಷ್ಟು ಗೀತೆಗಳು ಜನಪ್ರೀಯತೆ ಪಡೆದವು. ಪ್ರಾರಂಭದಲ್ಲಿ ಜನಪದ ಸಾಹಿತ್ಯದ ಅಧ್ಯಯನ ಪ್ರಾರಂಭವಾದದ್ದು ಸಂಗ್ರಹಗಳಿಂದಲೇ. ಈ ಮೂಲಕ ಜನಪದ ಸಾಹಿತ್ಯದ ಕಡೆಗೆ ಹಲವು ವಿದ್ವಾಂಸರು ತಮ್ಮ ಚಿತ್ತವನ್ನು ಹರಿಸಿದರು.

ಈ ಹಿನ್ನೆಲೆಯಲ್ಲಿ ಜನಪದ ಸಾಹಿತ್ಯದ ಕುರಿತು ಕೈಗೊಳ್ಳಬೇಕೆಂದು ಮುಂದಾದವರಲ್ಲಿ ಡಾ.ಬಿ.ಎಸ್. ಗದ್ದಗೀಮಠ ಇವರು ಸಂಶೋಧನ ಅಧ್ಯಯನ ಶಿಸ್ತಿನಿಂದ ಕೂಡಿದ ಅನೇಕ ಸಂಗ್ರಹಗಳು ಪ್ರಕಟಿಸಿದ್ದಷ್ಟೇ ಅಲ್ಲ . ಕನ್ನಡ ಜಾನಪದ ಕ್ಷೇತ್ರದಲ್ಲಿ ಕೆಲಸಮಾಡಿ ಡಾಕ್ಟರೇಟ್ ಪದವಿ ಪಡೆದ ಪ್ರಥಮರು ಆಗಿದ್ದಾರೆ. 'ಕನ್ನಡ ಜಾನಪದ ಗೀತೆಗಳು' ಎಂಬ ಮಹಾಪ್ರಬಂಧ ಇವರಿಗೆ ಡಾಕ್ಟರೇಟ್ ಪದವಿ ತಂದು ಕೊಟ್ಟಿತ್ತು. ಈ ಪ್ರಬಂಧದಲ್ಲಿ ತಾಯಂದಿರ ಕುರಿತು ಇರುವ ಹಲವು

ಹಾಡುಗಳನ್ನು ವಿವರಿಸಿದ್ದಾರೆ. ಭಾವನಾ ಪ್ರಧಾನವಾದ ತಾಯ್ತನದ ಕುರಿತು ಸಾಂಧರ್ಭಿಕವಾಗಿ ಚರ್ಚಿಸಿದ್ದಾರೆ.

೧೯೬೪ ರಲ್ಲಿ ಡಾ. ಅನುಪಮಾ ನಿರಂಜನ ಅವರು 'ತಾಯಿ-ಮಗು' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಆದರೆ ಈ ಕೃತಿ ಜಾನಪದ ಸಾಹಿತ್ಯದ ನೆಲೆಯಲ್ಲಿ ಮೂಡಿಬಂದದ್ದಲ್ಲ ಬದಲಾಗಿ ಆಧುನಿಕ ವೈದ್ಯಕೀಯ ವಿಜ್ಞಾನದ ನೆಲೆಯಲ್ಲಿ ಮೂಡಿಬಂದಿದ್ದಾಗಿದೆ. ಇದು ಗರ್ಭಿಣಿ ತಾಯಂದಿರಿಂದ ಹಿಡಿದು ಮಕ್ಕಳು ಎರಡು ಮೂರು ವರ್ಷದವರಾಗುವ ವರೆಗೆ ಆರೈಕೆಯ ಬಗ್ಗೆ ವೈಜ್ಞಾನಿಕ ನೆಲೆಯಲ್ಲಿ ವಿವರಿಸಲಾಗಿದೆ. ಇದು ತಾಯಂದಿರಿಗೆ ಕೈಪಿಡಿಯೇ ಆಗಿದ್ದು, ಮೂವತ್ತೆರಡಕ್ಕಿಂತಲೂ ಹೆಚ್ಚು ಮುದ್ರಣ ಕಂಡಿದೆ. ಇಂತಹ ಹಲವು ಕೃತಿಗಳ ವೈದ್ಯಲೋಕದಲ್ಲಿ ಪ್ರಕಟಗೊಂಡಿವೆ.

೧೯೭೯ ರಲ್ಲಿ ಪ್ರಕಟವಾದ ಕೃತಿ 'ತಾಯಿ - ಮಗು' ಎಂಬ ಶೀರ್ಷಿಕೆಯನ್ನೇ ಹೊಂದಿದ್ದು ಇದರ ಲೇಖಕರು ಬಿ. ವಾಯ್. ಕೌಜಲಗಿ ಈ ಕೃತಿ ಮಾತ್ರ ಅಪ್ಪಟ ಜಾನಪದದ ನೆಲೆಯಲ್ಲಿ ತಾಯ್ತನವನ್ನು ವಿಶ್ಲೇಷಿಸಿದ್ದಾಗಿದೆ.ಈ ಕೃತಿಯಲ್ಲಿ ಲೇಖಕರೇ ಹೇಳುವ ಹಾಗೆ ಕೌಟುಂಬಿಕ ಜೀವನದಲ್ಲಿ ತಂದೆ-ತಾಯಿಗಳ ಪಾತ್ರ ಪ್ರಧಾನವಾಗಿದೆ. ಮಕ್ಕಳನ್ನು ಪಾಲನೆ-ಪೋಷಣೆ ಮಾಡಿ ಅವರ ಶೀಲ ಚಾರಿತ್ರ್ಯವನ್ನು ಕಾಪಾಡಿಕೊಂಡು ಬರುವುದು ಹೆತ್ತವರ ಆದ್ಯ ಕರ್ತವ್ಯವಾಗಿದೆ. ಹೆತ್ತವರು ಮಕ್ಕಳನ್ನು ಪ್ರೀತಿ - ವಾತ್ಸಲ್ಯಗಳಿಂದ ಜೋಪಾನ ಮಾಡುತ್ತಾರೆ ಮತ್ತು ಅವರನ್ನು ಸ್ವತಂತ್ರ ಜೀವನದ ಹೊಸ್ತಿಲ ತನಕ ತಂದು ಮುಟ್ಟಿಸುತ್ತಾರೆ. ಮಗುವಿನ ಬೆಳವಣಿಗೆ ಸುಧೀರ್ಘ ವಾದುದು. ಆ ಕಾಲಾವಧಿಯಲ್ಲಿ ಹೆತ್ತಮ್ಮನ ಕಷ್ಟ - ನಷ್ಟಗಳು ವಿಪರೀತ. ಅವೆಲ್ಲವನ್ನು ಅವಳು ಮೌನವಾಗಿ ನುಂಗಿಕೊಳ್ಳುತ್ತಾಳೆ. ಜಾನಪದ ಕೃತಿಗಳನ್ನು ಆಧರಿಸಿ 'ತಾಯಿ - ಮಗು' ಈ ಪುಟ್ಟ ಪುಸ್ತಕದಲ್ಲಿ ಅವೆಲ್ಲವನ್ನು ನಿರೂಪಿಸಲು ಪ್ರಯತ್ನಿಸಲಾಗಿದೆ ' ಎಂದಿದ್ದಾರೆ.

ಈ ಕೃತಿ ತಾಯ್ತನದ ಕುರಿತಂತೆ ಹಲವು ವಿಷಯಗಳನ್ನು ಸಂಶೋಧನ ದೃಷ್ಟಿಯಿಂದ ವಿಶ್ಲೇಷಿಸಿದ್ದಾರೆ. ಆದರೆ ಈ ಕೃತಿ ವೈಭವೀಕರಣದ ನೆಲೆಯಲ್ಲಿ ರೂಪು ಪಡೆದಂತೆ ತೋರುತ್ತದೆ. ಆದರೂ ತಾಯ್ತನವನ್ನು ಮಾರ್ಮಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಿ ಲೇಖಕರು ಯಶಸ್ವಿಯಾಗಿದ್ದಾರೆಂದರೆ ತಪ್ಪಾಗಲಾರದು. ತಾಯಿಯ ಕುರಿತಂತೆ ಜಾನಪದದ ಅದರಲ್ಲೂ ಗೀತೆಗಳ ನೆಲೆಯಲ್ಲಿ ರಚಿಸಿದ ಈ ಕೃತಿ ಪ್ರಮುಖವಾಗಿದೆ.

೨೦೦೯ ರಲ್ಲಿ ರಾಜಶ್ರೀಯವರಿಂದ 'ತಾಯಿ' ಎಂಬ ಕೃತಿ ಪ್ರಕಟಗೊಂಡಿದೆ. ಇದು ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧವಾಗಿದೆ. ಈ ಕೃತಿ ಮೂಲತ: ಚಂದ್ರಶೇಖರ ಕಂಬಾರರ ಕಾದಂಬರಿಗಳಲ್ಲಿ ತಾಯಿ ಸಂಸ್ಕೃತಿಯ ಪ್ರಾತಿನಿಧ್ಯ ಕುರಿತಾದದಾಗಿದೆ. ಇದು ಅಧ್ಯಯನದ ಚೌಕಟ್ಟು ಆಗಿದೆ. ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಾದಂಬರಿ ಅದರಲ್ಲೂ ಖ್ಯಾತ ಕಾದಂಬರಿಕಾರರಾದ ಡಾ. ಚಂದ್ರಶೇಖರ ಕಂಬಾರರ ಕಾದಂಬರಿಯಲ್ಲಿ ತಾಯಿ ಸಂಸ್ಕೃತಿಯನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಯನದಲ್ಲಿ ಕಾದಂಬರಿಗಳಲ್ಲಿ ತಾಯ್ತನದ ನೆಲೆಗಳನ್ನು ಗುರುತಿಸಲಾಗಿದೆ.

೨೦೦೨ ರಲ್ಲಿ ಶ್ರೀ ಕಲವೀರ ಮಣಾಚಾರ ಇವರು ಮಾತೃ ದೇವತಾ ಆರಾಧನೆ ಉಗಮ ಮತ್ತು ವಿಕಾಸ ಎಂಬ ಶೀರ್ಷಿಕೆ ಅಡಿಯಲ್ಲಿ ಮಹಾ ಪ್ರಬಂಧವನ್ನು ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಹಂಪಿ ವಿ.ವಿದ್ಯಾಲಯ ಸಲ್ಲಿಸಲಾಗಿದೆ. ಈ ಅಧ್ಯಯನದಲ್ಲಿ ಮಾತೆಯರು ಮಾನ್ಯರಾಗಿದ್ದಾಗಿನ ಕಾಲದ ಕುರುಹುಗಳನ್ನು ಹುಡುಕಿಕೊಂಡು ಮಾತೃ ದೇವತೆಯ ಆರಾಧನೆಯ ಕುರಿತು ವಿಶ್ಲೇಷಿಸಲಾಗಿದೆ. ಇಲ್ಲಿ ಪ್ರಾಕ್ಚಾರಿತ್ರಿಕ ಕಾಲ, ಹರಪ್ಪ ಸಂಸ್ಕೃತಿ, ವೇದ ಕಾಲ ಹಾಗೂ ಜನಪದ ದೈವಗಳ ಮೂಲಕ ಮಾತೃ ಆರಾಧನೆಯ ಉಗಮ ವಿಕಾಸದ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಹೀಗೆ ತಾಯ್ತನಕ್ಕೆ ಸಂಬಂಧಿಸಿದಂತೆ ಪ್ರಾರಂಭದಲ್ಲಿ ಜಾನಪದ ಸಂಗ್ರಹದ ನೆಲೆಯಲ್ಲಿ ನಂತರ ಜಾನಪದ ಗೀತೆಗಳಲ್ಲಿನ ವಿಷಯ ಕುರಿತು ಸಾಂಧರ್ಭಿಕವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ನಂತರ ತಾಯಿಯನ್ನು ಬೇರೆ ಬೇರೆ ನೆಲೆಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಎಲ್ಲ ಅಧ್ಯಯನಗಳಲ್ಲಿ ತಾಯ್ತನದ ಬದುಕು ಅಲ್ಲಲ್ಲಿ ಚದುರಿ ಹೋದಂತೆ ತೋರುತ್ತದೆ. ತಾಯ್ತನದ ಕುರಿತಂತೆ ಜಾನಪದದ ನೆಲೆಯಲ್ಲಿ ಪೂರ್ಣ ಪ್ರಮಾಣದ ಅಧ್ಯಯನಗಳು ನಡೆದಿಲ್ಲ. ಆನಿಟ್ಟಿನಲ್ಲಿ 'ತಾಯ್ತನದ ವಿಭಿನ್ನ ಗ್ರಹಿಕೆಗಳು' ಎಂಬ ಈ ನನ್ನ ಅಧ್ಯಯನ ಒಂದು ಚಿಕ್ಕ ಪ್ರಯತ್ನ ವೆಂದು ಹೇಳಬಹುದು.

## ಅಧ್ಯಾಯ:-2 ತಾಯ್ತನದ ಅರ್ಥ ಮತ್ತು ಸ್ವರೂಪ

- ಮಾತೃಪ್ರಧಾನ ವ್ಯವಸ್ಥೆ
- ಪಿತೃಪ್ರಧಾನ ವ್ಯವಸ್ಥೆ
- ಸಂಸ್ಕೃತಿಯಲ್ಲಿನ ಮಹತ್ವದ ಗ್ರಹಿಕೆಗಳು ನಂಬಿಕೆ, ಆಚರಣೆಗಳು
- ಸ್ತ್ರೀವಾದಿ ಚಿಂತನೆಗಳು.

## ಅಧ್ಯಾಯ-2

## ತಾಯ್ತನದ ಅರ್ಥ ಮತ್ತು ಸ್ವರೂಪ

ತಾಯ್ತನದ ಕುರಿತಾದ ಅರ್ಥ ಶಾಬ್ದಿಕ ರೂಪದಲ್ಲಿ ಬಹು ಸರಳವಾಗಿ ಕಂಡು ಬರುವ ಹಾಗೂ ಪ್ರತಿಯೊಬ್ಬನಿಗೂ ವಾತ್ಸಲ್ಯದ ಅಹ್ಲಾದ ಕೊಡುವ ನವುರಾದ ಒಂದು ಶಬ್ಧ. ಪ್ರೀತಿ, ಮಮತೆ, ವಾತ್ಸಲ್ಯ, ಕರುಣೆಗಳಂತಹ ಭಾವವನ್ನು ಧಾರೆ ಎರೆಯುವ ಜೀವಿಯನ್ನು 'ತಾಯಿ' ಎಂದು ಸಾಮಾನ್ಯವಾಗಿ ಗ್ರಹಿಸಲಾಗಿದೆ. ತಾಯಿಯಲ್ಲಿ ಇರುವ ನಾನಾ ರೀತಿಯ ಪೋಷಕ ಮತ್ತು ಪಾಲಕ ಗುಣಗಳನ್ನು ತಾಯ್ತನವೆಂದು ವ್ಯಾಖ್ಯಾನಿಸಬಹುದು. ತಾಯಿ, ತಾಯ್ತನದ ಅರ್ಥ ಶಬ್ದ ಕೋಶದಲ್ಲಿ ಹುಡುಕಿ ಹೆಕ್ಕಿ ತೆಗೆಯುವ ಸೀಮಿತವಾದ ಅರ್ಥವನ್ನು ಒಳಗೊಳ್ಳದೆ. ಮಾನವ ಬದುಕಿನ ಅಸ್ತಿತ್ವದ ನೆಲೆಯಾಗಿ ಈ ತಾಯ್ತನದ ಅರ್ಥವನ್ನು ಗ್ರಹಿಸುವುದು ಮುಖ್ಯವಾಗಿದೆ. ತಾಯಿ ಹಾಗೂ ತಾಯ್ತನ ಎಂಬ ಶಬ್ದಗಳು ತನ್ನಲ್ಲಿ ಭಾವನಾ ಪ್ರಧಾನವಾದ ಹಲವು ಒಳ ಅರ್ಥಗಳನ್ನು ಒಳಗೊಂಡಿವೆ. ತಾಯಿ ಎಂದರೆ ಯಾರು? ತಾಯ್ತನವೆಂದರೆ ಏನು? ಎಂಬ ಪ್ರಶ್ನೇಗಳು ಮೇಲ್ನೋಟಕ್ಕೆ ಸರಳವಾಗಿ ಕಂಡರೂ ತನ್ನೊಳಗೆ ಸುಧೀರ್ಘವಾದ ವಿಶ್ಲೇಷಣೆಯನ್ನು ಬಯಸುತ್ತದೆ.

ತಾಯಿ, ಅವ್ವ, ಅಮ್ಮ, ಅಬ್ಬೆ, ಮಾತೆ, ಜನನಿ ವಿವಿಧ ಶಬ್ದಗಳು ಒಂದೇ ಭಾವ ಮತ್ತು ಭಾವುಕತೆಯನ್ನು ಅಭಿವ್ಯಕ್ತಿಸುತ್ತವೆ. ಈ ಶಬ್ದಗಳಿಗೆ ಮೌಲಿಕವಾದ ಅರ್ಥವಿದೆ. ಕೌಟುಂಬಿಕ, ಸಾಮಾಜಿಕ ನೆಲೆಯಲ್ಲಿ ತಾಯಿ ಹಾಗೂ ತಾಯ್ತನಕ್ಕೆ ಬಹು ಮಹತ್ವವಿದೆ. ಹೆಣ್ಣು ಹೆಣ್ತನ, ತಾಯಿ ತಾಯ್ತನದ ಮೂಲಕ ನಮ್ಮ ಪರಂಪರೆಯಲ್ಲಿ ಆಕೆಗೆ ವಿಶೇಷ ಸ್ಥಾನವಿದೆ, ಜೊತೆಗೆ ಹೆಣ್ಣಿನ ಶೋಷಣೆಯು ಈ ಮೂಲಕ ನಡೆದಿದೆ. ಸಮಾಜದ ಮೂಲ ಘಟಕವಾಗಿರುವ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವವಳು, ಗಂಡ, ಮಕ್ಕಳು ಮನೆಯನ್ನೊಳಗೊಂಡು ಸಂಸಾರದ ನೋಗ ಹೊತ್ತವಳು 'ತಾಯಿ' ಎಂದು ಅರ್ಥೈಯಿಸಿಕೊಳ್ಳಬಹುದು ಇಲ್ಲಿ ತಾಯಿ ಎಂಬುದಕ್ಕೆ ಮಕ್ಕಳ ತಾಯಿ ಅಷ್ಟೇ ಅಲ್ಲ ಕುಟುಂಬದ ಒಟ್ಟು ಜವಾಬ್ದರಿ ವಹಿಸಿಕೊಂಡವಳು ಎಂಬ ರೀತಿಯಲ್ಲೆ ಸಾಮಾನ್ಯ ಅರ್ಥದಲ್ಲಿ ಗ್ರಹಿಸಲಾಗಿದೆ.

ಒಂದು ಸಂಸ್ಕೃತಿಯ ಆಗರವಾದ ತಾಯಿ ಮತ್ತು ಆಕೆಯ ತಾಯ್ತನ ಮಾನವೀಯ ನೆಲೆಯಲ್ಲಿ ರೂಪು ಪಡೆದ ವ್ಯಕ್ತಿತ್ವವಾಗಿದೆ. ವಿಸ್ಮಯಕಾರಿಯಾದ ತಾಯಿಯ ವೈಶಾಲ್ಯತೆ ಆಶ್ಚರ್ಯ ಮೂಡಿಸುತ್ತದೆ. ಈ ಪ್ರಕಾರದ ವೈಭವೀಕರಣಕ್ಕೆ ಒಳಗಾದ ತಾಯಿಯ ತಾಯ್ತನವನ್ನು ಹಲವು ಸಂದರ್ಭದಲ್ಲಿ ಶೋಷಣೆಗೆ ಇಡು ಮಾಡಿದೆ. ಹೊರುವುದು ಹೆರುವುದು, ಸಲಹುವುದು ಹಾಗೂ ಸು:ಖವಾಗಿರಿಸುವುದು ಈಕೆಯ ಮುಖ್ಯ ಲಕ್ಷಣವೆಂದೇ ಪರಿಭಾವಿಸಿಕೊಳ್ಳಲಾಗಿದೆ. ತಾನು ಹೆತ್ತ ಕರುಳಿನ ಕುಡಿಯ ಬೇಕು- ಬೇಡಗಳನ್ನು ತನ್ನ ಅಂತರಂಗದಿಂದ ಗ್ರಹಿಸುವ ಕ್ಷಮತೆ ತಾಯಿಗಿದೆಯೆಂದು ನಂಬಲಾಗಿದೆ.

ತಾಯಿ ಎಂದರೆ ಜನ್ಮದಾತೆ ಜೀವಿಯೊಂದನ್ನು ಹುಟ್ಟಿಸಿರುವವಳು ಮನುಷ್ಯಪ್ರಾಣಿಯನ್ನು ಸೃಷ್ಟಿಸುವವಳು . 'ತಾ' ಎಂದರೆ ತಾನು 'ಯಿ' ಎಂದರೆ 'ಇಯುವವಳು (ಹಡೆದವಳು)' 'ತಾನು

ಇದವಳು ತಾಯಿ ' ಎಂದು ಅರ್ಥ ಭೇಧಿಸಬಹುದು. ತನ್ನಿಂದ ಜನ್ಮ ಪಡೆದ ಜೀವಿಯೊಂದ ಪಾಲಿಸುವ ಪೋಷಿಸುವ ಗುಣವೇ ತಾಯ್ತನವೆಂದ ಸರಳವಾಗಿ ಹೇಳಬಹುದು. " ಈ ಜಗತ್ತಿನ್ನು ಸೃಷ್ಠಿಮಾಡಿದ ದೇವರು ಜಗತ್ತಿನಲ್ಲಿರುವ ಎಲ್ಲ ಜೀವ - ಜಂತುಗಳನ್ನು ಪಾಲನೆ-ಪೋಷಣೆ ಮಾಡುವ ಜವಾಬ್ದಾರಿ ತನ್ನೊಬ್ಬನಿಂದಲೇ ನಿರ್ವಹಿಸಲು ಸಾಧ್ಯವಿಲ್ಲದಾಗ ಪ್ರೀತಿ, ವಾತ್ಸಲ್ಯ, ಮಮತೆ, ತ್ಯಾಗ, ಸಹನೆ ಮುಂತಾದ ಸದ್ಗುಣಗಳ ಬನಿಯಾದ ತಾಯಿಯನ್ನು ಸೃಷ್ಠಿ ಮಾಡಿ ಭೂಮಿಗೆ ಕಳುಹಿಸಿದ . ಹೀಗೆ ಜಗತ್ತಿನ ಜೀವ-ಜಂತುಗಳ ಪಾಲನೆ, ಪೋಷಣೆ ರಕ್ಷಣೆಗಾಗಿ ಪೂಜ್ಯನೀಯ ಸ್ಥಾನವನ್ನು ನೀಡಿ ಗೌರವಿಸಲಾಗುತ್ತದೆ "[9] ಎಂಬ ನೆಲೆಯಲ್ಲಿ ತಾಯಿ ಮತ್ತು ತಾಯ್ತನದ ಕುರಿತಂತೆ ಗ್ರಹಿಕೆಗಳನ್ನು ಕಾಣಬಹುದು. ಹೆತ್ತವಳು 'ತಾಯಿ' ಎಂಬ ಪರಿಕಲ್ಪನೆ ಪ್ರಪಂಚದಾದ್ಯಂತ ಕಾಣಬಹುದು.

ನಮ್ಮ ಪರಂಪರೆಯಲ್ಲಿ ಹೆಣ್ಣಿನ ಅಸ್ತಿತ್ವ ಆಕೆ ತಾಯಿ ಆಗುವುದರ ಮೇಲೆ ನಿಂತಿದೆ. 'ಸ್ತ್ರೀ' ಎಂಬ ಸಂಸ್ಕೃತ ಪದ ' ಹೆರುವವಳು ' ಎಂಬ ಅರ್ಥ ಕೊಡುತ್ತದೆ. ಇದು ನಮ್ಮ ಭಾರತೀಯ ಸಂಸ್ಕೃತಿಯ ಪರಿಧಿಯಲ್ಲಿ ರೂಪು ಪಡೆದಿದೆ. ' ಸೂತ್ರ ' 'ಸೋತ್ರ ' ಎಂಬ ಧಾತುವಿನಿಂದ ಬಂದ 'ಸ್ತ್ರೀ' ಪರ ಹೆರುವ ಪ್ರಾಣಿ ಎಂಬ ಅರ್ಥವನ್ನು ಹೊಂದಿದೆ. ಗರ್ಭಾಶಯ ಕಾರಣವಾಗಿ ಆಕೆ ಸ್ತ್ರೀ ತನದ ವ್ಯಕ್ತಿತ್ವವನ್ನು ಪಡೆದುಕೊಂಡವಳು. ಹೆಣ್ತನ ತಾಯ್ತನದಗಳೆಂಬ ಗುಣಗಳನ್ನು ಹೆಣ್ಣುಮಕ್ಕಳಿಗೆ ಅನ್ವಯಿಸಿ ಕುಟುಂಬಕ್ಕಷ್ಟೆ ಸೀಮಿತಗೊಳಿಸಿ ಅವಳ ಸಂಪೂರ್ಣ ಅಭಿವೃದ್ಧಿಯನ್ನೆ ಚಿವುಟಿ ಹಾಕಲಾಗಿದೆ. ತಾಯ್ತನವೆಂಬ ವೈಭವೀಕರಣದ ಹಿಂದಿನ ಕ್ರೂರ ಸತ್ಯಗಳು ಅರಿಯಬೇಕಾಗಿದೆ. ಉದಾಹರಣೆವೆಂಬಂತೆ ತಾಯ್ತನದ ಹಂಬಲ ಲಾಲನೆ ಪಾಲನೆ ಜವಾಬ್ದಾರಿಗಳೆಲ್ಲ ತಾಯಿಯ ಪಾಲಿಗಿವೆ. ತಾಯ್ತನಕ್ಕೆ ಕೊಟ್ಟ ಪ್ರಾಮುಖ್ಯತೆ ಭಾವ ತೀವ್ರತೆ , ತಂದೆತನಕ್ಕೆ ನಮ್ಮ ಸಮಾಜ ಕೊಟ್ಟಿಲ್ಲ . ತಾಯಿ ಹಾಗೂ ತಾಯ್ತನವನ್ನು ವೈಭವೀಕರಿಸಿದ ಚಿತ್ರಣಗಳೇ ಹೆಚ್ಚಾಗಿ ಕಂಡು ಬರುತ್ತವೆ. ಈ ವೈಭವೀಕರಣದ ಹಿಂದೆ ಬಹುದೊಡ್ಡ ಪುರುಷರಾಜಕಾರಣವಿದೆ ಎಂದು ಸ್ತ್ರೀವಾದಿಗಳು ವಾದಿಸುತ್ತಾರೆ.

ಅದೇನೇ ಇದ್ದರೂ ತಾಯಿಗೂ ತಾಯ್ತನಕ್ಕೂ ನಮ್ಮ ಸಮಾಜ ಮನ್ನಣೆ ಕೊಟ್ಟಿದೆ. ತಾಯಿಯನ್ನು ದೇವರಾಗಿ ಪೂಜಿಸಿದ್ದಾರೆ. 'ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ಬಂಧುವಿಲ್ಲ' ಎಂಬ ಗಾದೆ ತಾಯ್ತನಕ್ಕೆ ಸಂದ ಗೌರವದ ನುಡಿಯಾಗಿದೆ. ಇಂಥ ಪರಿಕಲ್ಪನೆಯಲ್ಲಿ ತಾಯ್ತನದ ಚಿತ್ರಣವನ್ನು ಗ್ರಹಿಸಬೇಕಾಗಿದೆ. ತಾಯಿಯ ವ್ಯಕ್ತಿತ್ವ ತಾಯ್ತನದಲ್ಲಿ ಮಡುಗಟ್ಟಿ ನಿಂತಿರುತ್ತದೆ. ಪ್ರಾಚೀನ ಕಾಲದಿಂದಲೂ ತಾಯ್ತನದ ಭಾವಕ್ಕೆ ಬೆಲೆ ಕೊಡುತ್ತ ಬಂದಿದ್ದಾರೆ. ನಮ್ಮ ಪರಂಪರೆಯಲ್ಲಿ ತಾಯ್ತನದ ಸಂಸ್ಕೃತಿ ಭವ್ಯವಾಗಿದೆ. 'ಜನನೀ ಜನ್ಮ ಭೂಮಿಶ್ಯ ಸ್ವರ್ಗಾದಪಿ ಗರಿಯ' ಎನ್ನುತ್ತದೆ ಆರ್ಯೋಕ್ತಿ. ಅಂದರೆ ಜನನಿ ಮತ್ತು ಜನ್ಮಭೂಮಿ ಸ್ವರ್ಗಕ್ಕಿಂತಲೂ ಶ್ರೇಷ್ಠ. ' ಮಾತೃದೇವೋಭವ ' ಎಂದು ಹೇಳುವ ವೇದವೂ ತಾಯಿಯನ್ನು ದೇವತೆಯಾಗಿ ಕಂಡಿದೆ. ಮಹಾಭಾರತವೂ ಸಹ 'ತಂದೆ - ತಾಯಿ ಪ್ರಾಣಲಿಂಗ ಕಾಣಿರೋ' ಎನ್ನುತ್ತದೆ. ಸಂಚಿ ಹೊನ್ನಮ್ಮ 'ಪೆಣ್ಣಲ್ಲವೆ ನಮ್ಮನ್ನೆಲ್ಲ ಪಡೆದ ತಾಯಿ' ಎಂದು ಹೋಗಳಿದ್ದಾಳೆ. ಶ್ರೀ ಶಂಕರಾಚಾರ್ಯರು ಹೇಳುವ ಹಾಗೆ 'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಅಂದರೆ ಕೆಟ್ಟ ಪುತ್ರನು ಇರಬಹುದು ಆದರೆ ಕೆಟ್ಟ ತಾಯಿ ಇರಲು ಸಾಧ್ಯವಿಲ್ಲ

'ಸರ್ವಜ್ಞ ಹೇಳುವಂತೆ. ' ತಾಯಿ ಇಲ್ಲದ ಹಾಗೆ ಮನೆಯೆ ಮೊದಲ ಪಾಠಶಾಲೆ ಜನನಿ ತಾನೆ ಮೊದಲ ಗುರುವು ಜನನಿಯಿಂದ ಪಾಠಕಲಿತ ಜನರು ಧನ್ಯರು '. ಡಾ .ಮ.ಗು ಬಿರಾದಾರ ನಿನ್ನ ಕರ ಪುಷ್ಪಕದಿ ನಿನ್ನ ತೊಡೆಯ ಸಿಂಹಾಸನದಿ ನಲಿಯಲೆಂದೇ ನೂರು ಬಾಲ್ಯ ಬರಲಿ 'ಎನ್ನುತ್ತಾರೆ. ಎಂ. ಜಿ ಗಂಗನಪಳ್ಳಿಯೆಂಬ ಕವಿ ಹೇಳುತ್ತಾರೆ. ' ತಾಯಿ ಮಡಿಲು ಜಗದ ಗುಡಿ ' ಹೀಗೆ ತಾಯಿ ಮತ್ತು ಆಕೆಯಿಂದ ಹರಿದು ಬರುವ ತಾಯ್ತನದ ಕುರಿತು ಪ್ರಾಚೀನ ಕಾಲದಿಂದ ಹಿಡಿದು ಇಂದಿನ ವರೆಗೆ ಹಲವು ಮಹನೀಯರು ಮನದಣಿಯದೇ ಹೊಗಳಿದ್ದಾರೆ. ಜೀವ ಸಂಕುಲಕ್ಕೆ ದೇವರ ಪ್ರತಿನಿಧಿಯಾಗಿ ತಾಯಿಯನ್ನು ಕಾಣಲಾಗಿದೆ. ನಮ್ಮ ಸಂಸ್ಕೃತಿಯಲ್ಲಿ ತಾಯ್ತನವನ್ನು ಎರಡು ನೆಲೆಯಲ್ಲಿ ಗ್ರಹಿಸಿರುವುದು ಕಂಡು ಬರುತ್ತದೆ. ಒಂದು ದೈವಿ ನೆಲೆಯಲ್ಲಿ ಇನ್ನೊಂದು ಪ್ರಾಕೃತಿಕ ನೆಲೆಯಲ್ಲಿ ಹೆಣ್ಣನ್ನು ರಾಕ್ಷಸಿಯಾಗಿ ಕಂಡರೂ ತಾಯಿಯನ್ನು ದೇವತೆಯಾಗಿಯೇ ಕಂಡಿದ್ದಾರೆ. ಕುಟುಂಬ ಹಾಗೂ ಮಕ್ಕಳ ಅಭಿವೃದ್ಧಿಯಲ್ಲಿ ತನ್ನ ಅಭಿವೃದ್ಧಿ ಕಾಣುವ, ಸರ್ವಸ್ವವನ್ನು ಅವರಿಗಾಗಿ ತ್ಯಾಗ ಮಾಡುವ ತಾಯಿಯ ತಾಯ್ತನವನ್ನು ದೇವತೆಯಾಗಿ ಕಂಡಿರುವುದು ಆಶ್ಚರ್ಯವೇನಿಲ್ಲ. ದುರ್ಗವ್ವ, ಕಾಳವ್ವ, ಎಲ್ಲವ್ವ, ಪೊಚವ್ವ ಮುಂತಾದ ದೇವತೆಗಳು ಪೂಜೆಗೋಳ್ಳುತ್ತೀರುವುದು. ತಾಯ್ತನದ ಹಿನ್ನೆಲೆಯಲ್ಲಿಯೇ ದ್ರಾವಿಡ ಸಂಸ್ಕೃತಿಯಲ್ಲಿ ಮಾತೃಪ್ರಧಾನ ಕುಟುಂಬಗಳ ಕುರುಹಾಗಿ ಮಾತ್ರದೇವತೆಯನ್ನು ಪೂಜಿಸುವುದು ಇಂದಿಗೂ ಕಾಣಬಹುದು. ತಾಯ್ತನ ಕೊಡುವ ತಾಯಿ ಮಹಾಮಾತೆಯೇ ಸರಿ.

ಹೆಣ್ಣು ಬೀಜೋತ್ಪತ್ತಿಗೆ ಕಾರಣಳು 'ಭೂತಾಯಿ' ಎಂದು ಕರೆಯುವುದುಂಟು 'ಭೋಜೇಶುಮಾತಕಿ' ಎಂಬುದು ಪುರಾಣೋಕ್ತಿ. ರಾಷ್ಟ್ರಭಿಮಾನದ ಸಂಕೇತವಾಗಿ 'ಭಾರತಮಾತೆ' ಎಂದು ಕರೆಯುವರು. 'ಪರಸ್ತ್ರೀ ತಾಯಿಯ ಸಮಾನ' ಎಂಬುದು ನಮ್ಮ ಸಮಾಜದಲ್ಲಿ ಮೌಲ್ಯಯುತವಾದ ಗ್ರಹಿಕೆ. ಹಲವು ಸಂದರ್ಭದಲ್ಲಿ ಹೆಣ್ಣನ್ನು ಗೌರವಪೂರ್ವಕವಾಗಿ ಸಂಭೋಧಿಸುವಾಗ ಇತರ ಹೆಣ್ಣು ಮಕ್ಕಳನ್ನು ಅವ್ವ, ಅಮ್ಮ, ತಾಯಿ ಎಂತಲೇ. ಹೀಗೆ ತಾಯಿಯು ಆಕೆ ನೀಡುವ ತಾಯ್ತನಕ್ಕಾಗಿ ಖ್ಯಾತಿಯನ್ನು ಪಡೆದಿದ್ದಾಳೆ. ಜೈವಿಕವಾಗಿ ತಾಯ್ತನದ ಅರ್ಥವನ್ನು ಗ್ರಹಿಸುವುದಾದರೆ. ಋತುಮತಿಯಾದ ನಂತರ ತಾಯಿಯಾಗುವ ಎಲ್ಲ ಲಕ್ಷಣಗಳು ಹೊಂದಿದ್ದರೂ ಇಪ್ಪತ್ತು ವರ್ಷದ ಪ್ರೌಢ ಹೆಣ್ಣು ತಾಯಿಯಾಗುವ ಎಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾಳೆ. ಹೆಣ್ಣಿನ ಜೀವನದಲ್ಲಿ ಋತುಮತಿಯಾಗುವುದು ಒಂದು ವಿಶೇಷ ಸಮಯ. ತನ್ನ ಹನ್ನೆರಡನೆಯ ವಯಸ್ಸಿನಿಂದ ಸುಮಾರು ನಲವತ್ತೈದು ಐವತ್ತು ವರುಷದ ವರೆಗೆ ನಿರಂತರ ನಡೆಯುವ ಒಂದು ಪ್ರಕ್ರಿಯೆಯಾಗಿ ಋತುಚಕ್ರ ಕಾಣಿಸಿಕೊಳ್ಳುತ್ತದೆ. ಹೆಣ್ಣು ತಾಯಿಯಾಗಲು ಈ ಋತುಚಕ್ರ ಸೂಕ್ತ ವೇದಿಕೆಯನ್ನು ಒದಗಿ ಸುತ್ತದೆ. ಹೆಣ್ಣಿನ ಜೀವನದ ವಿಶಿಷ್ಟ ಜೈವಿಕ ಕ್ರಿಯೆಯಾಗಿದೆ. ಜನನ ಗ್ರಂಥಿಯಾದ ಅಂಡಾಶಯ ಹೆಣ್ಣನ್ನು ತಾಯಿಯಾಗಿ ರೂಪಿಸುವಲ್ಲಿ ಜೈವಿಕವಾಗಿ ಸಹಕರಿಸುತ್ತದೆ.

ಹೆಣ್ಣಿನ ಅಂಡಾಶಯದಲ್ಲಿ ಉತ್ಪತ್ತಿಯಾದ ಅಂಡಾಣು ಮತ್ತು ಗಂಡಿನ ಜನನ ಗ್ರಂಥಿಯಿಂದ ಉತ್ಪತ್ತಿಯಾದ ವೀರ್ಯಾಣುಗಳು ಮಿಲನದಿಂದ ಹೆಣ್ಣಿನ ಗರ್ಭಾಶಯದಲ್ಲಿ ಜೀವಕೋಶಗಳು ಉತ್ಪತ್ತಿಯಾಗಿ ಜೀವಿಯೊಂದು ವಿಕಸನವಾಗುತ್ತದೆ. ಪ್ರಕೃತಿಯ ಅನೇಕ ನೀಗೂಢತೆಯಲ್ಲಿ ಜೀವಿಯ

ಜನನವೂ ಒಂದಾಗಿದೆ. ಮೇಲ್ನೋಟಕ್ಕೆ ಸರಳವಾಗಿ ಕಾಣಿಸುವ ತಾಯಿಯಾಗುವ ಪ್ರಕ್ರಿಯೇ ಪ್ರಕೃತಿಯ ವಿಸ್ಮಯ ಕೊಡುಗೆ ಎಂದೇ ಹೇಳಬಹುದು. ಅಂಡಾಣು ಮತ್ತು ವೀರ್ಯಾಣುಗಳು ಸೇರಿ ಜೀವಿಯೊಂದು ರೂಪು ಪಡೆಯಲು ಬೇಕಾಗಿರುವುದು ಗರ್ಭಾಶಯ. ವೀರ್ಯ ಮತ್ತು ಅಂಡಾಣು ಗರ್ಭದಲ್ಲಿ ಫಲಿತಗೊಂಡು ಸಫಲವಾದರೆ. ಭ್ರೂಣವು ಬೆಳೆಯಲು ಪ್ರಾರಂಭಿಸುತ್ತ. ನವಮಾಸ ತಾಯಿಯ ಗರ್ಭದಲ್ಲಿ ಯಾವುದೇ ಅಡೆತಡೆಗಳಿಲ್ಲದೆ ಬೆಳೆದ ಭ್ರೂಣ ಶಿಶುವಾಗಿ ಭೂಮಿಯ ಮೇಲೆ ಜನ್ಮ ಪಡೆದಾಗ ಜನ್ಮಕೊಟ್ಟ ಹೆಣ್ಣು ಜೈವಿಕವಾಗಿ ತಾಯಿ ಎನಿಸಿಕೊಳ್ಳುತ್ತಾಳೆ. ಆಕೆ ಕೊಡುವ ಪ್ರೀತಿ, ವಾತ್ಸಲ್ಯ, ಮಮತೆ, ಪಾಲನೆ-ಪೋಷಣೆಗಳು ತಾಯ್ತನವೆಂಬ ಅರ್ಥದಲ್ಲಿ ನೋಡಲಾಗಿದೆ. ಇಲ್ಲಿ ತಾಯಿಯು ಪ್ರಾಕೃತಿಕವಾಗಿ ತಾಯ್ತನ ಪಡೆದುಕೊಳ್ಳುತ್ತಾಳೆ.

## ಸಾಮಾಜಿಕ ವಿರೋಧಾಭಾಸಗಳು

ಮಗುವನ್ನು ಜನ್ಮ ನೀಡಿದ ತಾಯಿಯ ಕುರಿತಾದ ವೈಭವಿಕರಣದ ಗ್ರಹಿಕೆಗಳು ನಮ್ಮಲ್ಲಿವೆ. ಸಮಾಜದಲ್ಲಿ ತಾಯಿಗೆ ಗೌರವಾನ್ವಿತ ಸ್ಥಾನವಿದೆ. ತಾಯಿಯನ್ನು ದೈವಿಕನೆಲೆಯಲ್ಲಿ, ಪ್ರಾಕೃತಿಕ ನೆಲೆಯಲ್ಲಿ ಪ್ರಾಧಾನ್ಯತೆ ಕೊಡಲಾಗಿದೆ. ಗೌರವದ ನುಡಿಗಳು ನುಡಿಯಲಾಗಿದ್ದು ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೆ ಜನಪದರು ಕವಿಗಳು, ಸಾಹಿತಿಗಳು, ವಿಚಾರವಂತರು ಸ್ಮೃತಿಕಾರರು, ಚಿಂತಕರು ತಾಯಿಯ ಕುರಿತಂತೆ ಮೌಲ್ಯಯುತ ಮಾತನಾಡಿದ್ದಾರೆ. ಹೆಣ್ಣು ರಾಕ್ಷಸಿಯಾದರೂ, ತಾಯಿ ದೇವತೆ ಆಕೆಯ ಮಹತ್ವ ಆಕೆ ಕೊಡುವ ತಾಯ್ತನದ ಧಾರೆಯನ್ನು ಮನದಣಿಯದೆ ಹೋಗಳಿದ್ದಾರೆ. ಈ ವಿಷಯ ಸಂತೋಷ ಕೊಡುವ ಸಂಗತಿಯೆ ಸರಿ. ಆದರೆ ಜನ್ಮಕೊಟ್ಟ ಎಲ್ಲ ತಾಯಂದರಿಗೆ ನಮ್ಮ ಸಮಾಜ ಗೌರವ ಕೊಡುವುದಿಲ್ಲ . ಬದಲಾಗಿ ನಿಕೃಷ್ಟವಾಗಿ ಕಂಡಿದೆ. ಸಮಾಜ ವಿಧಿಸಿದ ಚೌಕಟ್ಟಿನಲ್ಲೇ ಹೆಣ್ಣು ತಾಯಿಯಾದಗ ಆಕೆಗೆ ಬೆಲೆ ವಿವಾಹಕ್ಕೆ ಒಳಪಟ್ಟ ಹೆಣ್ಣು ಮಾತ್ರ ತಾಯಿಯಾಗಬೇಕು ಎಂಬುದ ಸಮಾಜ ವಿಧಿಸಿದ ನಿಯಮ. ವಿವಾಹ ಬಾಹಿರ ಹೆಣ್ಣು ಕಾರಣಾಂತರದಿಂದ ತಾಯಿಯಾದರೆ ಆಕೆಯ ಪಾಡು ನಾಯಿಪಾಡು ತಂದೆಯ ಮೂಲಕ ಗುರುತಿಸಿಕೊಳ್ಳುವ ಮಗು ತಂದೆ ಯಾರು ಎಂಬುದು ವಿವಾಹದ ಬಂದದಿಂದ ಗುರುತು ಪಡೆಸಿಕೊಳ್ಳಬೇಕು. ಇಲ್ಲವಾದಲ್ಲಿ ತಂದೆ ಇಲ್ಲದ ಮಗುವಿನ ತಾಯಿ ಸಮಾಜ ನಿಂದನೆಗೆ ಗುರಿಯಾಗುತ್ತಾಳೆ. ತಾಯಿಗೆ ಸಿಗಬೇಕಾದ ಮಾನ ಮರ್ಯಾದೆಗಳು, ಗೌರವ ಆದರ ಸತ್ಕಾರಗಳು ಇಲ್ಲಿ ಗೌಣವಾಗಿ, ಸಾಮಾಜಿಕ ಬಹಿಷ್ಕಾರ, ಜಾತಿ ಬಹಿಷ್ಕಾರ, ಅಪವಾದಕ್ಕೆ ಗುರಿಯಾಗಿ ಜೀವನ ಪರಿಯಂತ ನೋವು ಅನುಭವಿಸಬೇಕಾಗುತ್ತದೆ.

ವೇಶ್ಯೆಯರು, ದೇವದಾಸಿಯರು, ಅವಿವಾಹಿತ ತಾಯಂದಿರು, ಅತ್ಯಾಚಾರಕ್ಕೆ ಒಳಗಾಗಿ ತಾಯಿಯಾದವರು ಸಮಾಜದಲ್ಲಿ ನಿಂದನೆಗೆ ಗುರಿಯಾಗಿ ಪಡಬಾರದ ಪಾಡು ಪಡೆಯುತ್ತಾರೆ. ಸಾಂಪ್ರದಾಯಿಕವಾಗಿ ಗಮನಿಸಿದಾಗ ತಾಯ್ತನವೆಂಬುದು ಹೆಣ್ಣಿಗೆ ಮಾನ್ಯತೆ ಕೊಟ್ಟರೂ. ವಿವಾಹಕ್ಕೆ ಒಳಗಾಗದೆ ತಾಯಿಯಾದ ಹೆಣ್ಣಿನ ಬಾಳನ್ನು ನರಕಕ್ಕೆ ದೂಡಲಾಗುತ್ತದೆ. ತಾಯಿಯನ್ನು ತಾಯ್ತನದ ಆದರ್ಶ ಮೌಲ್ಯವೆಂಬಂತೆ ಗ್ರಹಿಸಿದರೂ ಸಮಾಜ ಬಾಹಿರ ತಾಯ್ತನವನ್ನು ತುಚ್ಛಿಕರಿಸಿ ನೋಡುವ ನಮ್ಮ ಸಮಾಜದ ವಿರೋದಾಭಾಸ ಗ್ರಹಿಕೆಯನ್ನು ಅರ್ಥೈಸಿಕೊಳ್ಳುವುದು ಕಷ್ಟ. ತಾಯಿ

ವೈಭವಿಕರಣಕ್ಕೂ ಆದರ್ಶಿಕರಣಕ್ಕೂ ಒಳಗಾದ ವ್ಯಕ್ತಿಯಾದರೂ ನಮ್ಮ ಸಮಾಜದಲ್ಲಿ ವೃದ್ಧಾಶ್ರಮಗಳು ತಲೆ ಎತ್ತಿ ನಿಂತಿರುವು ವಿಪರ್ಯಾಸ.

## ಮಾತೃಪ್ರಧಾನ ವ್ಯವಸ್ಥೆ

ಮಾನವನು ಒಬ್ಬ ಸಮಾಜ ಜೀವಿಯಾಗಿ ಬದುಕಲು ಪ್ರಾರಂಭ ಮಾಡಿದಾಗಿನಿಂದಲೂ ಕುಟುಂಬವೆಂಬ ವ್ಯವಸ್ಥೆಯನ್ನು ರೂಪಿಸಿಕೊಂಡು ಬಂದಿರಬೇಕು. ಆತ ತನ್ನ ದಿನನಿತ್ಯದ ಆಗುಹೋಗುಗಳನ್ನು, ತನ್ನ ಅನುಭವಗಳನ್ನು ತಮ್ಮವರೊಂದಿಗೆ ಹಂಚಿಕೋಳ್ಳಲು ಪ್ರಾರಂಭಿಸಿದ. ನಂತರ ಕ್ರಮೇಣ ತಾನು ತನ್ನದು ತನ್ನವರುವೆಂಬ ಭಾವಬೆಳೆದು ಕುಟುಂಬ ಹುಟ್ಟಲು ಕಾರಣವಾಗಿರಬೇಕು. ಸಹಜವಾದ ಕಾಮನೆಗಳಾದ ಹಸಿವು, ನಿರಡಿಕೆ, ನಿದ್ರೆ, ಕಾಮಾದಿಗಳನ್ನು ಈಡೆರಿಸಿಕೊಳ್ಳಲು ಈ ಕುಟುಂಬಗಳ ಹುಟ್ಟಿಗೆ ಕಾರಣವೂ ಆಗಿರಬಹುದು.

ಗಂಡು-ಹೆಣ್ಣಿನ ಆಕರ್ಷಣೆ, ಮಕ್ಕಳನ್ನು ಪಡೆಯುವುದು.ಅವುಗಳ ಪೋಷಣೆಗಳಂಥ ಕಾರ್ಯಗಳಿಗೆ ಕುಟುಂಬ ರಚನೆ ಅನಿವಾರ್ಯವಾದವು. ಮಾನವನ ವಿಕಾಸದ ಪ್ರಾರಂಭ ಹಂತದಲ್ಲಿ ಕುಟುಂಬಗಳ ಅಸ್ತಿತ್ವ ಇಲ್ಲದಿದ್ದರೂ ಕಾಲಕ್ರಮೇಣದಲ್ಲಿ ಮಾನವ ಜ್ಞಾನ ಹೆಚ್ಚಾದಂತೆಲ್ಲ ತನ್ನಂತೆ ಇರುವ ಇತರ ಜೀವಿಗಳೊಂದಿಗೆ ಸಮಾಜ ಜೀವಿಯಾಗಿ ಬದುಕಲು ಪ್ರಾರಂಭಿಸಿದ. ಹೆಣ್ಣು- ಗಂಡು, ಅವರಿಂದ ಹುಟ್ಟಿದ ಸಂತತಿ ಅವರೆಲ್ಲ ಸೇರಿ ಒಂದು ಕುಟುಂಬ ಎನ್ನುವ ರೀತಿಯಲ್ಲಿ ಕೂಡಿ ಬಾಳುವುದನ್ನು ಕಲಿತರು. ಇಂಥ ಕುಟುಂಬ ವ್ಯವಸ್ಥೆಗಳು ಕಾಲದಿಂದ ಕಾಲಕ್ಕೆ, ಬೇರೆ-ಬೇರೆ ಪ್ರದೇಶದಲ್ಲಿ ಬದಲಾದ ಮಾದರಿಗಳಲ್ಲಿ ಅಸ್ತಿತ್ವಕ್ಕೆ ಬಂದವು.

ಅದರಲ್ಲಿ ಮುಖ್ಯವಾಗಿ ಎರಡು ಪ್ರಕಾರದ ಕುಟುಂಬಗಳು ಅಸ್ತಿತ್ವದಲ್ಲಿರುವುದನ್ನು ನಾವು ನೋಡಬಹುದು. ಅವುಗಳೆಂದರೆ ಒಂದು ಮಾತೃ ಪ್ರಧಾನ ಕುಟುಂಬ ಎರಡು ಪಿತೃಪ್ರಧಾನ ಕುಟುಂಬ. ಗಂಡು-ಹೆಣ್ಣು ಭೇಧಭಾವ ಕಾರಣವಾಗಿ ಕುಟುಂಬಗಳು ಯಾರ ಅಧಿಕಾರತ್ವದಲ್ಲಿ ಚಲಾಯಿಸಲ್ಪಡುತ್ತಿದ್ದವುಯೆಂಬುದರ ಆಧಾರದಿಂದ ಈ ಮಾತೃಪ್ರಧಾನ ಕುಟುಂಬ ಮತ್ತು ಪಿತೃಪ್ರಧಾನ ಕುಟುಂಬಗಳು ಅಸ್ತಿತ್ವದಲ್ಲಿ ಇರುವುದನ್ನು ಕಾಣಬಹುದು. ಮಾನವನ ಬೆಳವಣಿಗೆಯ ಪ್ರಾರಂಭ ಹಂತದಲ್ಲಿ ಕುಟುಂಬವು ಮಹಿಳೆಯರ ನಿಯಂತ್ರಣಕ್ಕೆ ಒಳಪಟ್ಟಿತ್ತು. ನಂತರ ಬರುಬರುತ್ತಾ ಗಂಡಸರ ಪ್ರಾಬಲ್ಯ ಹೆಚ್ಚಾಗಿ ಪಿತ್ರಪ್ರಧಾನ ಕುಟುಂಬಗಳು ಅಸ್ತಿತ್ವಕ್ಕೆ ಬಂದವು ಎಂಬುದು ಹಲವು ವಿದ್ವಾಂಸರ ಒಮ್ಮತ. ಆಧುನಿಕರೆಂದು ಕರೆಸಿಕೊಳ್ಳುವ ಇಂದಿನ ನಮ್ಮ ಸಮಾಜದ ಹೆಚ್ಚು ಕುಟುಂಬಗಳು ಪಿತೃಪ್ರಧಾನ ಕುಟುಂಬಗಳೇ ಆಗಿವೆ. ಆದರೆ ಕೆಲವು ನಿರ್ದಿಷ್ಟ ಪ್ರದೇಶಗಳನ್ನು, ಕೆಲವೇ ಕೆಲವು ಬುಡಕಟ್ಟು ಜನಾಂಗಗಳಲ್ಲಿ ಮಾತೃಪ್ರಧಾನ ಕುಟುಂಬ ಅಸ್ತಿತ್ವದಲ್ಲಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಮಾತೃಪ್ರಧಾನತೆಯ ಅರ್ಥವೆನೆಂದರೆ ಹೆಸರೆ ಸೂಚಿಸುವಂತೆ ಇಲ್ಲಿ ಮಾತೆಯರಿಗೆ ಹೆಚ್ಚಿನ ಪ್ರಾಶಸ್ತ್ಯವಿದ್ದು, ಅವರಲ್ಲಿಯೇ ಅಧಿಕಾರ ಕೇಂದ್ರಿಕೃತವಾಗಿರುತ್ತವೆ.ಕುಟುಂಬದ ಎಲ್ಲ ಆಗು-ಹೋಗುಗಳನ್ನು ಮಾತೆಯರ ಮಾರ್ಗದರ್ಶನದಲ್ಲಿಯೇ ಜರಗುವವು ಇಲ್ಲಿ ಗಂಡಸರ ಮೇಲೆ ಹೆಣ್ಣು-ಮಕ್ಕಳ ಪ್ರಾಬಲ್ಯವಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಸರಳವಾಗಿ ಹೇಳುವುದಾದರೆ ಮಾತೃಪ್ರಧಾನ ಕುಟುಂಬದಲ್ಲಿ ತಾಯಿಯೇ

ಯಜಮಾನಳಾಗಿರುತ್ತಾಳೆ. "ಮಾತೃಪ್ರಧಾನತೆ ಎಂಬುದಕ್ಕೆ ತತ್ಸಮಾನವಾದ 'ಮೇಟ್ರಿಯಾರ್ಚಿ '(Matriarchy) ಎಂಬ ಆಂಗ್ಲ ಪದವು ಲ್ಯಾಟಿನ್ ಭಾಷೆಯ 'ಮೇಟರ್' (Mater ಅರ್ಥ ತಾಯಿ) ಮತ್ತು ಗ್ರೀಕ್ ಭಾಷೆಯ 'ಆರ್ಚಿ'(arche ಅರ್ಥ ಆಳ್ವಿಕೆ) ಎಂಬ ಪದದಿಂದ ಉತ್ಪತ್ತಿ ಹೊಂದಿದೆ. ಹೀಗೆ ಮಾತೃ ಪ್ರಧಾನತೆ ಎಂದರೆ 'ತಾಯಿಯ ಆಳ್ವಿಕೆ 'ಎಂದರ್ಥ "[2] ಇದು ಮಾತೆಯರ ಯಜಮಾನಿತ್ವವನ್ನು ಸೂಚಿಸುತ್ತದೆ.

ಮಾನವನ ವಿಕಾಸದ ಪ್ರಾರಂಭ ಹಂತದಲ್ಲಿ ಮಾತೃಪ್ರಧಾನ ಕುಟುಂಬಗಳೇ ಅಸ್ತಿತ್ವದಲ್ಲಿ ಇದ್ದವು. ನಂತರದ ದಿನಗಳಲ್ಲಿ ಪುರುಷರು ಕುಟುಂಬಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿಕೊಂಡರು ಎಂಬುದನ್ನು ಅನೇಕ ಸಮಾಜಶಾಸ್ತ್ರಜ್ಞರು ಹಾಗೂ ಮಾನವಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೆ. ಮಾತೃಪ್ರಧಾನ ಕುಟುಂಬಗಳಲ್ಲಿ ಹೆಣ್ಣು-ಮಕ್ಕಳಿಗೆ ಹೆಚ್ಚಿನ ಅಧಿಕಾರವಿದೆ. ತನ್ನ ಆಸ್ತಿಯನ್ನು ಮುಂದೆ ಅದರ ವಾರಸು ದಾರಿಕೆಯಾಗಿ ಆಕೆಯ ಮಗಳೇ ಪಡೆದುಕೊಳ್ಳುತ್ತಾಳೆ, ವಿನ: ಮಗನಿಗೆ ಆಸ್ತಿಯಲ್ಲಿ ಪಾಲು ಸಿಗದು. ಕುಟುಂಬದ ವಂಶವನ್ನು ಮುಂದುವರೆಸಿಕೊಂಡು ಹೋಗುವವಳು ಸಹ ಇಲ್ಲಿ ಯಜಮಾನಿಯ ಮಗಳಾಗಿರುತ್ತಾಳೆ. ವಿನ: ಮಗನಲ್ಲ. ಇಲ್ಲಿ ತಾಯಿಯೇ ಮುಖ್ಯಳು. ಆಕೆಯಲ್ಲಿ ಎಲ್ಲ ಅಧಿಕಾರಗಳು ಕೇಂದ್ರಿಕೃತಗೊಂಡಿರುತ್ತವೆ. ಮಾತೃಮೂಲ ಕುಟುಂಬ ವ್ಯವಸ್ಥೆಯಲ್ಲಿ ಮಾತೆಯರೆ ಮುಖ್ಯರು ಇಲ್ಲಿನ ಹೆಣ್ಣು-ಮಕ್ಕಳು ಮದುವೆಯಾದರೂ ಗಂಡನ ಮನೆಗೆ ಹೋಗದೆ ತಾಯಿಯ ಮನೆಯಲ್ಲಿಯೇ ಉಳಿದುಕೊಂಡು ತನ್ನ ವಾರಸುದಾರಿಕೆಯನ್ನು ಮುಂದುವರೆಸಿಕೊಂಡು ಹೋಗುತ್ತಾರೆ. ಅಂದರೆ ಮಾತೃಪ್ರಧಾನ ಕುಟುಂಬಗಳಲ್ಲಿ ಮಾತೆಯರಿಗೆ ಹೆಚ್ಚು ಪ್ರಾಮುಖ್ಯ ಹೊಂದಿರುತ್ತಾರೆ. ಈ ಕುಟುಂಬದಲ್ಲಿ ಹೆಣ್ಣೊಬ್ಬಳು ತಾಯಿಯಾಗುವುದರ ಮೂಲಕ ಆ ಕುಟುಂಬದಲ್ಲಿ ಯಜಮಾನಿಕೆಯನ್ನು ಪಡೆಯುತ್ತಾಳೆ. ಈ ಕುಟುಂಬಗಳಲ್ಲಿ ತಾಯಂದಿರು ಈ ಕೆಳಗಿನಅಧಿಕಾರಗಳನ್ನು ಹೊಂದಿರುತ್ತಾರೆ.

- ಮಾತೃಪ್ರಧಾನ ಕುಟುಂಬಗಳಲ್ಲಿ ತಾಯಿಗೆ ಹೆಚ್ಚಿನ ಬೆಲೆ ಇದೆ. ಇಲ್ಲಿ ತಾಯಿಯ ಗರ್ಭದಿಂದ ಹುಟ್ಟಿದ ಹೆಣ್ಣು ಮಗುವಿಗೆ ಹೆಚ್ಚಿನ ಅಧಿಕಾರ ಸಿಗುವುದು.
- ತಾಯಿಯ ಗರ್ಭದಿಂದ ಹುಟ್ಟಿದ ಹೆಣ್ಣು ಮಗು ತಾಯಿಯ ವಂಶದ್ದು ಎಂದು ಕರೆಸಿಕೊಳ್ಳುತ್ತದೆ.
- ತಾಯಿಗೆಹುಟ್ಟಿದ ಹೆಣ್ಣು ಮಗು ಮುಂದೆ ಮದುವೆಯ ನಂತರ ಗಂಡನ ಮನೆಗೆ ಹೋಗುವುದಿಲ್ಲ. ಆಕೆ ತನ್ನ ಗಂಡನೊಂದಿಗೆ ತಾಯಿಯ ಮನೆಯಲ್ಲೇ ಇದ್ದು ತನ್ನ ಅಧಿಕಾರವನ್ನು ತಾಯಿಂದ ಪಡೆದು ವಂಶ ಮುಂದುವರೆಸಿಕೊಂಡು ಹೋಗುತ್ತಾಳೆ.
- ತಾಯಿಯಲ್ಲಿ ಇರುವ ಯಾವುದೇ ತೆರನಾದ ಆಸ್ತಿಯನ್ನು ಇಲ್ಲಿ ಮಗಳೇ ಪಡೆದುಕೊಳ್ಳುತ್ತಾಳೆ. ತಾಯಿಯ ಸಂಪೂರ್ಣ ಆಸ್ತಿಯ ವಾರಸುದಾರಿಕೆ ಮಗಳಿಗೆ ದೊರೆಯುತ್ತದೆ.
- ಮಾತೃಪ್ರಧಾನ ಕುಟುಂಬಗಳಲ್ಲಿ ಯಜಮಾನಿಕೆಯ ಹಿರಿತನ ತಾಯಿಗೆ ಇರುವುದರಿಂದ ಇಲ್ಲಿ ತಾಯಂದಿರಿಗೆ ಬೆಲೆ ಹೆಚ್ಚು. ಇಲ್ಲಿ ಕುಟುಂಬದ ಆಡಳಿತ ಆಕೆಯ ಕೈಯಲ್ಲಿಯೇ ಇರುವುದರಿಂದ ಆಕೆ ಹೆಚ್ಚು ಸ್ವತಂತ್ರಳೆಂದು ಹೇಳಬಹುದು.

- ತಾಯಿಗೆ ಜನಿಸಿದ ಗಂಡು ಮಕ್ಕಳಿಗೆ ತಾಯಿಯ ಆಸ್ತಿಯಲ್ಲಿ ಯಾವುದೇ ತೆರನಾದ ಹಕ್ಕುಗಳಿಲ್ಲ. ಗಂಡಸರು ಇಲ್ಲಿ ಬಂದು ಹೋಗುವ ಅತಿಥಿಯಂತೆ ಇರುತ್ತಾರೆ ಹೊರತು ಸ್ಥಿರವಾಗಿ ಉಳಿಯುವುದಿಲ್ಲ. ಹೀಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ತಾಯಂದಿರಿಗೆ ವಿಶೇಷ ರೀತಿಯ ಅಧಿಕಾರಗಳಿರುವುದು ಗುರುತಿಸಬಹುದು.

## ಮಾತೃಪ್ರಧಾನ ವ್ಯವಸ್ಥೆಯ ಮೂಲ

ಮಾತೃಪ್ರಧಾನ ವ್ಯವಸ್ಥೆ ನಮ್ಮ ದೇಶದಲ್ಲಿ ಅಷ್ಟೇ ಅಲ್ಲ ಇಡೀ ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವುದು ಬಹುವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಮಾತೃಮೂಲ ಕುಟುಂಬಗಳು ಎಲ್ಲಡೆ ಅಸ್ತಿತ್ವದಲ್ಲಿರುವುದು ಕಂಡು ಬರುತ್ತದೆ. "ಮಾತೃ ಮೂಲ ಕುಟುಂಬ ಆಚರಣೆಯಲ್ಲಿರುವ ಸಮುದಾಯಗಳು;ಎಸ್ಕಿಮೋ, ಮಲಯ ದ್ವೀಪವಾಸಿಗಳು, ಒಡಾಮಾ ಇಂಡಿಯನ್ನರು, ಲ್ಯಾಬ್ರಿಯಾಂಡ ಇರಾಕ್ವಿಯನ್ನರು- ಮುಂತಾದ ಸಮುದಾಯಗಳಲ್ಲಿ ಇಂತಹ ಕುಟುಂಬ ವ್ಯವಸ್ಥೆ ಈಗಲೂ ಇದೆ. ದ.ಭಾರತದ ನಾಯರ್ ಜನಾಂಗದಲ್ಲಿ ಹಾಗೂ ದಕ್ಷಿಣ ಕನ್ನಡದ ಬಂಟರಲ್ಲಿ ಈ ಬಗೆಯ ಕುಟುಂಬ ವ್ಯವಸ್ಥೆ ಇತ್ತಿಚೀನ ಕಾಲದವರೆಗೂ ಅಸ್ತಿತ್ವದಲ್ಲಿತ್ತು. "[೩] ಎಂಬುದು ಗಮನಿಸಬಹುದು. ಮಾತೃಪ್ರಧಾನ ವ್ಯವಸ್ಥೆಗೆ ಮೂಲ ಕಾರಣ ಸಮಾಜದಲ್ಲಿ ಮಾತೆಯ ಸ್ಥಾನಕ್ಕೆ ಸಂದ.ಗೌರವ . ಹೆರುವ-ಹೊರುವ-ಪಾಲಿಸುವ ಹೆಣ್ಣು ಸಹಜವಾಗಿ ಮಾನ್ಯತೆ ಪಡೆದಳು.

ಕೃಷಿ ಹಾಗೂ ಪಶು ಪಾಲನಾ ಸಂಸ್ಕೃತಿಯಿಂದ ಹಾದು ಬಂದ ಹೆಣ್ಣು ಪ್ರಾರಂಭದಲ್ಲಿ ಮಾನ್ಯಳಾಗಿ ಬದುಕಿದಳು ಎಂಬುದು ಒಂದು ಅಭಿಮತ . ಕುಟುಂಬ ವ್ಯವಸ್ಥೆ ರಚನೆಗೊಳ್ಳದ ಪೂರ್ವದಲ್ಲಿ ಅಂದರೆ ಮಾನವ ಅಲೆಮಾರಿಯಾಗಿ ಬದುಕು ಸಾಗಿಸುವಾಗ ಮಕ್ಕಳನ್ನು ಪಡೆದ ಹೆಣ್ಣು ಸಹಜವಾಗಿಯೇ ಒಂದು ಕಡೆ ನೆಲೆ ನಿಂತಿರಬೇಕು. ಅವುಗಳ ಪಾಲನೆ ಪೋಷಣೆ ಕಾರಣವಾಗಿ ನೆಲೆ ನಿಂತ ಹೆಣ್ಣು ಕೃಷಿ, ಪಶು ಸಂಗೋಪನಾ ಕಾರ್ಯಗಳಲ್ಲಿ ತೊಡಗಿ, ತನ್ನ ಕುಟುಂಬಕ್ಕೆ ಅಧಿಪತಿಯಾಗಿ ಮುಂದುವರೆದಿರುವುದು ಸಹಜವೇ ಆಗಿದೆ. ಜಗತ್ತಿನಾದ್ಯಂತ ಈ ಪ್ರಕ್ರೀಯೆ ನಡೆದಿರಬೇಕು. ಅದಕ್ಕಾಗಿಯೆ ಮಾತೃಆರಾಧನಾ ಪದ್ಧತಿ ಬಹುತೇಕ ಎಲ್ಲ ದೇಶಗಳಲ್ಲಿ ಕಾಣಬಹುದಾಗಿದೆ. "ಕಲ್ಟ್ ಆಫ್ ದ ಗೊಡ್‌ಸೆಸ್ ಎಂಬ ಕೃತಿಯಲ್ಲಿ ಜೇಮ್ಸ ಪ್ರೆಸ್ಟನ್ ಹೀಗೆ ಹೇಳಿದ್ದಾರೆ. 'ನವಶಿಲಾಯುಗದ ಕಾಲದಿಂದಲೂ ಅಂದರೆ ಸುಮಾರು ೩೦,೦೦೦ ವರುಷಗಳಿಂದಲೂ ದೇವೀ ಪೂಜೆ ನಡೆದುಕೊಂಡು ಬಂದಿದೆ.ಎಂಬುದಕ್ಕೆ ಆಧಾರಗಳಿವೆ. ಪ್ರಾಕ್ತನ ಶಾಸ್ತ್ರಜ್ಞರು ಯೂರೋಪಿನ ಉದ್ದಗಲಕ್ಕೂ ಸಣ್ಣ ಸಣ್ಣ ದೇವಿ ವಿಗ್ರಹಗಳನ್ನು ಹೊರತೆಗೆದಿದ್ದಾರೆ. ಯೋನಿ ಹಾಗೂ ಕುಚಗಳ ಮೇಲೆ ವಿಶೇಷ ಒತ್ತುಕೊಟ್ಟಿರುವ ಈ ವಿಗ್ರಹಗಳು ಸಂತಾನಾಭಿವೃದ್ಧಿಗಾಗಿ ಆಚರಿಸಲ್ಪಡುತ್ತಿದ್ದ ವಿಧಿಗಳ ಜೊತೆಯಲ್ಲಿನ ಸಂಬಂಧವನ್ನು ಸೂಚಿಸುತ್ತವೆ. ಮಾತೃಪೂಜೆ ವಿಶ್ವದ ಎಲ್ಲೆಡೆಯಲ್ಲಿ ಆಚರಣೆಯಲ್ಲಿದ್ದಿರಬೇಕು. ಕ್ರಿ.ಪೂ ಯುಗದ ಯೂರೋಪಿನಲ್ಲಿ ಪ್ರಚಲಿತವಾಗಿದ್ದ ಧರ್ಮಗಳ ಒಂದು ಭಾಗವಾಗಿದ್ದಿರಬೇಕು. ಪ್ರಾಚೀನ ಗ್ರೀಸ್ ಹಾಗೂ ರೋಮಿನಲ್ಲೂ

ದೇವೀ ಪಂಥಗಳು ಶಕ್ತಿಯುತವಾಗಿದ್ದವು. ಐರ್ಲೆಂಡ, ಜರ್ಮಾನಿಕ್ ಯೂರೋಪುಗಳಲ್ಲೂ ಪ್ರಾಚೀನ ಹಿಬ್ರೂ ಜನರಲ್ಲೂ ದೇವಿ ಪಂಥ ಪ್ರಬಲವಾಗಿತ್ತು. "[?] ಎಂಬುದನ್ನು ಗಮನಿಸಬಹುದು.

ಪ್ರಾಚೀನ ಕಾಲದಲ್ಲಿ ಗ್ರೀಕರಿಗೆ 'ಅಥೆನಾ' 'ಆರ್ಟಮಿಸ್' ರೋಮ್ ಜನರಿಗೆ 'ಮಿನರ್ವ' ಡಯಾನ್, ಮೀನಸ್. ಈಜಿಪ್ತ ಜನರು ಐಸಿಸ್ ಎನ್ನುವ ಮಾತೃದೇವತೆಗಳನ್ನು ಆರಾಧಿಸುತ್ತಿರುವುದು ಕಂಡು ಬರುತ್ತದೆ.ಭೂ ಉತ್ಖನನದಿಂದಾಗಿ ಜಗತ್ತಿನಾದ್ಯಂತ ಹಲವು ಸ್ತ್ರೀ ವಿಗ್ರಹಗಳ ದೊರೆತಿರುವುದು ಗಮನಿಸಬಹುದು. ಮಾತೃಪ್ರಧಾನತೆಗೆ ಜಗತ್ತಿನಾದ್ಯಂತ ದೊರೆಯುವ ಈ ವಿಗ್ರಹಗಳೇ ಸಾಕ್ಷಿಯಾಗಿವೆ. " ಸ್ತ್ರೀ ದೇವತೆಗಳ ವಿಗ್ರಹಗಳಿರುವಂತೆಯೇ ಇರುವ ಮೂರ್ತಿಗಳು ಬಹು ಸಂಖ್ಯೆಯಲ್ಲಿ ಪರ್ಷಿಯ, ಹಾಗೂ ಈಜಿಯನ್, ಮೆಸ್‌ಪೊಟೀಮಿಯ, ಟ್ರಾನ್ಸಕ್ಯಾಪ್ಸಿಯ, ಏಷ್ಯಾಮೈನರ್ , ಸಿರಿಯ , ಪ್ಯಾಲ ಸ್ಟೈನ್ ಸೈಪ್ರಸ್, ಕ್ರೀಟ್ , ಬಾಲ್ಕನ್ಸ ಹಾಗೂ ಈಜಿಪ್ತಗಳಲ್ಲಿ ದೊರಕಿವೆ. ಎಂದು ಮೊಹೆಂಜೋದಾರೋ ಹಾಗೂ ಸಿಂಧು ನದಿಯ ನಾಗರಿಕತೆ ಎಂಬ ಗ್ರಂಥವನ್ನು ಬರೆದ ಸರ್ ಜಾನ್ ಮಾರ್ಷನ್ ಅವರು ತಿಳಿಸಿದ್ದಾರೆ. ಮಾತೃಪೂಜೆ, ಕುಲದೇವತೆಯರ ಪೂಜೆ, ನಾಗಪೂಜೆ, ವೃಕ್ಷಪೂಜೆ , ಧಾನ್ಯ ದೇವತೆಯರ ಪೂಜೆ, ಭೂಮಿ ಪೂಜೆ ಸಂತಾನೋತ್ಪತ್ತಿಗಾಗಿ ಪೂಜೆ ಇವು ಭಾರತಕ್ಕೆ ಮಾತ್ರವೇ ಸೀಮಿತವಾಗಿರದೆ ಪ್ರಾಚೀನ ನಾಗರಿಕತೆಗಳಲ್ಲಿ ವ್ಯಾಪಕವಾಗಿ ಹಬ್ಬಿದ್ದ ಧಾರ್ಮಿಕ ವಿಧಿ ಎಂಬುದು ನಿರ್ವಿವಾದ.The Golden Bough ಕೃತಿಯಲ್ಲಿ ಫ್ರೇಸರ್ ಅವರು The Corn Mother in America, The Rice Mother in East Indies, The Double, Personification of the Corn as Mother and Daughter ಮೊದಲಾದವವುಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ದವಸ ಧಾನ್ಯಗಳನ್ನು 'ತಾಯಿ' ಯೆಂದು ಪೂಜಿಸುವದು ಅತ್ಯಂತ ಸಹಜ. "[?] ಅಂದರೆ ಮಾತೃಪ್ರಧಾನತೆ ಮಾನವನ ನಾಗರಿಕತೆಗಿಂತಲೂ ಮೊದಲಿನದು ಎನ್ನಬಹುದು. ಮಗುವನ್ನು ಹೆರುವ ಶಕ್ತಿ ಇರುವವಳು ಹೆಣ್ಣು ಗರ್ಭಾಶಯವೇ ಆಕೆಯನ್ನು ಮಹತ್ವದ ಶಕ್ತಿವಂತಳಾಗಿ ಬಿಂಬಿತಳಾಗಲು ಸಹಕರಿಸಿತು. ಭಾರತದಾದ್ಯಂತ ಶಕ್ತಿ ದೇವತೆಗಳ ಆರಾಧನೆಯೂ ಈ ಹಿನ್ನಲೆಯಲ್ಲಿಯೇ ಬೆಳೆದು ಬಂದದ್ದು ಕಾಣಬಹುದು.

ಮಾನವನು ಒಂದು ಕಡೆ ನೆಲೆ ನಿಲ್ಲುವ ಪೂರ್ವದಲ್ಲಿಯೇ ಬೇಟೆಯಾಡುವ ಗಡ್ಡೆಗೆಣಸು ಸಂಗ್ರಹಿಸುವ ಕಾರ್ಯಗಳನ್ನು ಹೆಣ್ಣು- ಗಂಡು ಸಮಾನರಾಗಿಯೇ ಕಾರ್ಯ ನಿರ್ವಹಿಸುತ್ತಿದ್ದದು ಗಮನಿಸಬಹುದು. ಆದರೆ ಮಕ್ಕಳನ್ನು ಹೆರುವ ಹಾಗೂ ಪಾಲನೆ ಮಾಡುವ ಜವಾಬ್ದಾರಿಗಳು ಸಹಜವಾಗಿ ಹೆಣ್ಣುಮಕ್ಕಳನ್ನು ಒಂದೇ ಕಡೆ ನಿಲ್ಲುವಂತೆ ಮಾಡಿರಲು ಸಾಕು. ಮಕ್ಕಳನ್ನು ಪಡೆಯುವ ಶಕ್ತಿ ಹೆಣ್ಣಿಗೆ ಮಾತ್ರ ಒದಗಿ ಬಂದಿರುವ ಕಾರಣಕ್ಕಾಗಿ ಅಂದು ಹೆಣ್ಣು ಮುಖ್ಯಳಾದಂತೆ ತೋರುತ್ತದೆ. "ಭಾರತೀಯ ನಾಗರಿಕತೆಯ ಮೂಲದಲ್ಲಿ ಮಾತೃಪ್ರಧಾನ ಸಮಾಜದ ಇತಿಹಾಸವಿರುವ ಕಾರಣವು ಅಸ್ಪಷ್ಟವೇನೂ ಅಲ್ಲ. ಏಕೆಂದರೆ, ಸಾಧಾರಣವಾಗಿ ಈ ದೇಶದ ಜನರು ಪಶುಪಾಲನೆಯ ಮೇಲೆ ಅವಲಂಬಿತರಾಗಿಲ್ಲ. ಬದಲಾಗಿ, ವ್ಯವಸಾಯದ ಮೇಲೆ ಅವಂಬಿತರಾಗಿದ್ದಾರೆ. ಈ ಕೃಷಿ ಕಾರ್ಯ ಸ್ತ್ರೀ ಯ[?] ಆವಿಷ್ಕಾರ. ಕೃಷಿಕೆಲಸವನ್ನು ಅವಲಂಬಿಸಿ ಬೆಳೆದ ಸಮಾಜದಲ್ಲಿ ಸ್ತ್ರೀಯರೇ ಮುಖ್ಯರು, ತಾಯಂದಿ[?]ೀ ಮಾನ್ಯರು

"[6] ಎಂಬುದನ್ನು ಒಪ್ಪಬಹುದು. ಮಾತೃಪ್ರಧಾನತೆ ವ್ಯವಸ್ಥೆಗೆ ಒಳಗಾದ ಕುಟುಂಬಗಳ ಹೆಳ ಹೆಸರಿಲ್ಲದೆ ಕಾಣೆಯಾದರೂ ಅಲ್ಲಲ್ಲಿ ಕಂಡು ಬರುವ ಕೆಲ ಬುಡಕಟ್ಟು ಜನಾಂಗಗಳಲ್ಲಿ ಮಾತೃಆರಾಧನಾ ಸಂಸ್ಕೃತಿಯಲ್ಲಿ ಮಾತೆಯರು ಮಾನ್ಯಳಾಗಿದ್ದರು ಎಂಬುದನ್ನು ಅರಿತುಕೊಳ್ಳಬಹುದಾಗಿದೆ.

ಹೆರುವ-ಹೊರುವದು ಅಷ್ಟೇ ಅಲ್ಲ ಕೃಷಿಗೆ ಸಂಭಂಧಿಸಿದ ಬಹುತೇಕ ಎಲ್ಲ ಜವಾಬ್ದಾರಿಗಳನ್ನು ಮಾತೆಯರೆ ನಿಭಾಯಿಸುತ್ತಿದ್ದರು. ಆದರೆ ಅವರ ಕಣ್ಣಿಗೆ, ಹೆಣ್ಣು ಜೀವವೊಂದರ ಮರು ಸೃಷ್ಠಿ ಮಾಡುವ ಶ್ರೇಷ್ಠ ನೆಲೆ ಎಂಬ ನಿಲುವಿನವರಾಗಿದ್ದರು ಆ ಕಾರಣಕ್ಕಾಗಿಯೇ ಜಗತ್ತಿನಾದ್ಯಂತ ಹೆಚ್ಚಾಗಿ ಮಾತೃ ಆರಾಧನೆಯ ಕುರುಹುಗಳು ನಮಗೆ ದೊರೆಯುತ್ತವೆ. ಮಾತೃಪ್ರಧಾನ ಕುಟುಂಬಗಳ ವ್ಯವಸ್ಥೆಗೆ ಮೂಲ ಆಕೆ ಜೀವ ವೊಂದಕ್ಕೆ ಜನ್ಮ ನೀಡುವ ಸೃಷ್ಠಿಯ ಚಮತ್ಕಾರ ,ಮಾತೃಆರಾಧನೆ , ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇವು ಸಾಗಿಬಂದ ದಾರಿ ಮೂಲ ನೆಲೆ ಇರುವುದು ಹೆಣ್ಣಿನಲ್ಲಿರುವ ತಾಯ್ತನದ ಶಕ್ತಿ. ಈ ಮೂಲಕ ಪ್ರಾಚೀನ ಕಾಲದಿಂದಲೂ ಹೆಣ್ಣನ್ನು ಮುಖ್ಯಳಾಗಿ ಕಂಡದ್ದು ಸ್ಪಷ್ಟವಿದೆ.

## ಮಾತೃತ್ವದ ಆರಾಧನಾ ಪದ್ಧತಿ

ಮಾನವನ ನಾಗರಿಕ ಹಂತಕ್ಕಿಂತಲೂ ಪೂರ್ವದ ಕಾಲದಿಂದಲೇ ಮಾತೆಯರು ಮಾನ್ಯರಾಗಿ ದ್ದರು ಎಂಬುದು ಬಹುತೇಕ ಎಲ್ಲ ವಿದ್ವಾಂಸರು ಒಪ್ಪಿಕೊಂಡ ಮಾತು. ಮಾತೆಯರಿಗೆ ದೊರೆತ ಮಾನ್ಯತೆ ಕಾರಣವಾಗಿ ಮಾತೃಪೂಜೆಯ ಸಂಸ್ಕೃತಿ ನಮ್ಮಲ್ಲಿ ಬೆಳೆದು ಬಂದದ್ದು ಕಾಣಬಹುದು. ಹಳೆ ಶಿಲಾಯುಗದ ಕಾಲದಿಂದಲೂ ಮಾತೃದೇವತೆಗಳನ್ನು ಪೂಜಿಸುತ್ತಬರುತ್ತಿದ್ದಾರೆ ಎಂಬುದಕ್ಕೆ ಹಲವು ವಿದ್ವಾಂಸರು ಒಪ್ಪುತ್ತಾರೆ. ಭಾರತದ ಮಟ್ಟಿಗೆ ಹೇಳಬೇಕೆಂದರೆ ಸಿಂಧೂ ಸಂಸ್ಕೃತಿಯಲ್ಲಿ ಮಾತೃದೇವತೆಯನ್ನು ಭೂಮಿಯ ತಾಯಿಯೆಂದೂ, ಮಾನವರ ಮಾತೆಯೆಂದೂ, ದೇವತೆಗಳ ತಾಯಿ ಎಂದೂ, ಅರಣ್ಯ, ಪ್ರಾಣಿ, ಧಾನ್ಯ, ಪಕ್ಷಿ ಇವುಗಳ ಮಾತೃವೆಂದೂ ಪೂಜಿಸಲಾಗಿದೆ. ಸ್ತನ, ಗರ್ಭ, ಯೋನಿ, ಇವುಗಳನ್ನು ಮಾತೃದೇವತೆಯ ಸಂಕೇತಗಳೆಂದು ಅವರು ಭಾವಿಸಿದ್ದರು. ಈ ಮೂರು ಅಂಗಗಳು ಮೂರು ಮುಖ್ಯ ಚಟುವಟಿಕೆಗಳನ್ನು ಮಾಡುತ್ತವೆ.ಅವು ಪಾಲನೆ, ಧಾರಣೆ ಮತ್ತು ಸೃಷ್ಟಿ . ಸಿಂಧೂ ಸಂಸ್ಕೃತಿಯಲ್ಲಿ ದೊರೆತಿರುವ ಉಗ್ರಾಕಾರದ ಕಲ್ಲುಗಳನ್ನು ಮಾತೃದೇವತೆಯ ಸೃಷ್ಟಿಯ ಅಂಗವಾದ ಯೋನಿ ಎಂದು ಭಾವಿಸಲಾಗಿದೆ. "[7] ಅಂದರೆ ಮಾತೃತ್ವದ ಆರಾಧನೆಯನ್ನು ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ಮಾತೃತ್ವವನ್ನು ಆರಾಧಿಸುವವರು ಭೂಮಿಯನ್ನು ತಾಯಿಯಾಗಿ ಕಂಡರು. ಅದರಂತೆ ತಾಯಿಯಲ್ಲಿ ಭೂಮಿಯ ಗುಣಗಳನ್ನು ಗುರುತಿಸಿದರು.

ಮನುಷ್ಯನಿಗೆ ಮೂಲವಾಗಿ ಬೇಕಿರುವುದು ಭೂಮಿ. ಇದಿಲ್ಲದಿದ್ದರೆ ಮನುಷ್ಯನಿಗೆ ಅಷ್ಟೇ ಅಲ್ಲ ಯಾವ ಜೀವಿಗೂ ಅಸ್ತಿತ್ವವಿಲ್ಲ. ಜೀವಿಗೆ ಬೇಕಾಗಿರುವ ಮೂಲಭೂತವಾದ ಎಲ್ಲ ಅವಶ್ಯಕತೆಗಳು ಪೂರೈಕೆಯಾಗುವುದು ಭೂಮಿಯಿಂದಲೇ. ಆಹಾರಕ್ಕಾಗಿ ಅಲೆದಾಡುತ್ತಿದ್ದ ಮನುಷ್ಯ ತಾನು ಇದ್ದಲ್ಲಿಯೇ ಧಾನ್ಯಗಳನ್ನು ಉತ್ಪಾದಿಸಲು ಪ್ರಾರಂಭ ಮಾಡಿದ. ಭೂಮಿಯಿಂದ ಬೀಜ ಮೊಳಕೆಯಾಗಿ

ಹೊರಬರುವುದು ಕಂಡು ವಿಸ್ಮಯಗೊಂಡ. ಇದೆ ಪ್ರಕ್ರೀಯೆ ಹೆಣ್ಣಿನಲ್ಲಿ ಕಂಡು ಮಾನವ ಉತ್ಪಾದನೆಯ ಮೂಲ ಘಟಕ ಹೆಣ್ಣಿನಿಂದಲೇ ಎಂಬುದನ್ನು ಅರಿತ. ಗರ್ಭಧರಿಸುವುದು, ಮಗುವನ್ನು ಹೆರುವುದು ಹಾಗೂ ಅವುಗಳ ಲಾಲನೆ-ಪಾಲನೆ ಕಾರಣವಾಗಿ ವಿಸ್ಮಯನಾಗಿ ಭಕ್ತಿ-ಭಾವತೋರಿಸಲು ಪ್ರಾರಂಭಿಸಿದ. ಇದರ ಪರಿಣಾಮವಾಗಿ ಭೂಮಿ ಆರಾಧನೆ, ಮಾತೃವಿಗ್ರಹಗಳ ಆರಾಧನೆ ಮತ್ತು ಯೋಗಿ ಆರಾಧನಾ ಪದ್ಧತಿಗಳು ಜಾರಿಯಲ್ಲಿ ಬಂದವು.

## ಭೂಮಿ ಆರಾಧನೆ ಮತ್ತು ಮಾತೃತ್ವ

ಭೂಮಿ ಹಾಗೂ ಹೆಣ್ಣಿಗೆ ಅವಿನಾಭಾವ ಸಂಭಂಧವಿದೆ. ಹೇಗೆಂದರೆ ಭೂಮಿ ಹಾಗೂ ಹೆಣ್ಣು ಎರಡೂ ಮಹತ್ವವಾದ ಮೌಲ್ಯಯುತವಾದ ಘಟಕ ಎಂಬುದನ್ನು ಇತಿಹಾಸದುದ್ದಕ್ಕೂ ಕಂಡುಕೊಳ್ಳಲಾಗಿದೆ. ಸಂಪತ್ತಿನ ಮೂಲ ಹೆಣ್ಣು. ಇಲ್ಲಿ ಹೆಣ್ಣು ಮತ್ತು ಭೂಮಿ ಎರಡರಲ್ಲೂ ಸಮೀಕರಣ ಹೊಂದಿದ ಗುಣಗಳಿವೆ. ಭೂಮಿಯಲ್ಲಿ ಅಡಗಿದ ರಹಸ್ಯ ಎಲ್ಲವೂ ವಿಸ್ಮಯನಾಗಿ ಕಾಣುತ್ತಿದ್ದ, ಮಾನವ ಭೂಮಿಯ ಪ್ರಕೃತಿಯ ಆರಾಧನೆಯನ್ನು ಮಾಡತೊಡಗಿದ, ಜೊತೆಗೆ ಹೆಣ್ಣಿನಿಂದ ಇನ್ನೊಂದು ಜೀವ ಜನ್ಮ ಪಡೆಯುವ ಅಭೂತಪೂರ್ವ ಪ್ರಕ್ರಿಯೇ ಕಂಡು ಆಕೆಯನ್ನು ಭಕ್ತಿ-ಭಾವದಿಂದ ವೈರತ್ವಕ್ಕೆ ಎರಿಸಿರಲು ಸಾಕು. ಏಕೆಂದರೆ ಸೃಷ್ಟಿಯ ವೈಚಿತ್ರ್ಯ ಕಾರಣವಾಗಿ ಮಾನವ ಪ್ರಕೃತಿಯ ಆರಾಧನೆಯನ್ನು ಮಾಡಿದ.

ಹೆಣ್ಣಿನ ಮೂಲಕ ಜೀವವೂಂದು ಜನ್ಮ ಪಡೆಯುವುದನ್ನು ಕಂಡ ಮಾನವ ಪ್ರಕೃತಿಯ ವಿಷಯಕ್ಕೆ ಬೆರಗಾಗಿ ಭೂಮಿಯಂತೆ ಹೆಣ್ಣು ಸಹ ಆರಾಧನಾ ಯೋಗ್ಯಳು ಎಂಬ ಗೌರವಭಾವ ತೋರಿಸತೋಡಗಿದ. ಇದಕ್ಕೆ ಸಾಕ್ಷಿಯಾಗಿ ಪ್ರಾಚೀನ ಸಂಸ್ಕೃತಿಯಲ್ಲಿ ಹಲವು ಪುರಾವೆಗಳು ನಮಗೆ ದೊರೆತಿವೆ.ಇದಕ್ಕೆ ಪೂರಕವಾಗಿ ಹಲವು ವಿದ್ವಾಂಸರು ತಮ್ಮದೆ ಆದ ಅಭಿಪ್ರಾಯವೂ ಕೊಟ್ಟಿದ್ದಾರೆ. ಉದಾ:- ಹರಪ್ಪ ಮತ್ತು ಮಹೆಂಜೊದಾರೋ ಸಂಸ್ಕೃತಿಯಲ್ಲಿ ದೊರೆತ ಹಲವು ಸ್ತ್ರೀ ವಿಗ್ರಹ ಹಾಗೂ ಮುದ್ರಿಕೆಗಳು ಭೂಮಿ ಆರಾಧನೆ ಮತ್ತು ಮಾತೃತ್ವದ ಅವಿನಾಭಾವ ಸಂಭಂಧವನ್ನು ಎತ್ತಿ ಹಿಡಿಯುತ್ತವೆ. ಹರಪ್ಪಾದ ಮುದ್ರಿಕೆಯೊಂದರಲ್ಲಿ ಸ್ತ್ರೀ ವಿಗ್ರಹವೊಂದಿದೆ . ಅದು ಹೇಗಿದೆ ಎಂದರೆ ಆಕೆಯ ಗರ್ಭದ ಮೂಲಕವಾಗಿ ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿತವಾಗಿದೆ.

ಇದು ಮಾತೃತ್ವ ಹಾಗೂ ಭೂಮಿಯಿಂದ ಬೆಳೆಯೊಂದು ಮೊಳಕೆ ಒಡೆಯುವ ಬಗೆಯನ್ನು ಚಿತ್ರಿಸಲಾಗಿದೆ. ಇನ್ನೊಂದು ಬದಿಯಲ್ಲಿ ಹೆಣ್ಣು - ಗಂಡು ಇಬ್ಬರ ಚಿತ್ರ ಮೂಡಿಸಲಾಗಿದೆ . ಇಲ್ಲಿ ಗಂಡು ಚಿತ್ರದ ಕೈಯಲ್ಲಿ ಆಯುಧ ಬಂದಿದೆ. ಆತನನ್ನು ರೈತನೆಂದು ಹೇಳಬಹುದು, ಗರ್ಭದಿಂದ ಸಸ್ಯವು ಹೊರಬರುತ್ತಿರುವ ಹೆಣ್ಣನ್ನು ಮಾತ್ರದೇವತೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇದು ಭೂಮಿ ಆರಾಧನೆ ಮತ್ತು ಮಾತೃತ್ವದ ಅವಿನಾಭಾವ ಸಂಭಂಧವನ್ನು ಸೂಚಿಸುತ್ತದೆ." ಹರಪ್ಪಾ-ಮೊಹಂಜೊದಾರೋಗಳಲ್ಲಿ ಪ್ರಧಾನ ಸಂಪತ್ತೆಂದರೆ. ಈ ವ್ಯವಸಾಯದಿಂದ ಪಡೆಯುತ್ತಿದ್ದ ಫಸಲು. ಹೀಗಾಗಿ ಈ ನಾಗರಿಕತೆಗಳ ಬುನಾದಿಯಲ್ಲಿ ಮಾತೃಪ್ರಧಾನ ಸಮಾಜ ಉಳಿದುಹೋಗಿರುವ

ಸಾಧ್ಯತೆಗಳಿವೆ. ಅಲ್ಲಿ ದೊರೆತ ಸುಟ್ಟಮಣ್ಣಿನ ವಸುಮಾತಾ ಮೂರ್ತಿಗಳು ಇದಕ್ಕೆ ಸಾಕ್ಷಿಗಳಾಗಿವೆ. ಕೇವಲ ಸಿಂಧೂ ನಾಗರಿಕತೆಯ ವಿಚಾರವಷ್ಟೇ ಅಲ್ಲ, ಒಟ್ಟಂದದಲ್ಲಿ ಭಾರತೀಯ ನಾಗರಿಕತೆ ಎಂದು ಹೇಳುವಲ್ಲಿ ಅರ್ಥವಾಗುವ ಸಂಸ್ಕೃತಿಗಳು ಮಾತೃಪ್ರಧಾನ ಸಮಾಜದ ಗುರುತುಗಳಿಂದ ತುಂಬಿವೆ."[8] ಹೀಗಾಗಿ ಮಾತೃತ್ವಕ್ಕೆ ಪ್ರಧಾನತೆ ದೊರೆತಿರುವ ಕುರುಹುಗಳಲ್ಲಿ ಮಾತೃ ಆರಾಧನಾ ಪದ್ಧತಿಗಳೇ ನಮಗೆ ಸಾಕ್ಷೀ ಒದಗಿಸುತ್ತವೆ.

ವೇದಗಳು, ಪುರಾಣಗಳು ಶಾಸನಗಳು ಜನಪದ ಸಾಹಿತ್ಯದ ಇತರ ಉಲ್ಲೇಖಗಳನ್ನು ಕಾಣಬಹುದಾಗಿದೆ. ಜನಪದ ಗರತಿ ಕೂಡ ಭೂಮಿತಾಯಿಯನ್ನು ಆರಾಧಿಸುವುದಾಗಿ ಹೇಳುತ್ತಾಳೆ. ಹೇಗೆಂದರೆ

"ಏಳುತ ನಾನೆದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೊಳ ! ಭೂಮಿತಾಯಿ
ಎದ್ದೊಂದು ಗಳಿಗಿ ನೆನೆದೇನ"[9]
"ಬೂದನಿಗೆ ಬಾಸಿಂಗ ಭೂಮಿತಾಯಿಗೆ ದಂಡೆ
ಸಾಲ ಶರಣರಿಗೆ ಸರಮಾಲೆ ! ಕಟಗೊಂಡು
ಮಾದಯ್ಯ ಗೆದ್ದ ಕೈಲಾಸ "[10]
"ಬಿತ್ತೀದ ಹೊಲದಾಗ ಒತ್ತಿ ಹಾಯಾಕಿ ಯಾರ
ಮುತ್ತಿನುಡಿಯಕ್ಕಿ ಬನದಮ್ಮ ಹಾಯ್ದರ
ಬಿಚ್ಚಿ ಬಿದ್ದಾವ ಬಿಳಿಜೋಳ "[11]

ಹೀಗೆ ಜನಪದ ಹಾಡುಗಳಲ್ಲಿ ಭೂಮಿಯನ್ನು ಆರಾಧಿಸುವ ತಾಯಿಯನ್ನು ಹೋಲಿಸುವ ಪರಿಪಾಠ ಕಂಡು ಬರುತ್ತದೆ. ಭೂಮಿಗೆ ಸಮೀಪರಾದ ಜನಪದರು ಭೂಮಿಯನ್ನು ತಾಯಿಯಂತೆ ಮನ್ನಿಸಿದ್ದಾರೆ. ತಾಯವ್ವನೆಂದೆ ಸಂಭೋಧಿಸಿದ್ದಾರೆ. ಭೂಮಿಯನ್ನು ತಾಯಿಯಂತೆ ಕಾಣುವುದಾಗಲಿ ತಾಯಿಯನ್ನು ಭೂಮಿಗೆ ಹೋಲಿಸುವುದಾಗಲಿ ಈ ಸಮೀಕರಣ ಜಗತ್ತಿನಾದ್ಯಂತ ನೋಡಲು ಸಿಗುತ್ತದೆ. ಒಂದು ಜೀವವನ್ನು ಭೂಮಿಗೆ ತರಲು ತಾಯಿ ಪಡುವ ಕಷ್ಟ, ಸಹನೆ, ತಾಳ್ಮೆ ಹಾಗೂ ಮಗುವಿನ ಲಾಲನೆ-ಪಾಲನೆಯ ಕಾಳಜಿಗಳನ್ನು ತನ್ನ ಕರ್ತವ್ಯವೆಂದು ಬಗೆದು ಪರಿಪಾಲಿಸುವ ಆಕೆಯ ನಡತೆ ಸಹಜವಾಗಿಯ ಭೂಮಿಗೆ ಹೋಲಿಸಿ ದೈವತ್ವಕ್ಕೆ ಎತ್ತರಕ್ಕೇರಿಸಿರುವುದು ಕಂಡು ಬರುತ್ತದೆ. ಭೂಮಿ ಹೇಗೆ ನಮ್ಮ ಭಾರವನ್ನು ಹೊತ್ತು ಸಹಜ ಶೀಲತೆಯಿಂದ ನಿಂತಿದೆಯೋ ತಾಯಿಯು ಸಹ ತನ್ನ ಮಕ್ಕಳ ಭಾರ ಹೊತ್ತು ನಿಂತವಳು ಎಂಬ ಭಾವ ಮಾತೃ ಆರಾಧನಾ ಪದ್ಧತಿ ಚಾಲ್ತಿಯಲ್ಲಿ ಬರಲು ಕಾರಣವಾಗಿ ರಬಹುದು. ಹಾಗೂ ಪುರುಷ ಸಮಾಜದ ವೈಭವೀಕರಣದ ಆರೋಪಗಳನ್ನು ಹೆಣ್ಣು ಮಕ್ಕಳು ಯಾವುದೇ ಪ್ರಶ್ನೆಗಳಲ್ಲದೆ ಸಂತೋಷದಿಂದಲೇ ಅದನ್ನು ಒಪ್ಪಿಕೊಂಡಿರಲೂಬಹುದು.

ನಮ್ಮ ಸುತ್ತ ಮುತ್ತಲಿನ ಪರಿಸರವನ್ನು ಗೌರವಭಾವದಿಂದ ಕಾಣುವ ಪದ್ಧತಿ ನಮ್ಮ ಜನಪದರಲ್ಲಿದೆ. ಪ್ರಕೃತಿ ಪರಿಸರ, ಭೂಮಿ ಆಕಾಶ, ಸೂರ್ಯ, ಚಂದ್ರ, ಮರ-ಗಿಡ, ಬೆಟ್ಟ - ಗುಡ್ಡ ಹೀಗೆ ನಮ್ಮ ಸುತ್ತಲಿನ

ಪ್ರಕೃತಿಯನ್ನು ಆರಾಧಿಸುವುದನ್ನು ನಾವು ಕಾಣುತ್ತೇವೆ. ಪರಿಸರವನ್ನು ದೈವಿಭಾವದಿಂದ ಧಾರ್ಮಿಕ ಆಚರಣೆಗಳ ಮೂಲಕ ಪ್ರಕೃತಿಯನ್ನು ಆರಾಧಿಸುತ್ತ ಬಂದಿರುವ ವಾಡಿಕೆ ಪ್ರಾಚೀನ ಕಾಲದಿಂದಲೂ ಕಂಡು ಬರುತ್ತದೆ. ಅದರಲ್ಲೂ ನಮ್ಮೆಲ್ಲರಿಗೆ ಅನ್ನ ನೀಡುವ ಜೀವಿ ಸಂಕುಲಕ್ಕೆಲ್ಲ ಆರಾಧಿಸಲಾಗುತ್ತದೆ.

ಮಾನವನು ಪ್ರಕೃತಿಯನ್ನು ಕಂಡು ಕುತೂಹಲಕಾರಿಯಾಗಿ ಬೆರಗಾಗಿದ್ದಾನೆ. ಸುತ್ತಲಿನ ವಿಸ್ಮಯ ಅವನಿಗೆ ಬಿಡಿಸಲಾಗದ ಕಗ್ಗಂಟು ಅದಕ್ಕಾಗಿ ಪ್ರಕೃತಿಯನ್ನು ವಿಸ್ಮಯದಿಂದ ಕಂಡು ಭಕ್ತಿ ಭಾವದಿಂದ ಮಾತೃ ಸ್ವರೂಪಿಯಾಗಿ ಭೂಮಿಯನ್ನು ಕಂಡಿದ್ದಾನೆ. ಎಲ್ಲಾ ಜೀವಿಗಳಿಗೆ ಜೀವಕೊಡುವ ಚೈತನ್ಯ ಭೂಮಿಗಿದೆ. ಈ ಹಿನ್ನೆಲೆಯಲ್ಲಿ ಭೂಮಿಯನ್ನು ಆರಾಧಿಸುವ ಪದ್ಧತಿ ಎಲ್ಲೆಡೆ ಬೆಳೆದು ಬಂದಿದೆ.

ಜನಪದ ಹಬ್ಬದಾಚರಣೆಯಲ್ಲಿ ನಮಗೆ ಭೂಮಿಯ ಆರಾಧನೆ ಮಾಡುವುದು ಸಾಮಾನ್ಯವಾಗಿ ಕಂಡು ಬರುತ್ತದೆ. ಯುಗಾದಿ, ಸಂಕ್ರಾಂತಿ, ಎಳ್ಳಮಾವಸ್ಯೆಯಂಥಹ ಹಬ್ಬಗಳು ಪ್ರಕೃತಿಯ ಆರಾಧನೆಯಲ್ಲಿಯೇ ಬೆಳೆದು ಬಂದಂತವುಗಳು. ಅದರಲ್ಲೂ ಎಳಮಾವಸ್ಯೆ ಮುಖ್ಯವಾಗಿ ಭೂತಾಯಿಯ ಆರಾಧನೆ ಮಾಡುವ ಹಬ್ಬವೆಂದೆ ಹೇಳಬೇಕು.

ಫಲವತ್ತತೆಯನ್ನು ಹೊತ್ತು ನಿಂತ ಸಂಕೇತವಾಗಿ ಭೂಮಿಯನ್ನು ಗರ್ಭಿಣಿಯಂತೆ ಬಗೆದ ಜನಪದರು ಆಕೆಯನ್ನು ಆರಾಧಿಸುತ್ತಾರೆ. ಒಬ್ಬ ಗರ್ಭಧರಿಸಿದ ಹೆಣ್ಣು ಮಗಳಿಗೆ ಬಯಕೆ ಇಡೇರಿಸುವ ಆಚರಣೆ ಹೇಗೆ ನಡೆಸುತ್ತಾರೋ ಹಾಗೆ ಭೂಮಿಯನ್ನು ತಾಯಿಯಾಗಿ ಭಾವಿಸಿಕೊಂಡು ವಿವಿಧ ಬಗೆಯ ಅಡುಗೆಯನ್ನು ತಯಾರಿಸಿ ಹೊಲಕ್ಕೆ ಹೋಗಿ ಭೂಮಿತಾಯಿಗೆ ಊಣ ಬಡಿಸುವ ಹಬ್ಬವನ್ನು ಆಚರಿಸಲಾಗುತ್ತದೆ. ಈ ಹಬ್ಬ ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಆಚರಣೆಯಲ್ಲಿದೆ.

ಭೂಮಿ ತಾಯಿಗೆ ಜೋಳದ ರೊಟ್ಟಿ, ಸಜ್ಜಿರೊಟ್ಟಿ, ಕಳವೆ ಅನ್ನ, ಜೊಳದ ಬೋನ, ವಿವಿಧ ತರಕಾರಿ ಬೆರೆಸಿ ಮಾಡಿದ ಭಜ್ಜಿ, ಶೇಂಗಾ ಹೋಳಿಗೆ, ಅಂಬಲಿ, ಹೀಗೆ ಹಲವು ಬಗೆಯ ಅಡಿಗೆಯನ್ನು ಮಾಡಿ ಹೊಲಕ್ಕೆ ಹೋಗಿ ಅಲ್ಲಿ ಭೂಮಿತಾಯಿಗೆ ನೈವೈದ್ಯ ನೀಡುವ ಆಚರಣೆ ಮಾಡಲಾಗುತ್ತದೆ. ಅದಲ್ಲದೆ ಮಾಡಿದ ಆಹಾರವನ್ನು ಹೊಲದಲ್ಲಿ ಸಿಂಪಡಿಸಲಾಗುತ್ತದೆ. ಇದರಿಂದ ಭೂಮಿಯ ಫಲವತ್ತತೆ ಹೆಚ್ಚಾಗುತ್ತದೆ. ಎಂಬ ನಂಬಿಕೆ ಜನಪದರಲ್ಲಿದೆ.

## ಸ್ತ್ರೀ ವಿಗ್ರಹ ಹಾಗೂ ಯೋನಿ ಆರಾಧನೆ ಮತ್ತು ಮಾತೃತ್ವ

ಕೃಷಿಯ ಆವಿಷ್ಕಾರ ಹೆಣ್ಣಿನಿಂದಲೇ ಆಗಿದೆ ಎಂಬುದ ಹಲವು ವಿದ್ವಾಂಸರ ನಿಲುವು. ಮಕ್ಕಳ ಲಾಲನೆ-ಪಾಲನೆಗಾಗಿ ಒಂದೆಡೆ ನೆಲೆನಿಂದ ಇವಳು ಕೃಷಿಯಲ್ಲಿ ಹೊಸ ಹೊಸ ಪ್ರಯೋಗ ಮಾಡತೊಡಗಿದಳು. ಒಂದು ಕಡೆ ಮಾನವನ ನಿರ್ಮಾಣ, ಇನ್ನೊಂದಡೆ ಆಹಾರ ಉತ್ಪಾದನೆ ಮಾಡಿ ಸಮಾಜದಲ್ಲಿ ಮಾನ್ಯತೆ ಪಡೆದಂತೆ ತೋರುತ್ತದೆ. ಈ ಹಿನ್ನೆಲೆಯಲ್ಲಿ ಮಾತೃದೇವತೆಗಳ ಆರಾಧನೆಗೆ ಮೂಲ ಕಾರಣವು ಆಯಿತು. ಹೆಣ್ಣನ್ನು ಭೂಮಿಯನ್ನು ಶಕ್ತಿ ಸ್ವರೂಪಳನ್ನಾಗಿ ಕಾಣಲಾಯಿತು. ಪ್ರಾಚೀನ ಅವಶೇಷಗಳನ್ನು ಗಮನಿಸಿದಾಗ ಸಿಗುವ ಬಹುತೇಕ ಹೆಣ್ಣಿನ ವಿಗ್ರಹಗಳೆ ಆಗಿವೆ. ಹೆಚ್ಚಾಗಿ

ಹೆಣ್ಣಿನ ಮಾತೃತ್ವದ ಸಂಕೇತಗಳಾದ ಸ್ತನ ಹಾಗೂ ಯೋನಿ ಬಿಂಬಿತವಾಗುವ ವಿಗ್ರಹಗಳನ್ನು ಕಾಣಬಹುದು.

ಜಗತ್ತಿನಾದ್ಯಂತ ಶಕ್ತಿಯ ಮೂಲ ನೆಲೆಯ ಆರಾಧನೆಯ ಆಚರಣೆಗಳು ಕಂಡು ಬರುತ್ತವೆ. "ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪೂಜ್ಯ ವಸ್ತುಗಳೆಂದು ಭಾವಿಸಿದ. ಸಮೃದ್ಧಿಯ ಆಚರಣೆಯಾಗಿ ಮಾಟ ರೂಪಗೊಂಡಿತು . ಇದರ ಮುಂದುವರೆದ ರೂಪವೇ ಶಾಕ್ತಪಂಥ. ಪ್ರಪಂಚದ ಯಾವುದೇ ಸಂಸ್ಕ ತಿಯಲ್ಲಿ ಕೃಷಿಯ ಆರಂಭದ ಕಾಲದಲ್ಲಿ ಹುಟ್ಟಿದ ಈ ಧರ್ಮವು ಒಂದೇ ಮೂಲ ಆಶಯವನ್ನು ಹೊಂದಿದ್ದು ಆಯಾ ಪ್ರದೇಶಕ್ಕೆ ಸ್ಥಾನಮಾನಗಳನ್ನು ಗಮನಾರ್ಹವಾಗಿ ಬದಲಾವಣೆ ಮಾಡಿತಲ್ಲದೆ ಅನೇಕ ಸ್ತ್ರೀ ದೇವತೆಗಳ ಹುಟ್ಟಿಗೆ ಕಾರಣವಾಯಿತು"[12] ವಿಗ್ರಹಗಳನ್ನು ಆರಾಧಿಸುವ ಪರಂಪರೆ ಪ್ರಾರಂಭವಾಯಿತು. ಇದಕ್ಕೆ ಸಾಕ್ಷಿಯಾಗಿ ಪ್ರಪಂಚದಾದ್ಯಂತ ದೊರೆತಿರುವ ಸ್ತ್ರೀ ವಿಗ್ರಹಗಳನ್ನು ನೋಡಬಹುದು.

ಸಿಂಧೂ ಕಣವೆ, ಯುರೋಪ್ ಖಂಡ, ಪಶ್ಚಿಮ ಏಷ್ಯಾ ಮೊದಲಾದ ಕಡೆ ದೊರೆತ ಸ್ತ್ರೀಯ ವಿಗ್ರಹಗಳು ಮಾತೃ ಆರಾಧನ ಪದ್ಧತಿಯ ಆಚರಣೆ ಕುರಿತು ಮಾಹಿತಿ ಒದಗಿಸುತ್ತವೆ. ಹಳೆಯ ಶಿಲಾಯುಗದ ಸಂದರ್ಭದಲ್ಲಿ ದೊರೆತ ವೀನಸ್ ಎಂದು ಕರೆಯಲಾಗುವ ವಿಗ್ರಹಗಳ ಮಾತೃ ಆರಾಧನಾ ಪದ್ಧತಿ ಜಾರಿಯಲ್ಲಿರುವುದಕ್ಕೆ ಸಾಕ್ಷೀ ಒದಗಿಸುತ್ತವೆ . ಹೊಸ ಶಿಲಾಯುಗ ಸಂದರ್ಭದಲ್ಲೂ ಮಾತೃ ವಿಗ್ರಹಗಳು ವಿಫಲವಾಗಿ ದೊರೆತದ್ದು ಕಂಡು ಬದುತ್ತದೆ. ಇದಕ್ಕೆ ಉದಾಹರಣೆಯಾಗಿ 'ಮಾಲ್ತಸ್' ಎಂಬ ದೇವತೆಯನ್ನು ಕಾಣಬಹುದು. ಹೊಸ ಶಿಲಾಯುಗದ "ಈ ಕಾಲಘಟ್ಟದಲ್ಲಿ ಸಸ್ಯವು ಬೆಳೆಯಲು ಕಾರಣವಾಗುವ ಬೀಜದ ಪಾತ್ರವನ್ನು ಮಾನವನು ಅರಿತಿರಲಿಲ್ಲ . ಹಾಗೆಯೇ ಮಗುವಿನ ಸೃಷ್ಟಿಗೆ ಕಾರಣವಾಗುವ ಪುರುಷನ ಪಾತ್ರವೂ ತಿಳಿದಿರಲಿಲ್ಲ . ಆದ್ದರಿಂದ ಸೃಷ್ಟಿಕಾರ್ಯ ಹೆಣ್ಣು ಮತ್ತು ಭೂಮಿಯಿಂದ ಮಾತ್ರ ಸಾಧ್ಯ ಎಂದು ಭಾವಿಸಲಾಗಿತ್ತು. ಮನುಷ್ಯನ ಈ ಭಾವನೆ ಸ್ತ್ರೀ ಆರಾಧನೆಗೆ ದಾರಿ ಮಾಡಿಕೊಟ್ಟಿತು. "[೧೩] ಹೀಗೆ ಸ್ತ್ರೀ ವಿಗ್ರಹಗಳನ್ನು ಆರಾಧನೆ ಮಾಡಲು ಪ್ರಾರಂಭ ಮಾಡಿದ ಮಾನವನು ಮುಂದೆ ಮಂತ್ರ , ತಂತ್ರ , ಬಲಿ , ಆಚರಣೆ ಕುಣಿತಗಳಂತಹ ಆಚರಣಾ ಪದ್ಧತಿಗಳು ಹುಟ್ಟಿಕೊಂಡಂತೆ ತೋರುತ್ತದೆ.

ಅದರಲ್ಲೂ ಭಾರತದಲ್ಲಿ ಮುಂದೆ ಬಹುದೊಡ್ಡ ಶಾಕ್ತಪರಂಪರೆ ಬೆಳೆಯಲು ಕಾರಣವೂ ಆಯಿತು. "ಪಶ್ಚಿಮ ಏಷ್ಯಾದ ಕೆಲವು ಪ್ರದೇಶಗಳಲ್ಲಿ ಸಿಕ್ಕಿರುವ ಮಣ್ಣಿನ ರಚನೆಗಳು ಕಂಚಿನ ಯುಗಕ್ಕೆ ಸಂಭಂಧಿಸಿದವೆಂದು ಹೇಳಲಾಗಿದೆ . ಕೈಗಳಿಂದ ಸ್ತನಗಳನ್ನು ಹಿಡಿದುಕೊಂಡಿರುವ ನಗ್ನವಾದ ಸ್ತ್ರೀಯರ ಈ ಪ್ರತಿಮೆಗಳು ಮಾತೃದೇವತಾ ಆರಾಧನೆಗೆ ಸಂಭಂದಿಸಿದ್ದವೆಂದು ಭಾವಿಸಲಾಗಿದೆ .ಮಗುವಿಗೆ ಹಾಲೂಡಲು ಹೀಗೆ ಸ್ತನಗಳನ್ನು ಕೈಗಳಿಂದ ಹಿಡಿದುಕೊಂಡಿರಬಹುದೆಂದು ಭಾವಿಸಲಾಗಿದೆ. ಮಾತೃದೇವತೆಯು ಹಾಲನ್ನು ಕೊಡುವವಳಾಗಿ, ಪೋಷಕಳಾಗಿ ಇಲ್ಲಿ ಕಾಣಿಸಿಕೊಳ್ಳುತ್ತಾಳೆ. ಜಗತ್ತಿನಾದ್ಯಂತ ದೊರೆತಿರುವ ನಗ್ನವಾದ ಸ್ತ್ರೀ ವಿಗ್ರಹಗಳು ಕಂಚಿನಯುಗದವೆಂದು ಭಾವಿಸಲಾಗಿದೆ. ಪಶ್ಚಿಮ ಏಷ್ಯಾ,

ಮೆಸಪೋಟೀಮಿಯಾ, ಪ್ರಾಚೀನ ಇರಾನ್ ಮತ್ತು ಗಂಗಾ ನದಿಯ ತೀರದವರೆಗೂ ಇವು ದೊರೆತಿವೆ. ನಗ್ನತೆಯು ಮಾತೃ ದೇವತೆಯ ಸಾರ್ವತ್ರಿಕ ಲಕ್ಷಣವಾಗಿದ್ದು ಈ ದೇವತೆಯ ಪಂಥ ಜಗತ್ತಿನಾದ್ಯಂತ ಜನಪ್ರಿಯವಾಗಿರುವುದನ್ನು ಗಮನಿಸಬಹುದು."[೧೪] ಹಾಗೆಯೇ ಉತ್ತರ ಭಾರತ ಅಷ್ಟೇ ಅಲ್ಲ, ದಕ್ಷಿಣಭಾರತದಲ್ಲೂ ಸಹ ಮಾತೃದೇವತೆಯ ಆರಾಧನೆ ಹೆಚ್ಚಾಗಿರುವುದು ಗಮನಿಸಬಹುದು. ಅಮ್ಮಾ ಎಂತಲ್ಲೂ ಅಥವಾ ಅವ್ವಾ ಎಂತಲ್ಲೂ ಸಂಭೋದಿಸಲ್ಪಡುವ ಹಲವು ಮಾತೃದೇವತೆಯ ಆರಾಧನೆ ಇಂದಿಗೂ ಪ್ರಚಲಿತದಲ್ಲಿದೆ.

ಪ್ರಪಂಚದಾದ್ಯಂತ ಸ್ತ್ರೀ ವಿಗ್ರಹಗಳನ್ನು ಶಕ್ತಿದೇವತೆಯಾಗಿ, ಧಾನ್ಯದೇವತೆ, ಕುಲದೇವತೆ, ಭೂದೇವತೆ, ಮಾತೃದೇವತೆ ಹೀಗೆ ಮುಂತಾದ ರೂಪಗಳಲ್ಲಿ ಆರಾಧನೆ ಮಾಡುವ ಪದ್ಧತಿಯನ್ನು ಪ್ರಾಚೀನ ಕಾಲದಿಂದ ಕಂಡು ಬರುತ್ತದೆ. ಮಾನವ ಅನಾಗರಿಕನಿಂದ ನಾಗರಿಕತೆಯ ಕಡೆಗೆ ಸಾಗಿದ ಪಯಣದಲ್ಲಿ ತನ್ನಲ್ಲಿ ಉಂಟಾದ ಭಯ, ಆತಂಕ, ಸು:ಖ, ದು:ಖ, ಸಂಭ್ರಮ, ರೋಗ-ರುಜಿನಗಳಂತಹ ಬದುಕಿನ ಸಂಕೀರ್ಣತೆಗೆ ಒಳಗಾಗಿ ಹಲವು ಮಾತೃದೇವತೆಗಳ ಮೊರೆಹೋಗಿ ಆರಾಧಿಸುವ ಪರಿಪಾಠ ಪ್ರಾರಂಭಿಸಿದಂತೆ ತೋರುತ್ತದೆ. ತಾವು ವಾಸ ಮಾಡಿದ ಕಡೆಗಳಲೆಲ್ಲ ದೇವತೆಗಳು ಹುಟ್ಟಕೊಂಡವು. "ಈ ದೇವತೆಗಳು ಊರನ್ನು ಊರಿನ ಜನರನ್ನು ಕಾಪಾಡುವವು ಎಂಬ ನಂಬಿಕೆ ಜನರಲ್ಲಿ ಬೇರೂರಿತು. ಒಂದುವೇಳೆ ಮಾರಕ ಶಕ್ತಿಗಳು ಊರನ್ನು ಪ್ರವೇಶಿಸಿದರೆ ಆ ಮಾರಕ ಶಕ್ತಿಗಳನ್ನು ಈ ದೇವತೆಗಳೇ ಹೊಡೆದೋಡಿಸುತ್ತಾರೆ. ಈ ದೇವತೆಗಳನ್ನು ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯುವರು. ಮಾರಿಯಮ್ಮ ಮಧ್ಯಭಾರತದಲ್ಲಿ (ಮಾರಿ, ಭವಾನಿ, ಪ್ಲೇಗ್) ಗಯಾ ಜಿಲ್ಲೆಯಲ್ಲಿ ಮತ್ತು ಮುಂಬಯಿಯಲ್ಲಿ ಮಾಯಿ, ಬಂಗಾಳದಲ್ಲಿ ಓಲಾಯಿ, ಚಂಡಿ ದಕ್ಷಿಣ ದೇಶದಲ್ಲಿ ಪೆದ್ದಮ್ಮ, ಅಣ್ಣಮ್ಮ, ನೂಕಲಮ್ಮ, ದುರ್ಗಮ್ಮ, ಕಾಳಮ್ಮ, ಮಾರಮ್ಮ, ಚೌಡಮ್ಮ ಹೀಗೆ ಹಲವಾರು ಹೆಸರುಗಳಿಂದ ಕರೆಯುವುದು ಕಂಡು ಬರುತ್ತದೆ. "[೧೫] ಇಲ್ಲಿ ಮುಖ್ಯವಾಗಿ ತಿಳಿದುಬರುವ ವಿಷಯವೆಂದರೆ. ಮಾನವನ ಚರಿತ್ರೆ ತುಂಬ ಕುತೂಹಲಕಾರಿ ಆತನ ವಿಕಾಸದಾಯಕ ಪಯಣದಲ್ಲಿ ಸ್ತ್ರೀ ವಿಗ್ರಹಗಳ ಆರಾಧನೆ ನಿರಂತರವಾಗಿ ನಡೆಟೆ ಇದೆ.

ತನ್ನ ಹಸಿವನ್ನು ನಿಗಿಸಿಕೊಳ್ಳಲು ಪ್ರಾರಂಭ ಮಾಡಿದ ದಿನದಿಂದ ಹಿಡಿದು ಸಂಸ್ಕೃತಿಯನ್ನು ಮುಂದುವರೆಸುತ್ತಾ ಇಂದು ಆಧುನಿಕದವರೆಗೆ ಮಾತೃ ಆರಾಧನೆ ಒಂದೇ ಕಡೆ ನಿಲ್ಲದೆ ಹಲವಾರು ರೂಪಗಳನ್ನು ಪಡೆಯುತ್ತಾ, ಕಾಲದಿಂದ ಕಾಲಕ್ಕೆ ಅದರದೇ ಆದ ಕುರುಹುಗಳನ್ನು ಇತಿಹಾಸದ ಉದ್ದಕ್ಕೂ ಪಸರಿಸುತ್ತ ಬಂದಿರುವುದಂತು ಸತ್ಯ. ಕಾರಣಾಂತರದಿಂದ ರೂಪು ಪಡೆದ ಒಂದು ಸಾಮಾಜಿಕ ವ್ಯವಸ್ಥೆ ನಿಧಾನವಾಗಿ ಕೆಲ ಆಚರಣಾ ಪದ್ಧತಿಗಳನ್ನು ರೂಢಿಸಿಕೊಂಡು ಬಂದವು. ಅವುಗಳಲ್ಲಿ ಸ್ತ್ರೀ ವಿಗ್ರಹ ಆರಾಧನಾ ಪದ್ಧತಿಯ ಬಹುಮುಖ್ಯವಾಗಿ ಚಾಲ್ತಿಯಲ್ಲಿ ಬಂದದ್ದು ನಿರ್ವಿವಾದ.

ಮಾತೃ ಆರಾಧನೆಯಲ್ಲಿ ಶಕ್ತಿದೇವತೆಯಾಗಿ ಸಪ್ತಾತೃಕೆಯನ್ನು ಪೂಜಿಸುವ ಪದ್ಧತಿಯಿದೆ. ಇಂದಿಗೂ ಗ್ರಾಮ ನಗರಗಳಲ್ಲಿ ಈ ಸಪ್ತ ಮಾತೃಕೆಯರನ್ನು ಸಂಸ್ಕೃತಿಯ ಪ್ರತೀಕವಾಗಿ ಪೂಜಿಸುವುದು ಕಂಡು ಬರುತ್ತದೆ. ಜನಪದರಲ್ಲಿ ಏಳು ಜ[illegible] ಅಕ್ಕ-ತಂಗಿಯರನ್ನು ದೇವತೆಗಳಾಗಿ ಪೂಜಿಸುವ

ಪರಿಪಾಠವಿದು. ಮೃತ್ಯುಕೂಪದಿಂದ ತಪ್ಪಿಸುವ ಶಕ್ತಿ ದೇವತೆ ಮರಗೆಮ್ಮ ಕೊತೆಯನ್ನು ಕಾಯುವ ದುರ್ಗಮ್ಮ ಸಮೃದ್ಧಿ ದೇವತೆಯಾಗಿ ಮಳೆ-ಬೆಳೆ ಸಕಾಲಕ್ಕೆ ನೀಡುವ ದೇವತೆಯಾಗಿ ದ್ಯಾವಮ್ಮ ಫಲಪ್ರಾಪ್ತಿ ನೀಡುವವಳು ಯಲಮ್ಮ ದವಸಧಾನ್ಯಗಳ ನೀಡುವವಳು ಕಾಳಮ್ಮ ಹೀಗೆ ಏಳು ಜನ ಶಕ್ತಿ ದೇವತೆಯರನ್ನು ಸಪ್ತ ಮಾತೃಕೆಯರೆಂದು ಕರೆಯಲಾಗುತ್ತದೆ. ಭಾರತದ ಹಲವು ಭಾಗಗಳಲ್ಲಿ ಸಪ್ತ ಮಾತೃಕೆಯರ ಶಿಲ್ಪಗಳನ್ನು ದೇವಾಲಯಗಳಲ್ಲಿ ಕೆತ್ತಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ಈ ಸಪ್ತ ಮಾತೃಕೆಯರನ್ನು ಬ್ರಾಹ್ಮೀ, ಮಾಹೇಶ್ವರಿ, ಕೌಮಾರಿ, ಕಾತಿಕೆಯಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಈ ದೇವತೆಗಳು ಇಂದಿಗೂ ಪೂಜೆಗೊಳ್ಳುತ್ತಿರುವುದು ಮಾತೃದೇವತಾ ಆರಾಧನಾ ಪದ್ಧತಿಗೆ ಸಾಕ್ಷಿಯಾಗಿದೆ.

## ಯೋನಿ ಆರಾಧನೆ

ಪ್ರಾಚೀನ ಕಾಲದಿಂದಲೂ ಭಾರತದಾದ್ಯಂತ ಯೋನಿ ಆರಾಧನೆ ಚಾಲ್ತಿಯಲ್ಲಿರುವುದು ವಿದ್ವಾಂಸರು ಗುರುತಿಸಿದ್ದಾರೆ. ಮಾತೃದೇವತೆಯ ಕುರುಹುವಾಗಿ ಯೋನಿ ಆರಾಧನೆ ಕಂಡು ಬರುತ್ತದೆ. ಮಾತೃತ್ವ ಮಹತ್ವವನ್ನು ಸಾರುವ ಈ ಯೋನಿ ಆರಾಧನೆ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಇದರ ಸಂಕೇತವಾಗಿ ಭಾರತದ ಹಲವು ಕಡೆಗಳಲ್ಲಿ ಯೋನಿ ಭಾಗವನ್ನು ಪೂಜಿಸುವ ವಿಗ್ರಹಗಳು ದೊರೆತಿರುವುದು ವಿಶೇಷ. ಈ ವಿಗ್ರಹಗಳು ಶಕ್ತಿಪೂಜೆಯ ಮುಖ್ಯ ಭಾಗವಾಗಿ ಬೆಳೆದು ಬಂದಿದೆ. ದೇವಾಲಯಗಳಲ್ಲಿ , ಹಳ್ಳಿಗಳಲ್ಲಿ , ಗರ್ಭಗುಡಿಗಳಲ್ಲಿ, ಬಯಲಿನಲ್ಲಿ ಹೀಗೆ ಹಲವು ಕಡೆಗಳಲ್ಲಿ ಯೋನಿ ಆರಾಧನೆ ಇಂದಿಗೂ ಕಾಣಬಹುದಾಗಿದೆ. ಈ ಆರಾಧನ ಸಂಪ್ರದಾಯವನ್ನು ಮರಾಠಿ ವಿದ್ವಾಂಸರಾದ ಡಾ. ರಾಮಚಂದ್ರ ಚಿಂತಾಮಣ ಢೇರೆ ಅವರು 'ಲಜ್ಜಾಗೌರಿ' ಸಂಪ್ರದಾಯ ಎಂದು ಗುರುತಿಸಿದ್ದಾರೆ.

'ಲಜ್ಜಾಗೌರಿ' ಕೃತಿಯಲ್ಲಿ ಢೇರೆ ಯವರು ಯೋನಿ ಆರಾಧನೆಯ ಸಂಪ್ರದಾಯದ ಕುರಿತು ಹೀಗೆ ಹೇಳಿದ್ದಾರೆ. 'ಲಜ್ಜಾಗೌರಿ ಯು ಮಾತೃದೇವತೆ, ಮಹಾಮಾತೆ, ಈಕೆ ವಿಶ್ವ ಸೃಷ್ಟಿಯ ದೇವತೆ ಎಂಬ ಕಾರಣದ ಹಿನ್ನಲೆಯಲ್ಲಿಯೇ ವೇದಪೂರ್ವ ಕಾಲದಿಂದಲೂ ಭಾರತದಾದ್ಯಂತ ಈಕೆಯ ಉಪಾಸನೆಯು ಚಾಲ್ತಿಯಲ್ಲಿದೆ. ಇಂದಿಗೂ ಅದು ಕ್ವಿಚಿತ್ ಕ್ಷೀಣ ರೂಪದಲ್ಲಿ ಉಳಿದುಕೊಂಡು ಬಂದಿರುವುದು ಗಮನೀಯ. ಉಪಾಸನ ಸಾತತ್ಯವು ಇಂದು ನ್ಯೂನವಾಗಿದ್ದರೂ, ಮಾತೃತ್ವದ ಮಹತ್ವವು ಅಜರಾಮರವಾಗಿ ಇರುವುದರಿಂದ ಆ ತತ್ತ್ವದ ಪ್ರತೀಕವಾಗಿ ಪ್ರಸಿದ್ಧ ದೇವತೆಗಳ ನಾಮ, ರೂಪ, ರಹಸ್ಯವನ್ನು ಅರಿಯಬೇಕಾದ ಜಿಜ್ಞಾಸೆಯು ಶಾಶ್ವತ ಸ್ವರೂಪದಲ್ಲಿ ಇದ್ದೇ ಇರುವುದು.

ಲಜ್ಜಾಗೌರಿಯ ಮೂಲಕ ಪ್ರಸ್ತುತ ಕೃತಿಯಲ್ಲಿ ಮಹಾಮಾತೆಯ ನಾಮ-ರೂಪ-ರಹಸ್ಯವನ್ನು ಅರಿಯುವ ಒಂದು ನಮ್ರ ಪ್ರಯತ್ನವನ್ನು ಮಾಡಲಾಗಿದೆ.

'ಲಜ್ಜಾಗೌರಿ'ಯು ಸೃಷ್ಟಿಶೀಲ ದೇವತೆಯಾಗಿದ್ದು, ಸೃಜನೇಂದ್ರಿಯದ ರೂಪದಲ್ಲಿ ಪೂಜಿಸಲ್ಪಡುತ್ತಿರುವವಳಾಗಿರುವುದರಿಂದ, ಅವಳ ಮೂರ್ತಿಯೇ ವಿಶ್ವದ 'ಗರ್ಭಗೃಹ' ವಾಗಿ ಕಾಣುತ್ತದೆ. ಈ 'ಗರ್ಭಗೃಹ 'ದ ದ್ವಾರದಲ್ಲಿ ನಿಂತು ಮಾತೃತ್ವದ ರಹಸ್ಯವನ್ನು ಅರಿಯುವ ಮತ್ತು ಲಕ್ಷ್ಯಪೂರ್ವವಾಗಿ

ದೃಷ್ಟಿಸುವ ಇಚ್ಛೆಯನ್ನು ಪೋಷಿಸುವುದು 'ಕಠಿಣ'ವೇ (AWK-ward) ಆಗಿದೆ . ಅಲ್ಲದೆ ಇದು ಅಪರಾಧಿ ಸ್ವರೂಪದ್ದೂ ಆಗಿದೆ ಎಂಬುದರ ಅರಿವು ನನಗಿದೆ . ಆದರೂ ಯಾವ ಉಪಾಸಕರು ಅವಳನ್ನು ಈ ರೂಪದಲ್ಲಿ ಕಲ್ಪಿಸಿರುವರೋ, ಸೃಷ್ಟಿಸಿರುವರೋ ಮತ್ತು ಉಪಾಸಿಸುತ್ತಾ ಬಂದಿರುವರೋ ಅವರ ಮಾತೃತ್ವ ವಿಷಯದ ಅಚಲ ಶ್ರದ್ಧೆಯು ನನ ಬೆನ್ನಿಗೆ ಇರುವುದರಿಂದ ನಾನು ಈ ವತ್ಸನ ಭೂಮಿಕೆಯಿಂದ ಈ 'ಗರ್ಭಗೃಹ' ದ ದ್ವಾರದಲ್ಲಿ ನಿಲ್ಲುವ ಧಾರ್ಷ್ಟ್ಯಕ್ಕೆ ಕೈ ಹಾಕಿದ್ದೇನೆ. ಅದು ಸಾಕ್ಷಾತ್ ಕ್ಷಮಾರ್ಹವೇ ಆಗಿದೆ' ಎನ್ನುತ್ತಾರೆ. ಯೋನಿ ಆರಾಧನಾ ಸಂಪ್ರದಾಯವಾದ 'ಲಜ್ಜಾಗೌರಿ' ಯ ಕುರಿತು ಸಂಶೋಧಕ ಈ ಮಾತುಗಳು ಮಾತೃತ್ವದ ಕುರಿತು ಇರುವ ನಮ್ಮ ಸಂಸ್ಕೃತಿಯ ಅನಾವರಣವೇ ಆಗಿದೆ. ಡಾ. ಢೇರೆ ಅವರು ಭಾತತದಾದ್ಯಂತ ದೊರೆಯುವ 'ಲಜ್ಜಾಗೌರಿ 'ಯ ಅನೇಕ ವಿಗ್ರಹಗಳ ಕುರಿತು ಮಾಹಿತಿ ಒದಗಿಸಿದ್ದಾರೆ . ಅವುಗಳಲ್ಲಿ ಮುಖ್ಯವಾಗಿರುವಂಥವುಗಳ ಚಿತ್ರಗಳನ್ನು ಕೊಟ್ಟಿದ್ದಾರೆ. ಅವುಗಳೆಂದರೆ.

1) ದಕ್ಷಿಣ ಭಾರತದಲ್ಲಿ ದೊರೆತ ಪ್ರಸವಾವಸ್ಥೆಯ ಮಾತೃದೇವತೆ ಕಾಷ್ಠ ಶಿಲ್ಪ.
2) ಮಹಾರಾಷ್ಟ್ರದ ತೇರವೆಂಬ ಊರಿನಲ್ಲಿ ದೊರೆ ಯೋನಿಮೂರ್ತಿ.
3) ಮಹಾರಾಷ್ಟ್ರದ ನೇವಾಸೆವೆಂಬ ಊರಲ್ಲಿ ದೊರೆತ ಯೋನಿಮೂರ್ತಿ.
4) ಆಂಧ್ರಪ್ರದೇಶದ ನಾಗಾರ್ಜುನಕೊಂಡದಲ್ಲಿ ದೊರೆತ ಸ್ತೂಪಶೀರ್ಷಾ ಯೋನಿಮೂರ್ತಿ.
5) ಕರ್ನಾಟಕದ ಬಾದಾಮಿಬಳಿಯಿರುವ ಮಹಾಕೂಟಿಶ್ವರದಲ್ಲಿ ದೊರೆತ ಕಮಲಶೀರ್ಷಾ ಲಜ್ಜಾಗೌರಿ.
6) ಉತ್ತರಕರ್ನಾಟಕದ ಕೇಲೂರನಲ್ಲಿ ದೊರೆತ ಸಿದ್ದನಕೋಟಿಯ ಲಜ್ಜಾಗೌರಿ ಮೂರ್ತಿ.
7) ಮಹಾರಾಷ್ಟ್ರದ ಮಾಹೂರರ್ಝುರಿಯಲ್ಲಿ ದೊರೆತ ಭೂದೇವಿ ಮೂರ್ತಿ.
8) ಮಹಾರಾಷ್ಟ್ರದ ಮಾಹೂರರ್ಝುರಿಯಲ್ಲಿ ದೊರೆತ ಶೀರ್ಷಸ್ಥಾನದಲ್ಲಿ ಚಕ್ರಾಕಾರದ ಉಂಗುರವಿರುವ ಯೋನಿಸ್ತನ ಮೂರ್ತಿ.
9) ಆಂಧ್ರಪ್ರದೇಶದ ನಾಗಾರ್ಜುನಕೊಂಡದಲ್ಲಿ ದೊರೆತ ಅಲಂಕೃತ ಯೋನಿಮೂರ್ತಿ.
10) ಮಹಾರಾಷ್ಟ್ರದ ವಡಗಾಂವ ನಲ್ಲಿ ದೊರೆತ ಪಕ್ಕದಲ್ಲಿ ನಂದಿ ಇರುವ ಯೋನಿಮೂರ್ತಿ.
11) ಮಹಾರಾಷ್ಟ್ರದ ವೇರುಳದ ರಾಮೇಶ್ವರ ಗುಹೆಯಲ್ಲಿ ದೊರೆತ ಇಬ್ಬರು ಪರಿಚರರು ಸಹಿತ ಇರುವ ಶಿರೋಯುಕ್ತ ನಗ್ನದೇವಿ.
12) ಉತ್ತರ ಪ್ರದೇಶದ ಝೂಂಸಿಯಲ್ಲಿ ದೊರೆತ ಕಮಲಶೀರ್ಷಾ ಯೋನಿಸ್ತನ ಮೂರ್ತಿ. ಹೀಗೆ ಹಲವು ರೀತಿಯ ಯೋನಿ ವಿಗ್ರಹಗಳನ್ನು ಕೂಡಿರುವುದು ನೋಡಬಹುದು.

ಇವುಗಳ ಚಿತ್ರಗಳಲ್ಲದೆ ಮಾತೃದೇವತಾ ಪ್ರತೀಕವಾದ ಯೋನಿ ವಿಗ್ರಹಗಳ ಆರಾಧನೆಯ ಕುರಿತು ತಮ್ಮ ಸಂಶೋಧನಾತ್ಮಕ ನಿಲುವನ್ನು ಮಂಡಿಸಿದ್ದಾರೆ . 'ಲಜ್ಜಾಗೌರಿ' ಸಂತಾನದಾತ್ರೀ ಮಾತೃದೇವತೆ ಮಕ್ಕಳನ್ನು ಪಡೆಯಲು ಈಕೆಯನ್ನು ಪೂಜಿಸುತ್ತಿದ್ದರು ಎಂಬುದನ್ನು ಒಪ್ಪಿದ್ದಾರೆ. ಕರ್ನಾಟಕ ಆಳಂದದ

ಆನಂದೀದೇವಿ , ಆಲಾಪೂರದ ಲಜ್ಜಾಗೌರಿ , ಬಾದಾಮಿಯ ಮಹಾಕೂಟೇಶ್ವರ ಮಂದಿರದ ಕಮಲಶೀರ್ಷಾ ಲಜ್ಜಾಗೌರಿ ಕುರಿತು ಮಾಹಿತಿ ಒದಗಿಸಿಕೊಟ್ಟಿದ್ದಾರೆ.

ಜನಪದರು ಭೂಮಿ, ಮಣ್ಣು, ಶ್ರಮಗಳಂತಹ ವಿಷಯಗಳನ್ನು ಒಂದು ಮೌಲ್ಯವಾಗಿ ಕಂಡಿದ್ದಾರೆ. ಜನಪದ ಸಂಸ್ಕೃತಿಯ ಬಹುತೇಕವಾಗಿ ಒಳಗೊಂಡಿರುವುದು ಪ್ರಕೃತಿಯನ್ನು. ತಾಯಿಯಾಗಿ, ದೈವವಾಗಿ ಗೌರವಕೊಟ್ಟು ಪೂಜಿಸಿದ್ದಾರೆ. ಪ್ರಕೃತಿ ಪ್ರೀಯರಾಗಿ ನಿಸರ್ಗ ಆರಾಧಕರಾಗಿ ನದಿ , ಹಳ್ಳ ಕೊಳ್ಳ, ಬೆಟ್ಟ,ಗಿಡ, ಮರ, ಕಾಡು ಪ್ರಾಣಿ ಪಕ್ಷಿಗಳಷ್ಟೇ ಅಲ್ಲ, ಪಂಚಭೂತಗಳನ್ನು ಆರಾಧಿಸುತ್ತ ಬಂದಿದ್ದಾರೆ.

ನಾಗಾರಾಧನೆ

ಜಗತ್ತಿನಾದ್ಯಂತ ನಾಗಾರಾಧನೆಯ ಪದ್ಧತಿ ಕಂಡುಬರುತ್ತದೆ. ಆಯಾ ಪ್ರದೇಶಗಳಿಗೆ ಅನುಗುಣವಾಗಿ ತನ್ನದೆ ಆದ ವೈವಿಧ್ಯತೆ ಹಾಗೂ ವೈಶಿಷ್ಟ್ಯತೆ ಹೊಂದಿದ್ದು ಗಮನಿಸಬಹುದು ಭಾರತದಲ್ಲಿಯೂ ಪ್ರಾಚೀನ ಕಾಲದಿಂದ ನಾಗಾರಾಧಾನೆ ಪದ್ಧತಿ ಇದೆ. ನಮ್ಮ ಸುತ್ತಲೂ ಇರುವ ಪ್ರಾಣಿ, ಪಶು, ಪಕ್ಷಿಗಳನ್ನೊಳಗೊಂಡಂತೆ ಪ್ರಕೃತಿಯನ್ನು ಆರಾಧಿಸುವ ಪದ್ಧತಿ ಇದ್ದೆ ಇದೆ. ಹಾಗೆಯೇ ಸರ್ಪವನ್ನು ಆರಾಧಿಸುವ ಪದ್ಧತಿಯು ಮುಖ್ಯವಾಗಿದೆ.

ಪ್ರಾಚೀನ ಕಾಲದಿಂದ ನಾಗನನ್ನು ದೇವತೆಯಾಗಿ ಪೂಜಿಸುತ್ತ ಬಂದಿದ್ದಾರೆ. ನಾಗಾರಾಧನೆ ದೈವವಾಗಿ ಪೂಜಿಸುತ್ತ ಬಂದಿರುವುದಕ್ಕೆ ಹಲವು ನಂಬಿಕೆಗಳಿವೆ. ಪ್ರಾದೇಶಿಕ ಧಾರ್ಮಿಕ ವಿಧಿ ವಿಧಾನ ವೈಶಿಷ್ಟ್ಯತೆ ಇದೆ.

ಸಂಸ್ಕೃತಿಯ ಭಾಗವಾಗಿಯೇ ನಾಗಾರಾಧಾನೆ ಬೆಳೆದುಕೊಂಡು ಬಂದಿದೆ. ನಾಗಪೂಜೆಯನ್ನು ಹಲವು ಉದ್ದೇಶಗಳಿಗಾಗಿ ಆಚರಿಸುವುದಾಗಿ ಕಾಣುತ್ತೇವೆ.ಅವುಗಳಲ್ಲಿ ಮುಖ್ಯವಾದವುಗಳೆಂದರೆ

- ವಿಷಪೂರಿತೆ ಜೀವಿಯಾದ ಸರ್ಪ ಕಚ್ಚಿದೊಡನೆಯೇ ಮರಣ ಅಪ್ಪಿದ ಮಾನವನು ಅಡವಿವಾಸಿಯಾಗಿ ಬದುಕುವಾಗ ಸಹಜವಾಗಿಯೇ ಸರ್ಪಗಳ ಕಾಟ ಎದುರಿಸಬೇಕಾದಾಗ ಅದರ ಬಗ್ಗೆ ಭಯ ಭಕ್ತಿ ಉಂಟಾಗಿ ಆರಾಧಿಸುವ ಪದ್ಧತಿ ಬೆಳೆದು ಬಂದಿರಲೂ ಸಾಧ್ಯವಿದೆ.
- ನಾಗರಹಾವು ತನ್ನಲ್ಲಿ ವಿಶಿಷ್ಟ ಶಕ್ತಿಯನ್ನು ಹೊಂದಿರುತ್ತದೆ ಎಂಬ ನಂಬಿಕೆ ಇದೆ. ಅತಿಮಾನುಷ ಶಕ್ತಿಯಿಂದ ಅದು ಕೂಡಿರುತ್ತದೆ. ಹಾಗೂ ಜನ್ಮಜನ್ಮಾಂತರಗಳ ವರೆಗೆ ದ್ವೇಷ ಸಾಧಿಸುತ್ತದೆ.
  ಹೀಗಾಗಿ ಅದನ್ನು ಆರಾಧಿಸಬೇಕು ಇಲ್ಲದಿದ್ದರೆ ಅದರ ಕೊಪಕ್ಕೆ ಬಲಿಯಾಗಬೇಕಾಗುತ್ತದೆ. ಎಂಬ ನಂಬಿಕೆಯಿಂದ ನಾಗಾರಧನೆ ಪದ್ಧತಿ ಬೆಳೆದು ಬಂದಿರಲು ಸಾಧ್ಯವಿದೆ.

- ಮಾನವನಿಗೆ ಉಂಟಾಗುವ ವಿವಿಧ ಭಾಧೆಗಳನ್ನು, ರೋಗಗಳನ್ನು ನಿವಾರಣೆ ಮಾಡಿಕೊಳ್ಳಲು ತಮ್ಮ ಆರೋಗ್ಯ ಮತ್ತು ಭೌತಿಕ ಸಮೃದ್ಧಿ ಪಡೆಯಲು ನಾಗಾರಾಧನೆ ಪದ್ಧತಿ ಆಚರಣೆಗೆ ಬಂದಿರುವುದು ಕಂಡುಬರುತ್ತದೆ.
- ಕರ್ನಾಟಕದಲ್ಲಿ ನಾಗಪೂಜೆವಿಶಿಷ್ಟವಾಗಿ ಆಚರಿಸಿಕೊಂಡು ಬರಲಾಗಿದೆ. ಮುಖ್ಯವಾಗಿ ಕರಾವಳಿ ಪ್ರದೇಶಗಳಲ್ಲಿ ನಾಗದೇವನನ್ನು ಬ್ರಹ್ಮನೊಂದಿಗೆ ಅವಿನಾಭಾವವಾಗಿ ಕಾಣುತ್ತಾರೆ. ನಾಗಾರಾಧನೆ, ನಾಗಮಂಡಲದ ಆಚರಣೆ ವಿಶಿಷ್ಟವಾಗಿದೆ. ಉತ್ತರ ಕರ್ನಾಟಕದಲ್ಲಿಯೂ 'ನಾಗ'ನನ್ನು ದೈವವಾಗಿ ಪೂಜಿಸುವ ಪರಿಪಾಠ ಇದೆ. ನರಸಿಂಹ ಸ್ವಾಮಿ, ಹಿರೋಡ್ಯಾ, ಬ್ರಹ್ಮದೇವರು ಹೀಗೆ ವಿವಿಧ ರೂಪಗಳಲ್ಲಿ ಪೂಜಿಸುವ ಪದ್ಧತಿ ಇದೆ.
- ನಾಗಾರಾಧನೆ ಆಚರಣೆಯಲ್ಲಿ ಇನ್ನೊಂದು ಬಹುಮುಖ್ಯ ನಂಬಿಕೆಯೆಂದರೆ ಸಂತಾನ ಪ್ರಾಪ್ತಿ ನಾಗ ದೇವತೆಯನ್ನು ಆಚರಿಸುವ ಪದ್ಧತಿ. ಹೆಣ್ಣುಮಕ್ಕಳ ತಿಂಗಳ ಮುಟ್ಟಿನ ಸಮಸ್ಯೆ ನಿವಾರಣೆಗಾಗಿಯೂ ನಾಗಪೂಜೆ ಮಾಡುವುದಿದೆ.

## ಸಂತಾನ ಪ್ರಾಪ್ತಿಗಾಗಿ ನಾಗಾರಾಧನೆ

ಸಂತಾನ ಪ್ರಾಪ್ತಿಗಾಗಿ ನಾಗಾರಾಧನೆ ಮಾಡುವ ಪದ್ಧತಿ ಎಲ್ಲಡೆ ಪ್ರಚಲಿತದಲ್ಲಿದೆ. ಹೆಣ್ಣುಮಕ್ಕಳ ಮುಟ್ಟಿನ ದೋಷ, ಸಂತಾನ ದೋಷ ನಿವಾರಣೆಗಾಗಿ ನಾಗದೇವತೆಯನ್ನು ಪೂಜಿಸುವರು. ಹೆಣ್ಣು ಮಕ್ಕಳಲ್ಲಿ ಸಂತಾನಫಲ ಸಾಧ್ಯವಾಗದೆ ಹೋದಾಗ ನಾಗಾರಾಧನೆಗೆ ಮೊರೆ ಹೋಗುತ್ತಾರೆ. ಹಾಗೆಯೇ ಮೇಲಿಂದ ಮೇಲೆ ಗರ್ಭ ಪಾತ ವಾಗುತ್ತಿದ್ದರೆ. ನಾಗ ದೇವರಿಗೆ ಮೊರೆಹೋಗುವ ವಾಡಿಕೆ ಕಂಡು ಬರುತ್ತದೆ . ಈ ಹಿನ್ನಲೆಯಲ್ಲಿ ಅನೇಕ ರೀತಿಯ ವ್ರತ, ನೇಮ, ಆಚರಣೆಗಳನ್ನು ನಮ್ಮ ಜನಪದ ಹೆಣ್ಣು ಮಕ್ಕಳು ಮಾಡುವರು.ಉತ್ತರಕರ್ನಾಟಕದಲ್ಲಿ ಮುಖ್ಯವಾಗಿ 'ಹಿರೋಡ್ಯಾ' ದೇವರನ್ನು ಪೂಜಿಸುವ ಪದ್ಧತಿ ಇದೆ.

ಜನಪದರು ನಾಗದೇವತೆಯನ್ನು ತಾಯಿಯಾಗುವ ಉದ್ದೇಶದಿಂದ ಪೂಜಿಸುವ ಪದ್ಧತಿ ಮುಖ್ಯವಾಗಿ ಬೆಳೆದು ಬಂದಿದೆ. ಗರ್ಭಿಣಿ ಸ್ತ್ರೀಯರು, ನಾಗದೇವತೆಯ ಪ್ರತೀಕಣದ ನರಸಿಂಹ ಸ್ವಾಮಿಯನ್ನು , ಜನಪದರ ದೇವರಾದ ಭರಮ ದೇವರನ್ನು. ಜನಪದರು ನಂಬಿ ಆಚರಿಸುತ್ತಿದ್ದ ಅನೇಕ ಆಚರಣೆಗಳು ತಾಯ್ತನದ ಹಂಬಲಕ್ಕಾಗಿ ಬೆಳೆದುಬಂದಂತಹವುಗಳು. ಈ ಹಿನ್ನಲೆಯಲ್ಲಿಯೇ ನಾಗದೇವನನ್ನು ದೈವಸ್ವರೂಪನಾಗಿ ಕಂಡುಕೊಂಡು ನಮ್ಮ ಜನಪದ ಹೆಣ್ಣು ಮಕ್ಕಳು ಪೂಜಿಸುತ್ತ ಬಂದಿದ್ದಾರೆ.ಇಂದೂ ಈ ನಾಗಾರಾಧನಾ ಪದ್ಧತಿ ಬಹು ಪ್ರಚಲಿತದಲ್ಲಿರುವುದನ್ನು ಗಮನಿಸಬಹುದು.

ಒಪ್ಪಂದದಲ್ಲಿ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಮಾತೆಯರಿಗೆ ಮಾನ್ಯತೆ ಇತ್ತು. ಇದಕ್ಕೆ ಮೂಲಕಾರಣ ಮಾತೆಯರ ಕುರಿತಾದ ಅಪಾರ ಗೌರವ ಸಮಾಜ ಬದಲಾದಂತೆ ಪರಿಸ್ಥಿತಿಗಳು ಬದಲಾಗುತ್ತ ಸಾಗಿದವು. ಮಾತ್ರ ಆರಾಧನ ಪದ್ಧತಿ ಜಾರಿಗೊಳ್ಳಲು ಹೆಣ್ಣಿನ ಕೃಷಿ ಆವಿಷ್ಕಾರ. ಭೂಮಿ

ಮತ್ತು ಹೆಣ್ಣಿನ ಒಂದೇ ಬಗೆಯ ಗುಣಸ್ವಭಾವ ಮಾತೃ ಆರಾಧನೆಗೆ ಪುಷ್ಠಿಯನ್ನು ಒದಗಿಸಿತು. ಭಾರತದಾದ್ಯಂತ ಹಲವಾರ ಮಾತೃ ವಿಗ್ರಹಗಳು ಮಾತೃ ಆರಾಧನಾ ಪದ್ಧತಿ ಕುರಿತು ಮಾಹಿತಿಯನ್ನು ಒದಗಿಸುತ್ತವೆ. ಆಧುನಿಕ ಯುಗದಲ್ಲೂ ಸಹ ಮಾತೃ ಆರಾಧನಾ ಪದ್ಧತಿ ಜಾರಿಯಲ್ಲಿರುವುದು ಅಲ್ಲಲ್ಲಿ ಕಂಡು ಬರುತ್ತದೆ . ಪಿತೃಪ್ರಧಾನ ವ್ಯವಸ್ಥೆಯ ಸಂಧರ್ಭದಲ್ಲಿ ಜಾರಿಯಿದ್ದ ಮಾತೃ ವಿಗೃಹಗಳ ಆರಾಧನಾ ಪದ್ಧತಿ ಮುಂದುವರೆದುಕೊಂಡು ಬರುತ್ತಿರುವುದು ಆಶ್ಚರ್ಯ ಮೂಡಿಸುತ್ತದೆ. ಮಾತೃಪ್ರಧಾನತೆ ಪಿತೃಪ್ರಧಾನ ವ್ಯವಸ್ಥೆ ಕಡೆ ವಾಲಿದರೂ ಮಾತೃದೇವತೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿಲ್ಲವೆಂದೆ ಹೇಳಬಹುದು.

## ಪಿತೃಪ್ರಧಾನ ವ್ಯವಸ್ಥೆ

ಪಿತೃಪ್ರಧಾನ ವ್ಯವಸ್ಥೆ ಹೆಸರೆ ಸೂಚಿಸುವಂತೆ ಪುರುಷನ ಅಧಿಕಾರ ವ್ಯವಸ್ಥೆಯನ್ನು ಸೂಚಿಸುತ್ತದೆ. ಶತಶತಮಾನಗಳಿಂದಲೂ ಈ ವ್ಯವಸ್ಥೆ ಜಾರಿಯಲ್ಲಿದ್ದು ಆತನ ಯಜಮಾನಿಕೆಯಲ್ಲಿಯೇ ಕುಟುಂಬ, ಆ ಮೂಲಕ ಇಡೀ ಸಮಾಜವನ್ನು ನಿಯಂತ್ರಿಸುತ್ತ ಬಂದಿರುವುದು ಕಂಡುಬರುತ್ತದೆ. ಕೃಷಿ ಮೂಲ ಸಂಸ್ಕೃತಿಯಲ್ಲಿ ಮಾತೃ ಪ್ರಧಾನ ವ್ಯವಸ್ಥೆ ಪಿತೃ ಪ್ರಧಾನತೆಗೆ ತಿರುಗಿರುವುದು ಬಹುತೇಕ ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಮೊದಲು ಮಾತೃ ಅಧಿನ ವ್ಯವಸ್ಥೆ ನಂತರ ಪಿತೃ ಅಧಿನ ವ್ಯವಸ್ಥೆಯ ಮಾನವನ ಚರಿತ್ರೆ ರೋಚಕತೆಯಿಂದ ಕೂಡಿದೆ.ಪ್ರಪಂಚದಾದ್ಯಂತ ಸದ್ಯದಲ್ಲಿ ಪಿತೃಪ್ರಧಾನ ವ್ಯವಸ್ಥೆಯೇ ಬಹುತೇಕ ಚಾಲ್ತಿಯಲ್ಲಿರುವುದು ಕಾಣಬಹುದು.

ಸಾಮಾನ್ಯವಾಗಿ ಪಿತೃಪ್ರಧಾನತೆಯ ಅರ್ಥವನ್ನು ನಾವು ಹೀಗೆ ಹೇಳಬಹುದು."ಪಿತೃಪ್ರಧಾನತೆ ಎಂಬುದಕ್ಕೆ ತತ್ಸಮಾನ ಅರ್ಥದ 'ಪೇಟ್ರಿಯಾಚಿ'(patriarchy)ಎಂಬ ಆಂಗ್ಲಪದದ ಅಕ್ಷರಶ: ಅರ್ಥ 'ಪಿತೃಗಳ ಆಳ್ವಿಕೆ' (Rule by fathers) ಪೇಟ್ರಿಯಾರ್ಖಿ ಎಂಬ ಆಂಗ್ಲ ಪದವು ಗ್ರೀಕ್ ಮೂಲದ 'ಪೇಟ್ರಿಯಾ(patria ಅರ್ಥ ತಂದೆ) ಮತ್ತು ಆರ್ಖಿ(arche ಅರ್ಥ ಆಳ್ವಿಕೆ) ಎಂಬ ಪದಗಳಿಂದ ವ್ಯುತ್ಪತ್ತಿ ಹೊಂದಿದೆ"[೦೬] ಇಲ್ಲಿ ಸಾಮಾನ್ಯವಾಗಿ ಮಹಿಳೆಯರ ಮೇಲೆ ಪುರುಷರು ಅಧಿಕಾರವನ್ನು ಹೊಂದಿರುತ್ತಾರೆ. ಆತನೆ ಯಜಮಾನ ಹಾಗೂ ಕುಟುಂಬದ ಪ್ರತಿನಿಧಿಯಾಗಿರುತ್ತಾನೆ. ಕುಟುಂಬದ ಅಧಿಕಾರ ಸಂಪತ್ತುಗಳ ಮೇಲೆ ತನ್ನ ಹಿಡಿತವನ್ನು ಸಾಧಿಸಿರುತ್ತಾನೆ ,ಇದಕ್ಕೆ ಮಹಿಳೆಯರ ಯಾವುದೇ ತಕರಾರು ಇಲ್ಲ ಕಂಡುಬರುವುದಿಲ್ಲ.

ಸಾಮಾನ್ಯವಾಗಿ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಒಬ್ಬ ಪುರುಷನ ಅಧಿಕಾರ ಇನ್ನೊಬ್ಬ ಪುರುಷನೆ ಪಡೆಯುತ್ತಾನೆ. ಅಂದರೆ ಕುಟುಂಬವೊಂದರಲ್ಲಿ ಹಿಂದಿನಿಂದ ಬಂದ ಆಸ್ತಿ ಮುಂದೆ ಬರುವ ಇನ್ನೊರ್ವ ಪುರುಷನಿಗೆ ಹಸ್ತಾಂತರವಾಗುತ್ತದೆ. ಇಲ್ಲಿ ತಂದೆಯಾದವನು ತನ್ನ ಸಂಪತ್ತನ್ನು ತನ್ನ ಮಗನಿಗೆ ವಹಿಸಿಕೊಡುತ್ತಾನೆ. ಇನ್ನೊಂದು ಗಮನಿಸುವ ವಿಷಯವೆಂದರೆ ಇಲ್ಲಿ ಮಾತೃ ಪ್ರಧಾನ ವ್ಯವಸ್ಥೆಯಂತೆ ವಿವಾಹದ ನಂತರ ಹೆಣ್ಣುಮಗಳು ತನ್ನ ತಂದೆ ಮನೆಯಲ್ಲಿ ಇರದೆ ಗಂಡನ ಮನೆಗೆ ಹೋಗಿ ಅಲ್ಲೆ ಇಡೀ ಜೀವನ ಪರಿಯಂತೆ ವಾಸವಾಗುತ್ತಾಳೆ. ತವರು ಆಕೆಗೆ ಎರವಾಗುತ್ತದೆ. ತನಗೆ ಹುಟ್ಟುವ ಗಂಡು ಮಕ್ಕಳು ಗಂಡನ ಮನೆಯಲ್ಲಿಯೇ ಬೆಳೆದು ಹೆಣ್ಣು ಮಕ್ಕಳು ಮಾತ್ರ ವಿವಾಹದ ನಂತರ ಬೇರೆ ಮನೆ ಸೇರುತ್ತಾರೆ. ಇಡೀ

ಕುಟುಂಬದ ವ್ಯವಸ್ಥೆಯಲ್ಲಿ ಪುರುಷನ ಅಧಿಕಾರವೇ ಜಾರಿಯಲ್ಲಿರುತ್ತದೆ. ಕುಟುಂಬದ ಎಲ್ಲ ಆಗುಹೋಗುಗಳಿಗೆ ಆತನೆ ಉಸ್ತುವಾರಿ ವಹಿಸಿರುತ್ತಾನೆ. ಪ್ರಪಂಚದಾದ್ಯಂತ ಪಿತೃಪ್ರಧಾನ ವ್ಯವಸ್ಥೆ ಜಾರಿಯಲ್ಲಿರುವುದು ಸಾಮಾನ್ಯವಾಗಿದೆ.ಇದರ ಹಿಂದೆ ಬಹುದೊಡ್ಡ ಪುರುಷಪ್ರಧಾನ ವ್ಯವಸ್ಥೆಯ ಅವಸಾನವಾಗಲೂ ಅನೇಕ ಕಾರಣಗಳು ಮಾನವಶಾಸ್ತ್ರಜ್ಞರು ಗುರುತಿಸಿದ್ದಾರೆ. ಕೃಷಿಯ ಆವಿಷ್ಕಾರದನಂತರ ನಿಧಾನವಾಗಿ ಮಾತೃ ಮೂಲ ಪದ್ದತಿ ಪಿತೃ ಪೃಧಾನ ಪದ್ದತಿಕಡೆ ವಾಲುತ್ತ ತನ್ನ ಭದ್ರ ಬುನಾದಿಯನ್ನು ಸ್ಥಾಪಿಸಿತು.

## ಪಿತೃ ಪ್ರಧಾನ ವ್ಯವಸ್ಥೆಯ ಮೂಲ

ಪಿತೃಪ್ರಧಾನ ವ್ಯವಸ್ಥೆಯ ಮೂಲ ಬೇರು ಇರುವುದು ಮಾತೃಪ್ರಧಾನ ವ್ಯವಸ್ಥೆಯಲ್ಲಿಯೇ ಮಕ್ಕಳನ್ನು ಹೋರುವ-ಹೆರುವ-ಪಾಲಿಸುವ ಕಾರ್ಯ ಮಾಡುವ ಹೆಣ್ಣು ತಾನು ಹೆಚ್ಚಾಗಿ ಒಂದೇ ಕಡೆ ನೆಲೆನಿಂತು ಕುಟುಂಬದ ಎಲ್ಲ ಕೆಲಸಗಳನ್ನು ನಿರ್ವಹಿಸುತಾ್ತ ಬಂದಳು ತಾನು ವಾಸಮಾಡುವ ಮನೆಯ ಸುತ್ತ ಮೂತ್ತಲೂ ಹಣ್ಣು-ಹಂಪಲೂ ಗಡ್ಡೆ - ಗೆಣಸು ಬೆಳೆಸುವುದು, ಧಾನ್ಯ ಬಿತ್ತುವುದು, ಪಶುಪಾಲನೆ ಮಾಡುವುದು ಹೀಗೆ ಹತ್ತು ಹಲವು ಕೆಲಸಗಳನ್ನು ನಿರ್ವಹಿಸುತ್ತ ಮಾನ್ಯತೆ ಪಡೆದು ಕೊಂಡಿದ್ದಳು ಬೇಟೆಯಾಡಲು ಹೋದ ಪುರುಷ ಮನೆಯಿಂದ ಬಹುಕಾಲ ದೂರ ಉಳಿಯುತ್ತಿದ್ದ. ಆಗ ಹೆಣ್ಣು ಮಕ್ಕಳೆ ಸಂಪೂರ್ಣವಾಗಿ ಕೃಷಿಯಲ್ಲಿ ಕ್ರಾಂತಿಯಾಗ ತೊಡಗಿತ್ತು. ಹೊಸ ಹೊಸ ಯಂತ್ರಗಳನ್ನು ಆವಿಷ್ಕರಿಸಿದ ಮನುಷ್ಯ ಸಹಜವಾಗಿಯೇ ಬೇಟಿ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಪುರುಷರು ಪ್ರವೇಶಿಸಿದರು. ಕೃಷಿ, ಭೂಮಿ, ಆಸ್ತಿ ಸಂಪತ್ತು, ಹೀಗೆ ಒಂದೊಂದಾಗಿ ಆತನ ಅಧಿಕಾರಕ್ಕೆ ಸೇರತೊಡಗಿತು. ಕಲ್ಲು, ಮರ, ಲೋಹಗಳಂತಹ ವಸ್ತುಗಳನ್ನು ಕಂಡು ಹಿಡಿದು ಬಳಸುತ್ತ ಪ್ರಾಣಿಗಳನ್ನು ಬಳಸಿಕೊಂಡು ಕೃಷಿ, ಮಾಡತೊಡಗಿದ. ಹೀಗೆ ಹಂತ ಹಂತವಾಗಿ ಪುರುಷನು ತನ್ನ ಅಧಿಕಾರವನ್ನು ಸ್ಥಾಪಿಸುತ್ತಾ ಹೋದನು.

ತಾನು ತನ್ನ ಆಸ್ತಿ ತನ್ನ ಕುಟುಂಬವೆಂಬ ಕಲ್ಪನೆ ಮೂಡಿ ಅದರ ಮೇಲೆ ತನ್ನ ಒಡೆತನವನ್ನು ಸ್ಥಾಪಿಸಿದನು ಎಂಬುದು ಹಲವು ವಿದ್ವಾಂಸರ ಅಭಿಪ್ರಾಯ. "ಯಾವಾಗ ಸಮಾಜದಲ್ಲಿ ಕುಟುಂಬ ಪದ್ದತಿ ಅಸ್ತಿತ್ವಕ್ಕೆ ಬಂದಿತೋ ಅಂದಿನಿಂದಲೇ ಸಮಾಜದಲ್ಲಿ ಪುರುಷಾಧಿಪತ್ಯ ಸ್ಥಾಪನೆಯಾಯಿತು. ಆಗ ಮಹಿಳೆ ಪುರುಷನ ಅಡಿಯಾದಳು. ಅಲ್ಲದೆ ಸಾಮಾಜಿಕ ಉತ್ಪಾದನೆಯಲ್ಲಿ ಅವಳಿಗಿದ್ದ ಅಧಿಕಾರಿಯುತ ಹಕ್ಕು ಅವಳಿಗಿಲ್ಲದಾಯಿತು. ಅಂದರೆ ಉತ್ಪಾದನಾ ಪ್ರಕ್ರಿಯೆಯ ಮೇಲಿನ ಅವಳ ಹತೋಟಿಯನ್ನು ಕಿತ್ತುಕೊಳ್ಳಲಾಯಿತು ಅಥವಾ ಅದು ಮಹಿಳೆಯಿಂದ ಪುರುಷನಿಗೆ ಹಸ್ತಾಂತರವಾಯಿತು ಆಗ ಮಹಿಳೆಯರ ಪಾತ್ರ ಮಕ್ಕಳನ್ನು ಹೊರುವ - ಹೆರುವ ಮತ್ತು ಪೋಷಿಸುವ ಕೆಲಸಗಳಿಗೆ, ಪುರುಷರ ಸೇವೆಗಳಿಗೆ, ಮನೆಕೆಲಸಗಳಿಗೆ ಮಾತ್ರ ಸೀಮಿತವಾಗುಳಿತು"[02] ಮೂಲದಲ್ಲಿ ಕುಟುಂಬದ ಯಜಮಾನಿಯಾದ ಹೆಣ್ಣು ಬರುಬರುತ್ತಾ ಗಂಡಸರಿಗೆ ಯಜಮಾನಿಕೆ ಹಸ್ತಾಂತರವಾಯಿತು.

ಕುಟುಂಬದ ಮೇಲೆ ಪುರುಷರು ಎಷ್ಟೋಂದು ಹಿಡಿತ ಸಾಧಿಸಿದರೆಂದರೆ, ಕುಟುಂಬದ ಚರಾಚರ ಆಸ್ತಿಯಿಂದ ಹಿಡಿದು, ಸಣ್ಣಪುಟ್ಟ ನಿರ್ಧಾಗಳೆಲ್ಲ ಅವರ ಅಧಿನಕ್ಕೆ ಒಳಪಟ್ಟವು. ಒಂದು ಕುಟುಂಬದ ಆಸ್ತಿ ಒಂದು ಗಂಡಿನಿಂದ ಇನ್ನೊಂದು ಗಂಡೀಗೆನೆ ಹಸ್ತಾಂತರ ಆಗುವಷ್ಟು ಪಿತ್ರಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಆತ ಬಲಿಷ್ಠನಾದ. ಪಿತೃವಂಶ ಗುರುತಿಸುವ ಪೂರ್ವದಲ್ಲಿ ಮಾತೃವಂಶ ಗುರುತಿಸುವ ಪರಿಪಾಠವಿತ್ತು. ಹೆಣ್ಣಿನ ಮೂಲಕವಾಗಿಯೇ ಆಕೆಯ ಸಂತಾನವನ್ನು ಗುರುತ್ತಿಸಲಾಗುತ್ತಿತ್ತು. " ಸ್ತ್ರಿ - ಪುರುಷರ ಪ್ರಧಾನ ಅಧೀನ ಸಂಬಂಧಗಳು ಏರ್ಪಡುವಲ್ಲಿ ಈ ಪಿತೃ ವಂಶೀಯತೆಯ ಪಾತ್ರ ಹಿರಿದಾದುದೆಂದು ಹೇಳಬೇಕು ಇದನ್ನು ಕೇವಲ ಭಾವನಾತ್ಮಕವಾದ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪಿತೃಪ್ರಧಾನ ಪ್ರಭುತ್ವ ರಾಜಕಾರಣವು ಈ ಸರಂಚರನೆಯನ್ನು ಕಟ್ಟಿಕೊಂಡಿದೆ ಸ್ತ್ರೀ ಕೇಂದ್ರದಲ್ಲಿ ನ್ಯಾಯಯುತವಾಗಿ ಇದ್ದದ್ದು, ಅಂದರೆ ಅವಳ ಹೆರುವಿಕೆಯಿಂದಾಗಿಯೇ ಅಸ್ತಿತ್ವ ಪಡೆದ ಸಂತಾನಕ್ಕೆ ಅವಳ ಮೂಲದಿಂದಲೇ ಹೆಸರಿಸುತ್ತಾ ಬಂದಿದ್ದು. ಸಹಜವೇ ಆಗಿತ್ತು. ಇದನ್ನು ಕ್ರಮೇಣ ಪುರುಷ ತನ್ನ ಗುರುತಿನ ಮೂಲವಾಗಿ ಪರಿವರ್ತಿಸಿಕೊಂಡಿದ್ದು ರಾಜಕಾರಣದ ನೆಲೆಯೆಂದೇ ಗ್ರಹಿಸಬೇಕಾಗುತ್ತದೆ. ಜಗತ್ತಿನ ಎಲ್ಲ ದೇಶಗಳಲ್ಲೂ ಈ ಪಿತೃವಂಶೀಯ ಕುಟುಂಬ ಪದ್ಧತಿ ಜಾರಿಯಲ್ಲಿರುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ"[೧೮]. ಪಿತೃಪ್ರಧನ ವ್ಯವಸ್ಥೆ ಮಹಿಳೆಯರನ್ನು ಎಲ್ಲ ಹಂತದಲ್ಲಿ ಹತ್ತಿಕ್ಕಿ ತನ್ನ ಪ್ರಭುತ್ವವನ್ನು ಸ್ಥಾಪಿಸಿತು.

ಇಲ್ಲಿ ಹೆಣ್ಣು ಮೂಲ ನೆಲೆಯಿಂದ ಪಕ್ಕಕ್ಕೆ ಸರಿದು ಶತಮಾನಗಳಿಂದಲೂ ಕುಟುಂಬ ವ್ಯವಸ್ಥೆಯಲ್ಲಿ ಬಂಧಿಯಾದಳು. ಮಾತೆಯರು ಮಾನ್ಯರಾಗಿದ್ದ ಸ್ಥಿತಿಯಿಂದ ಮಾನ್ಯತೆಯೇ ಇಲ್ಲ ಎಂಬ ಹಂತಕ್ಕೆ ತಲುಪಿದರು. ಒಂದು ಕಾಲದಲ್ಲಿ ಗರ್ಭಾಶಯವೇ ಆಕೆಯ ಶಕ್ತಿ ಕೇಂದ್ರವಾಗಿತ್ತು. ಆದರೆ ಕಾಲ ಉರುಳಿದಂತೆ ಹೆಣ್ಣು ತನ್ನ ಸ್ಥಾನ-ಮಾನಕಳೆದುಕೊಳ್ಳುತ್ತಾ ಹೋದಳು. ಇದಕ್ಕೆ ಮೂಲಕಾರಣ ಪುರುಷಪ್ರದಾನ ವ್ಯವಸ್ಥೆಯ ಮಾನಸಿಕ ಸ್ಥಿತಿ ಇದು. ಸಮಾಜದಲ್ಲಿ ಎಷ್ಟು ಪ್ರಭಾವಿಯಾಗಿ ನೆಲೆಯೂರಿತು ಎಂದರೆ 'ಅಪುತ್ರಸ್ಯಗತಿರ್ನಾಸ್ತಿ' ಎಂಬ ಮಾತು ಎಲ್ಲರೂ ಸಾರ್ವತ್ರಿಕವಾಗಿ ಒಪ್ಪಿದರು. ಹೆಣ್ಣಾದವಳು ಯಾವಗಲೂ ಗಂಡಿನ ಅಧಿನಳಾಗಿ ಇರಬೇಕು ಎಂಬ ಧೋರಣೆಯಿಂದಲೇ ಬದುಕಿನ ನಾನಾ ಆಚರಣೆಗಳನ್ನು ಉದ್ದೇಶ ಪೂರ್ವಕವಾಗಿ ಬೆಳೆಸಿಕೊಂಡು ಬರಲಾಯಿತು. ಹೆಣ್ಣನ್ನು ಕುಟುಂಬಕ್ಕೆ ಮಾತ್ರ ಸೀಮಿತಗೊಳಿಸಿ ಆಕೆಯನ್ನು ಸಾರ್ವಜನಿಕ ವಲಯದಿಂದ ಸಂಪೂರ್ಣವಾಗಿ ದೂರ ಇಡಲಾಯಿತು. ಇಂದಿಗೂ ಅಸ್ತಿತ್ವದಲ್ಲಿರುವ ಪಿತೃಪ್ರಧಾನ ವ್ಯವಸ್ಥೆ ತನ್ನ ಭದ್ರ ನೆಲೆಯನ್ನು ಗಟ್ಟಿಯಾಗಿಯೇ ಇರಿಸಿಕೊಂಡಿದೆ.

## ಪಿತೃಪ್ರಧಾನ ವ್ಯವಸ್ಥೆಯಲ್ಲಿ ತಾಯ್ತನ

ಪಿತೃಪ್ರಧಾನ ವ್ಯವಸ್ಥೆಯಲ್ಲಿ ತಾಯ್ತನದ ಸ್ಥಿತಿ ಸಂಕೀರ್ಣತೆಯಿಂದ ಕೂಡಿದ್ದಾಗಿದೆ ಎನ್ನಬಹುದು. ತಾಯ್ತನ ಕಾರಣವಾಗಿ ಹೆಣ್ಣು ಗ್ರಹಬಂಧಿಯಾಗಿ ಬದುಕಬೇಕಾಯಿತು. ಮಕ್ಕಳನ್ನು

ಹೆರುವ - ಹೊರುವ ಮತ್ತು ಪಾಲಿಸುವ ಕರ್ತವ್ಯಗಳಿಗೆ ಸೀಮಿತಗೊಳಿಸಿ ಅವಳನ್ನು ವ್ಯವಸ್ಥಿತವಾಗಿ ಹತ್ತಿಕ್ಕುವ ಪ್ರಯತ್ನ ಮಾಡಲಾಯಿತು. ತಾಯಿಯಾದವಳು ತನ್ನದೆ ಆದ ಸ್ವತಂತ್ರ್ಯತೆ ಇಲ್ಲ. ತನಗೆ ಪ್ರತ್ಯಕವಾದ ಅಸ್ತಿತ್ವವೂ ಇಲ್ಲ. ಮನು ಹೇಳುವ ಹಾಗೆ ಈಕೆ ಬಾಲ್ಯದಲ್ಲಿ ತಂದೆಯ ಯೌವನದಲ್ಲಿ ಗಂಡನ, ಮುಪ್ಪಿನಲ್ಲಿ ಮಗನ ಆಶ್ರಯದಲ್ಲಿಯೇ ಇದ್ದು ತನ್ನ ಜೀವನ ಕಳೆಯಬೇಕೆಂದು ಪಿತೃಪ್ರಧಾನ ವ್ಯವಸ್ಥೆಯ ಹುನ್ನಾರವೇ ಸರಿ ಎನ್ನಬಹುದು. ತಾನು ಹೆತ್ತಮಗುವಿಗೆ ತನ್ನ ಹೆಸರು ಕೊಡಲು ಅವಕಾಶವಿಲ್ಲ. ತಂದೆಯಾದವನು ಕ್ರೂರಿ ಯಾಗಿರಲಿ, ಕಳ್ಳನಾಗಲಿ, ವಿಷಯ ಲಂಪಟನಾಗಲಿ ಆತ ಹೇಗಿದ್ದರೂ ಸರಿ ಆತನ ಹೆಸರು ಮಗನೊಂದಿಗೆ ಸೇರಿಸಲಾಗುತ್ತದೆ. ಒಂದು ಗಮನಿಸಬಹುದಾದ ಮುಖ್ಯ ವಿಷಯವೆಂದರೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ತಾಯ್ತನಕ್ಕೆ ಗೌರವ ಸ್ಥಾನವೇ ಇದೆ. ಇಲ್ಲಿ ಹೆಣ್ಣು ತಾಯಿ ಆದಾಗ ಮಾತ್ರ ಆಕೆ ಪರಿಪೂರ್ಣಳಾಗುತ್ತಾಳೆ ಎಂಬ ಕಲ್ಪನೆ ಗಟ್ಟಿಯಾಗಿ ನೆಲೆನಿಂತಿದೆ. ಒಂದು ಹೆಣ್ಣಿಗೆ ಹೆಣ್ತನ ಸಾರ್ಥಕ್ಯಗೊಳಿಸಿ ಕೊಳ್ಳಬೇಕಾದ ಆಕೆ ತನ್ನ ಗಂಡನ ವಂಶವನ್ನು ಉದ್ಧರಿಸಲೇಬೇಕು. ಇಲ್ಲದಿದ್ದರ ಆಕೆಗೆ ಬೆಲೆ ಇಲ್ಲ. ಪಿತೃಪ್ರಧಾನ ವ್ಯವಸ್ಥೆ ಬಂಜೆಯನ್ನು ನಿಕೃಷ್ಟವಾಗಿ ಕಂಡಿದೆ.

ತಾಯಿಯಾಗುವುದೆಂದರೆ ಆಕೆಗೆ ಒದಗಿರುವ ಸೌಭಾಗ್ಯ ಎನ್ನುತ್ತದೆ. ಮಕ್ಕಳನ್ನು ಹೆತ್ತು ಹೊತ್ತು ಪಾಲಿಸುವುದು ಆಕೆಯ ಕರ್ತವ್ಯವೆಂದೆ ಬಾವಿಸಿದೆ ತಾಯ್ತನವನ್ನು ಪಾರಂಪರಿಕವಾಗಿ ಬಂದ ಪುರುಷ ವ್ಯವಸ್ಥೆಯು ಸಂಧಿಗ್ದ ಸ್ಥಿತಿಯಲ್ಲಿ ಕಂಡಿದೆ. " ಮಗುವಾಗಿಸುವ ಶಕ್ತಿಯು ಅವಳ ಗರ್ಭಶಯದಲ್ಲಿ ಇದೆ. ಈ ಸಾಮರ್ಥ್ಯವು ಹೆಣ್ಣಿಗಿರುವುದರಿಂದಲ್ಲೇ ಅವಳ ಮೇಲೇ ಪುರುಷನಿಗೆ ಅಧೀಕಾರಸ್ಥಾಪಿಸಲು ನಾನಾ ಬಗೆಯ ಬುದ್ಧಿವಂತಿಕೆಯನ್ನು ಬಳಸಿ ಒಮ್ಮೆ ಅವಳನ್ನು ಹೊಗಳಿ ಮತೋಮ್ಮೆ ತಚ್ಛೀಕರಿಸಿ ತನ್ನ ಅಧೀನ ಮಾಡಿಕೊಂಡಿದ್ದಾನೆ. ತಾಯ್ತನದ ರಚನೆ ಇದಕ್ಕೊಂದು ಉದಾಹರಣೆಯಾಗಿದೆ. ಆದರೆ ಈ ತಾಯ್ತನವು ನಿರ್ದಿಷ್ಟವಾಗಿ ಕುಟುಂಬ ಚೌಕಟ್ಟಿನಲ್ಲಿ ಗಂಡಿನ ದೃಷ್ಟಿ ಕೋನಕ್ಕನುಗುಣವಾಗಿ ನಡೆಸಲಾಗುತ್ತದೆ. ಬದಲಾಗಿ ವೇಶ್ಯೆ, ದೇವದಾಸಿ ಮೊದಲಾದ ವಿವಾಹ ಬಾಹಿರ ವ್ಯವಸ್ಥೆಯಲ್ಲಿನ ತಾಯ್ತನವನ್ನು ಗೌರವದ ನೆಲೆಯಲ್ಲಿ ಕಾಣುವುದಿಲ್ಲ "೦೯. ಅಂದರೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ತಾಯ್ತನ ಗೌರವಾತ್ಮಕವೂ ಆಗಿದ್ದು ಅದರ ಮೇಲೆ ಪುರುಷ ವ್ಯವಸ್ಥೆಯ ಹಿಡಿತ ಸಾಧನ ಸ್ಪಷ್ಟವಾಗಿ ಕಾಣಬಹುದು.

ಹೆಣ್ಣಿನ ಮೇಲಿನ ನಿಯಂತ್ರಣಕ್ಕಾಗಿ ನೈತಿಕ-ಅನೈತಿಕವೆಂಬ ಪಟ್ಟಿಯನ್ನು ಆಕೆಗೆ ಮಾತ್ರ ಅನ್ವಯಿಸಿ, ತಾನು ಮಾತ್ರ ಯಾವುದೇ ಅಡೆ - ತಡೆಗಳಿಲ್ಲದೆ ಜೀವಿಸುವ ವ್ಯವಸ್ಥೆಗೆ ಬದ್ಧನಾಗಿ ದ್ದಾನೆ. ತಾಯ್ತನದ ಸ್ಥಿತಿ ಹೆಣ್ಣಿಗೆ ಸಮಾಜದಲ್ಲಿ ಅವಳದೇ ಆದ ಸ್ಥಾನಕೊಟ್ಟರು ಪುರಷನ ಅಧಿನದಲ್ಲಿ ಮಾತ್ರ ಆಕೆ ಗೌರವಸ್ಥಾನ ಪಡೆಯಬಹುದಾಗಿದೆ. ಗಂಡನಿಲ್ಲದೆ ತಾಯಿಯಾಗುವ ಹೆಣ್ಣಿಗೆ ನಡತೆಗೆಟ್ಟವಳು ಎಂಬ ಹಣೆಪಟ್ಟಿ ಕೊಟ್ಟು ನಿಂದನೆಗೆ ಗುರಿ ಮಾಡುವುದು ವಿಪರ್ಯಾಸವೆಂದೆ ಹೇಳಬಹುದು ಪುರುಷ ಪ್ರಧಾನ ವ್ಯವಸ್ಥೆ ತಾಯಿ ಹಾಗೂ ತಾಯ್ತನವನ್ನು ಎಷ್ಟರ ಮಟ್ಟಿಗೆ ತನ್ನ ತವರು ಹತೋಟಿಯಲ್ಲಿ ಇಟ್ಟುಕೊಂಡಿದೆ ಎಂದರೆ ಹೆಣ್ಣು ತನ್ನ ತವರು

ಮನೆಯಲ್ಲಿಯೂ ಸಹ ಯಾವ ಬಗೆಯ ಸ್ವಾತಂತ್ರ್ಯವೂ ಇರುವುದಿಲ್ಲ. ಹೆಣ್ಣಿಗೆ ತವರಿನಲ್ಲಿಯೆ ತಾಯಿಯಾಗುವ ಹಾಗೂ ಅದನ್ನು ಪ್ರಾಮಾಣಿಕವಾಗಿ ನಿಭಾಯಿಸುವ ತರಬೇತಿಯನ್ನು ಕೊಡಲಾಗುತ್ತದೆ.

ಪುರುಷನ ದೃಷ್ಟಿಯಿಂದಲೇ ಸ್ತ್ರೀ ಮನೋಧೋರಣೆಯು ರೂಪುಪಡೆದು ಆಕೆಯು ಸಹ ಪಿತೃಪ್ರಧಾನ ವ್ಯವಸ್ಥೆಗೆ ಒಗ್ಗಿಕೊಂಡು ಅದರ ಭಾಗವಾಗಿಯೇ ಬದುಕುತ್ತಿರುತ್ತಾಳೆ. " ಕುಟುಂಬದ ಯಾವ ನೆಲೆಯಲ್ಲಿಯೂ ಸ್ತ್ರೀಗೆ ತನ್ನ ಇಚ್ಛೆಗಳನ್ನು (ಕನಿಷ್ಠ ತನಗೆ ಸಂಭಂಧಿಸಿದ ವಿಚಾರಗಳಲ್ಲಿ) ವ್ಯಕ್ತಪಡಿಸುವ, ಅಳವಡಿಸುವ ಅವಕಾಶವಿರುವುದಿಲ್ಲ. ಗಂಡನೊಂದಿಗಿನ ಲೈಂಗಿಕ ಜೀವನದ ನಿರಾಕರಣೆಯಾಗಲಿ, ಮಕ್ಕಳನ್ನು ಹೆರುವುದರ ಬಗೆಗಿನ ಅಭಿಪ್ರಾಯವನ್ನಾಗಲಿ ಕೂಡ ಆಕೆ ವ್ಯಕ್ತಪಡಿಸುವಂತಿಲ್ಲ "[೨೦]. ಪಿತೃಪ್ರಧಾನ ವ್ಯವಸ್ಥೆಯಲ್ಲಿ ತಾಯ್ತನ ಕುರಿತಂತೆ ಆಕೆಯ ಮೇಲೆ ಹೇರಲಾದ ನಾನಾ ಒತ್ತಡಗಳು ನಮಗೆ ಕಂಡುಬರುತ್ತವೆ. ಅದನ್ನು ಹೆಣ್ಣುಮಕ್ಕಳು ಸಹಜವೆಂಬಂತೆ ಸ್ವೀಕರಿಸಿ ಬದುಕು ನಡೆಸುತ್ತಾ ಬಂದಿದ್ದಾರೆ. ಈ ವ್ಯವಸ್ಥೆಯಲ್ಲಿ ಹೆಣ್ಣು ಕುಟುಂಬವೊಂದರಲ್ಲಿ ಸುರಕ್ಷಿತಳಾಗಿ ತಾಯ್ತನ ಅನುಭವಿಸುತ್ತಾಳೆ ಎಂದು ಹೇಳಿದರೆ ಅದು ತಪ್ಪಾಗುವುದು ಏಕೆಂದರೆ ತಾಯ್ತನ ಪುರುಷ ಸಮಾಜದ ವೈಭವೀಕರಣದ ಒಂದು ನೆಲೆಯಾಗಿದೆ ಈ ಅಸ್ತ್ರದಿಂದ ಪುರುಷನು ತನ್ನ ನಿಯಂತ್ರಣದಲ್ಲಿ ಇರಿಸಿಕೊಳ್ಳಲು ಪ್ರಯತ್ನಿಸಿದ್ದಾನೆ.

ತಾಯ್ತನದ ಸಂಪೂರ್ಣ ಹತೋಟಿ ಪುರುಷನೆ ಹೊಂದಿದ್ದಾನೆ. ಇಲ್ಲಿ ಹೆಣ್ಣು ಒಂದು ಸಾಧನ ಮಾತ್ರ ಎಂದು ಪರಿಗಣಿಸಲಾಗಿದೆ. ಆಕೆಯಿಂದ ಬಹು ನೀರಿಕ್ಷೆಗಳನ್ನು ಮಾಡಲಾಗುತ್ತದೆ. ತನ್ನ ಬದುಕಿನುದ್ದಕ್ಕೂ ಕೆಲವೇ ಕೆಲವು ಪಾತ್ರಗಳನ್ನು ಮಾತ್ರ ನಿರ್ವಹಿಸಬೇಕು. ಅದನ್ನು ಹೊರತು ಪಡಿಸಿ ಆಕೆಗೆ ಅಸ್ತಿತ್ವವಿಲ್ಲ. ವಿಪರ್ಯಾಸವೆಂದರೆ ಹೆಣ್ಣು ಮಕ್ಕಳು ಸಹ ಈ ಗ್ರಹಿಕೆಯನ್ನು ಒಪ್ಪಿಕೊಂಡೆ ಬದುಕುತ್ತಿರುತ್ತಾರೆ. ಹೆಂಡತಿ, ತಾಯಿ, ಮಗಳುಗಳಂಥಹ ಗಡಿಯಲ್ಲಿ ಮಾತ್ರ ಜೀವನ ತಿರುಗುತ್ತಿರುತದೆ. ಮನೆಕೆಲಸದಿಂದ ಪ್ರಾರಂಭವಾದ ಅವರ ದಿನಚರಿ ಮಲಗುವರೆಗೆ ಅದರಲ್ಲಿಯೇ ಮುಳುಗಿರುತ್ತಾರೆ. ಈ ಮದ್ಯದಲ್ಲಿ ಶಿಕ್ಷಣ ಉದ್ಯೋಗ, ರಾಜಕೀಯದಂಥ ವಲಯದಿಂದ ದೂರವೇ ಉಳಿದು ಬಿಡುತ್ತಾರೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ಕೀಳಾಗಿಯೇ ಕಾಣಲಾಗಿದೆ ತಾಯ್ತನವೆಂಬ ವೈಭವೀಕರಣದ ಪಟ್ಟ ಕುಟುಂಬ ವ್ಯವಸ್ಥೆಯ ನಾಲ್ಕು ಗೋಡೆಗಳಲ್ಲಿ ಬಂಧಿಯಾಗಿ ಮಾಡಿದೆ. ಆಕೆ ಸಮಾಜದ ಪ್ರತಿಯೊಂದು ಕ್ಷೇತ್ರದಲ್ಲಿ ಅವಕಾಶವಂಚಿತಳಾಗಿದ್ದಾಳೆ ಇಷ್ಟ ಇದ್ದೋ, ಇಲ್ಲದೆಯೋ ವಿವಾಹ, ಕುಟುಂಬ, ಸಂತಾನವೆಂಬ ಜಾಲದಲ್ಲಿ ಸಿಲುಕಿಕೊಂಡು ಗಂಡಿನ ಯಜಮಾನಿತ್ವದಲ್ಲಿ ತನ್ನ ಬದುಕನ್ನು ಸಾಗಿಸಬೇಕಾಗಿದೆ.

## 2.3 ಸಂಸ್ಕೃತಿಯಲ್ಲಿನ ಮಹತ್ವದ ಗ್ರಹಿಕೆಗಳು

'ಸಂಸ್ಕೃಂತಿ' ಎಂಬ ಪದ ಬಹು ವಿಶಾಲವಾಗಿ ಹಾಗೂ ವ್ಯಾಪಕವಾಗಿ ಬಳಕೆ ಯಾಗುತ್ತಿರುವ ಪದ. ಇದನ್ನು ಸಂದರ್ಭಕ್ಕನುಗುಣವಾಗಿ ಬೇರೆ ಬೇರೆ ಅರ್ಥದಲ್ಲಿ ಬಳಕೆ ಮಾಡಲಾಗುತ್ತದೆ. ಸಮಾಜದ ಮೂಲಭೂತವಾದ ಕಲ್ಪನೆಯಾದ ಸಂಸ್ಕೃತಿಯನ್ನು ಸಂಕೀರ್ಣವಾದ ಅರ್ಥವನ್ನು ಕಲ್ಪಿಸಲಾಗಿದೆ ಮಾನವನು ಸಮಾಜ ಜೀವಿಯಾಗಿ ಬದುಕಲು ಪ್ರಾರಂಭ ಮಾಡಿದಾಗಿನಿಂದ ಇಂದಿನವರೆಗೆ ಜೀವಿಸಿದ ಜೀವನವನ್ನೆಲ್ಲ ಸಂಸ್ಕೃತಿಯೆಂದೆ ಕರೆಯಬಹುದು. ಮಾನವನ ಬದುಕಿನ ಕ್ರಮವೇ

ಸಂಸ್ಕೃತಿ ಎಂದು ಹೇಳಲಾಗುತ್ತದೆ. ಇದರಲ್ಲಿ ಮನುಷ್ಯನ ಇತಿಹಾಸ, ಕಲೆ, ಧರ್ಮ, ಜೀವನ ರೀತಿ-ನೀತಿ, ರಾಜಕೀಯ, ಆರ್ಥಿಕ ಹೀಗೆ ಹತ್ತು ಹಲವು ಆಯಾಮಗಳು ಒಳಗೊಂಡಿರುತ್ತವೆ. ಖ್ಯಾತ ಸಮಾಜಶಾಸ್ತ್ರಜ್ಞರಾದ "ಮೇಕೈವರ ಮತ್ತು ಪೇಜ ಹೇಳುವಂತೆ 'ಸಂಸ್ಕೃತಿಯೂ ನಮ್ಮ ಜೀವನ ಶೈಲಿಯ ಮೌಲ್ಯಗಳ ಭಾವನಾತ್ಮಕ ಬಂಧನಗಳ ಮತ್ತು ಆದರ್ಶಗಳ ಸಂಗ್ರಹ ಈ ಸಾಮಾಜಿಕ ಪರಂಪರೆಯನ್ನು ನಾವು ಹಿಂದಿನಿಂದ ತಲೆಮಾರುಗಳಿಂದ ಹಾಗೂ ಜ್ಞಾನಾರ್ಜನೆಯಿಂದ ಪಡೆದುಕೊಂಡಿರುತ್ತೇವೆ "[೨೧] ಸಂಸ್ಕೃತಿಯ ಕುರಿತಂತೆ ಹಲವು ವ್ಯಾಖ್ಯಾನಗಳು ಕಂಡುಬರುತ್ತವೆ. ನನ್ನ ಅಧ್ಯಯನಕ್ಕೆ ಪೂರಕವಾಗಿ ನಾನು ಸಂಸ್ಕೃತಿಯೆಂಬ ಶಬ್ದವನ್ನು ಒಂದು ಚೌಕಟ್ಟಿನಲ್ಲಿ ಇರಿಸಿ ಅದನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದೇನೆ. ಏಕೆಂದರೆ ಮಾನವನು ಬದುಕಿದ ಬದುಕಿನ ಒಟ್ಟು ಚಿತ್ರಣವನ್ನು ಸಂಸ್ಕೃತಿಯೆಂಬ ಅರ್ಥದಲ್ಲಿ ಪರಿಭಾವಿಸಿಕೊಳ್ಳಲಾಗಿದೆ ಸಂಸ್ಕೃತಿಕ ಬದುಕಿನ ಹಲವು ಮಗ್ಗಲುಗಳು ಇಲ್ಲಿ ಕಂಡುಬರುತ್ತವೆ. ಜೀವನದ ಪ್ರತಿ ಹಂತವು ಸಂಸ್ಕೃತಿಯ ಭಾಗವೇ ಆಗಿರುತ್ತದೆ. ತಾಯ್ತನದ ಕುರಿತಂತೆ ನಮ್ಮ ಸುತ್ತ ಮುತ್ತಲು ರೂಪುಪಡೆದ ಒಟ್ಟು ಸಂಸ್ಕೃತಿಯನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಸಮಾಜದ ಒಟ್ಟು ಸಮೂಹದಲ್ಲಿ ಮಹಿಳೆಯಪಾಲು ಅರ್ಧದಷ್ಟಿದೆ. ಮಹಿಳೆ ತಾಯಿಯಾಗಿಯೆ ಸಾಗಿಬಂದ ಒಪ್ಪಂದದ ಕಥನವನ್ನು ಸಂಸ್ಕೃತಿಯ ನೆಲೆಯಲ್ಲಿ ಕಾಣುವ ಬಗೆ ಇದು. ಮಹಿಳೆಯರ ಪ್ರಗತಿಗಾಗಲೀ ಅಧೋ ಗತಿಗಾಗಲಿ ತಾಯ್ತನದ ಗ್ರಹಿಕೆ ಹೇಗೆ ಕಾರ್ಯ ನಿರ್ವಹಿಸಿದೆ ಎಂಬುದನ್ನು ಸಂಸ್ಕೃತಿಯ ಹಿನ್ನಲೆಯಲ್ಲಿ ನೋಡಲಾಗಿದೆ. ಇಲ್ಲಿ ಹೆಣ್ಣೊಬ್ಬಳ ಹುಟ್ಟು, ಮೈನೆರೆಯುವುದು, ಮದುವೆ, ಬಸುರಿ. ಬಾಣಂತನ, ಸಾವು, ಹಬ್ಬ ಹರಿದಿನಗಳು, ಧರ್ಮ ಹೀಗೆ ಹತ್ತು ಹಲವು ಬದುಕಿನ ಚಿತ್ರಣಗಳನ್ನು ಸಂಸ್ಕೃತಿಯಲ್ಲಿ ಅಡಗಿಕೊಂಡ ಬಗೆಯನ್ನು ಗುರುತಿಸಲಾಗಿದೆ. ವೈಭವೀಕರಣದ ನೆಲೆಯಲ್ಲಿ ರೂಪು ಪಡೆದ ತಾಯ್ತನದ ಹುಸಿ ಎಳೆಗಳನ್ನು ಗುರುತಿಸಬಹುದಾಗಿದೆ. ತಾಯಿಯನ್ನು ಹಲವು ಕಡೆ, ಹಲವು ಬಗೆಯಲ್ಲಿ ಗ್ರಹಿಸಿದ ಗ್ರಹಿಕೆಗಳನ್ನು ಸಂಸ್ಕೃತಿಯಲ್ಲಿ ಕಾಣಬಹುದಾಗಿದೆ.

ಜನಪದ ಸಂಸ್ಕೃತಿಯ ನೆಲೆಯಿಂದಲೆ ತಾಯ್ತನವನ್ನು ಗ್ರಹಿಸುವ ಪ್ರಯತ್ನ ಇಲ್ಲಿ ಮಾಡಲಾಗಿದ. ಮಾನವನ ಬದುಕಿನುದ್ದಕ್ಕು ಇಟ್ಟ ಹೆಜ್ಜೆ ತೊಟ್ಟ ರೂಪಗಳು ಹಲವು ಬಗೆಯವು ಅದರಲ್ಲಿ ಸಂಸ್ಕೃತಿಯಲ್ಲಿ ಸೇರಿಕೊಂಡಿರುವ ಎಲ್ಲ ಆಯಾಮಗಳನ್ನು ಗುರುತಿಸುವುದು ಕಷ್ಟ ಸಾಧ್ಯ. ಸಂಸ್ಕೃತಿಯನ್ನು ಹುಟ್ಟುಹಾಕಿದ ಮನುಷ್ಯ ಗಂಡು-ಹೆಣ್ಣು ಎಂಬ ತಾರತಮ್ಯವನ್ನು ಪ್ರತ್ಯೇಕ್ಷವಾಗಿಯೂ ಪರೋಕ್ಷವಾಗಿಯೂ ರೂಪಿಸಿಕೊಳ್ಳುತ್ತ ಬಂದನು. ಈ ವಿಭಿನ್ನ ಸಂಸ್ಕೃತಿಯ ಆಳದಲ್ಲಿ ಹೆಣ್ಣಿನ ತಾಯ್ತನವೆಂಬುದು ವಿಚಿತ್ರ ಗ್ರಹಿಕೆಯ ತೊಳಲಾಟದಲ್ಲಿ ಸಾಗಿಬಂದಿರುವುದು ಸ್ಪಷ್ಟವಾಗಿದೆ.

ಸಾಮಾನ್ಯವಾಗಿ ಮನುಷ್ಯ ಸಮಾಜ ಜೀವಿಯಾಗಿ ಬದುಕು ಸಾಗಿಸುತ್ತ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತಾ ಬರುವಾಗ ಪುರುಷಾಧಿಕಾರ ಸ್ಥಾಪಿತವಾಗುವ ರಾಜಕಾರಣವನ್ನು ಹುಟ್ಟಿಹಾಕಿದವು. ಅದಕ್ಕೆ ಮಹಿಳೆಯರು ವಿರೋಧ ಮಾಡದೆ ತಮ್ಮ ಬದುಕನ್ನು ಪುರುಷ ಪರ ಆಲೋಚನೆಗಳಿಗೆ ಸಮರ್ಪಿಸಿದರು. ಸಂಸ್ಕೃತಿಯೊಂದು ತನ್ನ ತಾನೆ ರೂಪು ಪಡೆದಂತೆ ಕಂಡರೂ ಅಲ್ಲಿನ

ಎಳೆಗಳಲ್ಲಿ ಉದ್ದೇಶ ಪೂರ್ವಕ ನೇಯ್ಗಗಳು ಕಾಣಬಹುದಾಗಿದೆ. ಏಕೆಂದರೆ ಸಂಸ್ಕೃತಿ ರೂಪು ಪಡೆಯಲು ಹಾಗೂ ನಿರಂತರ ಸಾಗಲೂ ಮನುಷ್ಯ ನಿರ್ಮಿತ ಒತ್ತಡಗಳು ಕಾರ್ಯ ನಿರ್ವಹಿಸುತ್ತವೆ. ಮೆಲ್ನೋಟಕ್ಕೆ ಸಂಸ್ಕೃತಿಯ ನಿರ್ಮಾಣ ತನ್ನತಾನಾಗಿ ರೂಪು ಪಡೆದಂತೆ ಕಂಡರೂ. ಅಲ್ಲಿ ವ್ಯಕ್ತಿ, ಸಮೂಹದ ಪಾಲುಗಾರಿಕೆ ಇದ್ದೆ ಇರುತ್ತದೆ. ಸಂಸ್ಕೃತಿ ಯಾವಾಗಲೂ ನಿಂತ ನೀರಲ್ಲ ಅದು ಚಲನಶೀಲವಾದದ್ದು. ಆಚರಣೆ ಮತ್ತು ನಂಬಿಕೆಗಳು ಒಟ್ಟಾಗಿ ನಮ್ಮ ಬದುಕಿನಲ್ಲಿ ಸಂಪ್ರದಾಯತೆಯನ್ನು ಕಟ್ಟಿಕೊಡುತ್ತವೆ. ಜೀವನ ಇಡೀ ಒಂದಲ್ಲ ಒಂದು ರೀತಿಯ ಆಚರಣೆಗಳಲ್ಲಿ ಭಾಗಿಯಾಗಿ ಬರುವ ಹೆಣ್ಣು ತನ್ನ ನೆಲೆಯನ್ನು ಪುರುಷಪ್ರಧಾನ ಗ್ರಹಿಕೆಯಿಂದಲೇ ಭದ್ರಪಡಿಸಿಕೊಳ್ಳುತ್ತ ಬಂದಿದ್ದಾಳೆ. ಕುಟುಂಬ-ವಿವಾಹ. ಜನನ -ಮರಣಗಳಲ್ಲಿ ತನ್ನ ಪ್ರಾತಿನಿಧ್ಯತೆ ಇದ್ದರೂ ಅದು ಹೆಸರಿಗೆ ಮಾತ್ರವಾಗಿ ಪುರುಷನ ಗ್ರಹಿಕೆಗಳೇ ಎಂಬಂತೆ ಚಿತ್ರಿತಗೊಂಡಿವೆ.ಅದರ ಹೊರತಾಗಿಯೂ ಮಾತೃಪ್ರದಾನ ವ್ಯವಸ್ಥೆಯ ಕುರುಹಾಗಿ ಕೆಲ ಆಚರಣೆಗಳು ಕಂಡು ಬರುತ್ತವೆ. ಗಂಡನಿಗಾಗಿ ಮಕ್ಕಳಿಗಾಗಿ, ಕುಟುಂಬಕ್ಕಾಗಿ ತನ್ನನ್ನು ತಾನು ಗಂಧದಂತೆ ತೆಯ್ದಿದ್ದಾಳೆ.

ಪ್ರಾಚೀನ ಕಾಲದಿಂದಲೂ ಸಮಾಜ ಚಲಿಸುತ್ತ ಬಂದಿದೆ ಇಲ್ಲಿ ಸಂಸ್ಕೃತಿ ಸ್ಥಿರವಾಗದೆ ಚಲನೆಶೀಲವಾಗಿ ಸಾಗಿದೆ. ಸಂಸ್ಕೃತಿಯಲ್ಲಿ ಕಂಡು ಬರುವ ಪದ್ಧತಿಗಳು ,ಸಂಪ್ರದಾಯಗಳು, ಆಚರಣೆ ನಂಬಿಕೆಗಳು ಚಾಲ್ತಿಯಲ್ಲಿರುವುದು ಕಾಣಬಹುದು. ಸರ್ವವ್ಯಾಪಕವಾಗಿ ಸಾರ್ವತ್ರಿಕವಾಗಿ ಕಂಡುಬರುವ ಆಚರಣೆ ಮತ್ತು ನಂಬಿಕೆಗಳು ಸಂಸ್ಕೃತಿಯೊಂದು ರೂಪುಗೊಳ್ಳಲು ಬಹು ಮಹತ್ವ ಪಡೆದಿವೆ. ಮಾನವನ ದಿನ ನಿತ್ಯದ ಕಾರ್ಯಗಳಿಗೆ ಈ ಆಚರಣೆಗಳು ಮಹತ್ವವನ್ನು ತಂದು ಕೊಡುತ್ತವೆ.

ಈ ಆಚರಣೆಗಳು ಬರುಬರುತ್ತ ಸಂಸ್ಕೃತಿಯಾಗಿ ರೂಪು ಪಡೆಯುತ್ತವೆ. ಇವು ಮಾನವನ ಸಾಗಿ ಬಂದ ದಾರಿಯನ್ನು ಗುರುತಿಸಲು ಸಹಾಯವೂ ಮಾಡುತ್ತದೆ. ಸಂಸ್ಕೃತಿಯಲ್ಲಿ ಆಚರಣೆಗಳು ಬಹು ಪ್ರಾಮುಖ್ಯತೆ ಪಡೆದುಕೊಂಡಿದೆ. ಏಕೆಂದರೆ ಆಚರಣೆಗಳಿಲ್ಲದೆ ಮನುಷ್ಯನ ಬದುಕೆ ಇಲ್ಲ. ಸಮಾಜ ಅಂಗೀಕರಿಸಿದ ನಂಬಿಕೆಗಳ ನಡಾವಳಿಕೆಯೇ ಆಚರಣೆಗಳಾಗಿ ರೂಪು ಪಡೆದಿವೆ. ಒಂದು ಸಮಾಜದ ನಂಬಿಕೆ ಬೆಳೆದು ಆಚರಣೆಯಾಗಿ ಪರಿವರ್ತನೆ ಹೊಂದುತ್ತದೆ. ಮಾನವನ ಸಾಗಿಸಿಕೊಂಡು ಬಂದ ಪರಂಪರೆಯ ಕ್ರಿಯೆಗಳನ್ನು ಆಚರಣೆ ಎಂದು ಕರೆಯಬಹುದು. ನಂಬಿಕೆ ಮತ್ತು ಆಚರಣೆಗಳು ನಮ್ಮ ಸಂಸ್ಕೃತಿಯ ಅಂಗವಾಗಿಯೇ ಕಂಡುಬರುತ್ತವೆ.

ಮಾನವನು ಹುಟ್ಟಿನಿಂದ ಸಾಯುವವರೆಗೆ ಅನುಸರಿಸಿಕೊಂಡು ಬಂದ ಆಚರಣೆ ನಂಬಿಕೆಗಳ ಆಧಾರದಿಂದ ಮಹಿಳೆ ಹಾಗೂ ಆಕೆಯ ತಾಯ್ತನವನ್ನು ಅರ್ಥೈಸಿಕೊಂಡ ಬಗೆಯನ್ನು ಅರಿಯಬಹುದಾಗಿದೆ. ಮಹಿಳೆಯನ್ನು ತಾಯಿಯಾಗಿ ಗ್ರಹಿಸುವಲ್ಲಿ ವಿಚಿತ್ರವಾದ ಗ್ರಹಿಕೆಗಳ ನೆಲೆಯಲ್ಲಿ ಆಚರಣೆ ಮತ್ತು ನಂಬಿಕೆಗಳನ್ನು ರೂಪುಪಡೆದದ್ದು ಕಾಣಬಹುದಾಗಿದೆ. ಮಹಿಳೆಯ ಇಡೀ ಬದುಕನ್ನು ನಿಯುಂತ್ರಿಸಿದ ಪುರುಷ ಗ್ರಹಿಕೆಗಳು ಆಕೆಯ ವ್ಯಕ್ತಿತ್ವವನ್ನು ತನ್ನ ಮನ ಬಂದಂತೆ ರೂಪಿಸಿ ಕೊಟ್ಟಿವೆ. ಹೆಣ್ಣನ್ನು ತಾಯ್ತನದ ಮೌಲ್ಯದಲ್ಲಿ ಸಿಕ್ಕಿಸಿ ವೈಭವೀಕರಿಸುವ ನೆಲೆಯನ್ನು ಆಚರಣೆ ಮತ್ತು ನಂಬಿಕೆಗಳಲ್ಲಿ ಗ್ರಹಿಸಬಹುದಾಗಿದೆ. ತಾಯ್ತನದ ತ್ಯಾಗ,

ಬಲಿದಾನ, ಮಾತೃತ್ವ ವಾತ್ಸಲ್ಯದ ಗುಣಗಳನ್ನು ಹೇರಿ ಪುರುಷಸಮಾಜ ಆಕೆಯನ್ನು ಅಷ್ಟಕ್ಕೆ ಸೀಮಿತಗೊಳಿಸಿರುವುದು ಒಂದು ಹುನ್ನಾರವೇ ಸರಿ. ಹೆಣ್ಣನ್ನು ಅದರಲ್ಲಿಯೂ ತಾಯಿಯನ್ನೆ ಹಲವು ಆಚರಣೆಗಳಲ್ಲಿ ಮುಂದು ಮಾಡಿ ಆಕೆಯನ್ನು ಅಷ್ಟಕ್ಕೆ ಸೀಮಿತಗೊಳಿಸಿರುವುದು ಒಂದು ಹುನ್ನಾರವೇ ಸರಿ. ಹೆಣ್ಣನ್ನು ತಾಯ್ತನ ಬಲೆಯಲ್ಲಿ ಸಿಕ್ಕಿಸಿ, ಬಂಜೆಯ ಬದುಕು ನಿರರ್ಥಕ ಎಂದು ಸಾರಿದೆ.

ಹೆಣ್ಣಿನ ಬಗ್ಗೆ ಇರುವ ಪೊಳ್ಳು ನಂಬಿಕೆಗಳು ಆಕೆ ಮನಸಾರೆ ಒಪ್ಪಿ ಅವುಗಳನ್ನು ಅನುಸರಿಸುತ್ತ ಬಂದಿದ್ದಾಳೆ. ಪುರುಷ ಪ್ರಧಾನ ಗ್ರಹಿಕೆ ಹೊಂದಿದ ಹೆಣ್ಣು - ಗಂಡು ಇಬ್ಬರೂ ಅದರಲ್ಲಿ ಸಿಕ್ಕು ಆಚರಣೆಗಳನ್ನು ಹುಟ್ಟುಹಾಕಿ ಅವುಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಹೆಣ್ಣು ಏನನ್ನೆ ಮಾಡಿದರು ಅನು ಪುರುಷನ ಹಿತಕ್ಕಾಗಿ ಅದನ್ನು ಬಿಟ್ಟು ಆಕೆಗೆ ಅಸ್ತಿತ್ವವೆಂಬುದಿಲ್ಲ ಎಂದು ನಂಬಲಾಗಿದೆ. ಇದಕ್ಕೆ ಹೆಣ್ಣು - ಗಂಡು ಇಬ್ಬರೂ ಬದ್ಧರಾಗಿದ್ದಾರೆ. ಇದಕ್ಕೆ ಅನುಗುಣವಾಗಿ ಹಿಂದಿನಿಂದಲೂ ನಡೆದುಕೊಂಡು ಬಂದ ವಿವಿಧ ಆಚರಣೆಗಳಲ್ಲಿ ಹೆಣ್ಣನ್ನು ಮುಂದು ಮಾಡಿದರೂ ಸಂಪೂರ್ಣ ನಿಯಂತ್ರಣ ಮಾತ್ರ ಪುರುಷನದೆ ಆಗಿದೆ.ನಮ್ಮ ನಡುವೆ ನಡೆಯುವ ಸಂಪ್ರದಾಯಗಳಾಗಲಿ, ಆಚರಣೆ ನಂಬಿಕೆಗಳಾಗಲಿ ಬೆಳೆದು ಬಂದಿದ್ದು ಪುರುಷ ಪ್ರಧಾನ ಮೌಲ್ಯದಿಂದಲೇ ಹಲವು ಬಗೆಯ ರೀತಿ-ನೀತಿಗಳು, ಆಚಾರ-ವಿಚಾಗಗಳು, ರೂಢಿ-ಪದ್ಧತಿಗಳು, ಮಹಿಳೆಯರ ಪಾಲುದಾರಿಕೆ ಇದ್ದರೂ ಅಲ್ಲಿ ಅವರು ಸ್ವತಂತ್ರರಿಲ್ಲ . ಏಕೆಂದರೆ ಶತ ಶತಮಾನಗಳಿಂದ ರೂಢಿಯಾಗಿ ಬಂದ ಪುರುಷ ಪ್ರಧಾನ ವ್ಯವಸ್ಥೆಯನ್ನು ಒಪ್ಪಿಕೊಂಡೆ ನಡೆದಿರುವುದು ಒಂದು ನಿಜ ಸ್ಥಿತಿ.

ಇದು ಎಲ್ಲ ಜಾತಿ, ಜನಾಂಗ, ವರ್ಗದ ಜನರಿಗೆ ಅನ್ವಯ ಹೇಳಬಹುದಾಗಿದೆ. ಧಾರ್ಮಿಕ ಆಚರಣೆಗಳಲ್ಲಿ ನೇರ ಪ್ರವೇಶ ಪಡೆಯದೇ ಇರುವ ಹೆಣ್ಣು ಮಾನವನ ಬದಿಕಿನ ಬಹುಮುಖ್ಯ ಘಟ್ಟಗಳಲ್ಲಿ ಆಚರಿಸಲ್ಪಡುವ ಆಚರಣೆಗಳಲ್ಲಿ ಹೆಣ್ಣು ಮಕ್ಕಳ ಪಾಲು ಪ್ರಮುಖವಾಗಿ ಕಂಡು ಬರುತ್ತದೆ. ಇಲ್ಲಿ ಆಚರಣೆ -ನಂಬಿಕೆಗೆ ಸಂಭಂಧಿಸಿದಂತೆ ತಾಯ್ತನದ ಗ್ರಹಿಕೆಯನ್ನು ಮಾತ್ರ ಗುರುತಿಸಲಾಗಿದೆ. ಮಾನವನ ಹುಟ್ಟಿನಿಂದ ಹಿಡಿದು ಸಾಯುವ ವರೆಗಿನ ಪ್ರಮುಖ ಆಚರಣೆಗಳಲ್ಲಿ ತಾಯ್ತನದ ಪಾತ್ರವನ್ನು ಮಾತ್ರ ಗ್ರಹಿಸಲಾಗಿದೆ. ಮಾನವನ ಬದುಕಿನ ಬಹು ಮುಖ್ಯ ಘಟ್ಟವಾಗಿರುವ ಈ ಕೆಳಗಿನ ನಾಲ್ಕು ಆಚರಣೆಗಳನ್ನು ಮುಖ್ಯವಾಗಿ ಗ್ರಹಿಸಲಾಗಿದೆ.

1) ಜನನ-ಮೈನೆರೆಯುವಿಕೆ
2) ವಿವಾಹ-ಸೋಬಾನೆ
3) ಬಸಿರು-ಬಾಣಂತಿ
4) ಮರಣ

## 1. ಜನನ

ತಾಯಿಯ ಗರ್ಭದಿಂದ ಹೊರಬಂದ ಜೀವಿ ತನ್ನ ಅಳುವಿನೊಂದಿಗೆ ಸ್ವತಂತ್ರವಾದ ಉಸಿರಾಟವನ್ನು ತೆಗೆದುಕೊಂಡು ತಾಯಿಯೊಂದಿಗಿನ ಕರುಳ ಬಂಧವನ್ನು ಬಿಡಿಸಿಕೊಳ್ಳುತ್ತದೆ. ಇಲ್ಲಿಂದ ಮಾನವ ಜೀವಿಯ ಜೀವನ ಪ್ರಾರಂಭವಾಗುತ್ತದೆ. ಮಗುವೊಂದು ಜನಿಸಿದ ನಂತರ ಹಲವು ಆಚರಣೆಗಳ ಮೂಲಕ ಜೀವನ ಪ್ರಾರಂಭದ ಯಾತ್ರೆಯನ್ನು ಆರಂಭಿಸಲಾಗುತ್ತದೆ. ಈ ಹಂತದಿಂದಲೇ ಹಲವು ನಂಬಿಕೆ ಮತ್ತು ಆಚರಣೆಗಳನ್ನು ಆಚರಿಸುವ ಪದ್ಧತಿ ಪ್ರಾರಂಭವಾಗುತ್ತವೆ.

ಗರ್ಭದಿಂದ ಹೊರಬಂದ ಮಗುವನ್ನು ತಾಯಿಯ ಕರುಳು ಬಳ್ಳಿಯಿಂದ ಬೇರ್ಪಡಿಸಲಾಗುತ್ತದೆ. ಈ ಕ್ಷಣದಿಂದ ಗರ್ಭಿಣಿ ಬಾಣಂತಿ ಎಂದು ಕರೆಸಿಕೊಳ್ಳುತ್ತಾಳೆ.ಬಾಣಂತಿಗೆ ಬಹು ಜಾಗರೂಕತೆಯಿಂದ ನೋಡಿಕೊಳ್ಳಲಾಗುತ್ತದೆ. ತಾಯಿಯಾದವಳಿಗೆ ಮನೆಯವರು ಆರೈಕೆ ಮಾಡುತ್ತಾರೆ. ಮೊದಲಿಗೆ ಒಂಭತ್ತು ತಿಂಗಳ 'ಮುಟ್ಟು' ಕಟ್ಟಿರುವ ಪರಿಣಾಮವಾಗಿ ಬಾಣಂತಿಯ ಹೊಟ್ಟಿಯಿಂದ 'ಮಾಸು' ಎಂಬ ಪದಾರ್ಥ ಹೊರಬರುತ್ತದೆ. ಈ ಕುರಿತಂತೆ ಹಲವು ಆಚರಣೆ ಮತ್ತು ನಂಬಿಕೆಗಳು ಜನಪದರಲ್ಲಿ ಕಂಡುಬರುತ್ತವೆ. ಬಾಣಂತಿಯ ಹೊಟ್ಟೆಯಿಂದ ಹೊರಬಂದ ಮಾಸು ಸಿಕ್ಕ ಸಿಕ್ಕಲ್ಲಿ ಎಸೆಯದೆ, ಒಂದು ಚಿಕ್ಕ ಹೊಸಮಡಿಕೆಯನ್ನು ತಂದು ಮಾಸನ್ನು ಹಾಕುವರು.ಅದನ್ನು ಪ್ರಾಣಿ, ಪಕ್ಷಿಗಳು ಮುಟ್ಟಬಾರದು ಎಂಬ ನಂಬಿಕೆ ಇದೆ.ಮಾಸಿನಿಂದ ತುಂಬಿದ ಮಡಿಕೆಯನ್ನು ಮನೆಯ ಹೊರಬಾಗಿಲಿನ ಬಳಿಯಲ್ಲಿ ಗುಂಡಿ ತೋಡಿ ಮುಚ್ಚಿ ಹಾಕಲಾಗುತ್ತದೆ.

ಗಂಡು ಮಗುವಿನ ಜನನವಾದರೆ ಮುಖ್ಯ ದ್ವಾರದ ಒಳಗಡೆ, ಹೆಣ್ಣು ಮಗುವಾಗಿದ್ದರೆ ದ್ವಾರದ ಹೊರಗಡೆ ಗುಂಡಿ ಮಾಡಿ ಮುಚ್ಚಿಡಲಾಗುತ್ತದೆ. ಬಹುಷ್ಯ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ' ಎನ್ನುವ ಮಾತು ಜನನದಿಂದ ಪ್ರಾರಂಭಿಸಲಾಗುತ್ತದೆ. ಬೇರೆ ಬೇರೆ ಜಾತಿ, ಜನಾಂಗ ,ಪ್ರದೇಶಗಳಿಗನುಗುಣವಾಗಿ ಈ ಆಚರಣೆ ಮತ್ತು ನಂಬಿಕೆಗಳು ಬೇರೆ ಬೇರೆಯಾಗಿ ಕಂಡುಬರುತ್ತವೆ.ಬಾಣಂತಿಯರಿಗೆ ನೋಡಿಕೊಳ್ಳುವ ರೀತಿ ಬೇರೆ ಬೇರೆ ಕಡಗಳಲ್ಲಿ ವಿಭಿನ್ನವಾಗಿ ಕಂಡು ಬಂದರೂ, ತುಂಬಾ ಆಸಕ್ತಿವಹಿಸಿ, ಆರೈಕೆಯಿಂದ ಆಕೆಯನ್ನು ನೋಡಿಕೊಳ್ಳುವ ಪರಿಪಾಠವಿದೆ. ಹೆರಿಗೆಯಾದ ಮೂರು ತಿಂಗಳವರೆಗೆ ಬಾಣಂತಿಯ ಆರೈಕೆ ಮಾಡಲಾಗುತ್ತದೆ. ಚೊಚ್ಚಲ ಹೆರಿಗೆಯಾದ ಬಾಣಂತಿ ವಿಶೇಷವಾಗಿ ನೋಡಿಕೊಳ್ಳಲಾಗುತ್ತದೆ.ಪೌಷ್ಠಿಕವಾದ ಆಹಾರ, ಬಿಸಿನೀರುಕೊಟ್ಟು, ಬಾಣಂತಿಯರನ್ನು ನೋಡಿಕೊಳ್ಳುವ ಪರಿಪಾಠ ಪಾರಂಪರಿಕವಾಗಿ ನಡೆದಿದೆ. ಆದರೆ ಆಧುನಿಕ ವಿಜ್ಞಾನ ಕಾರಣವಾಗಿ ಇಂದು ಬಾಣಂತಿಯರನ್ನು ನೋಡಿಕೊಳ್ಳುವ ರೀತಿ ಬಹಳಷ್ಟು ಸ್ವರೂಪ ಬದಲಾವಣೆಯಾಗಿದೆ.

## ಐದೇಸಿ ಮಾಡುವ ಪದ್ಧತಿ

ಮಗುವಿನ ಜನನ ಪ್ರಾರಂಭದ ಪ್ರಮುಖ ಆಚರಣೆ ಎಂದರೆ ಐದೇಸಿ ಮಾಡುವ ಪದ್ಧತಿ ಇದು ಮಗು ಜನಿಸಿದ ಐದನೇ ದಿನದಂದ ಹಳ್ಳಿಗಳಲ್ಲಿ ಜನಪದರು ಆಚರಿಸುತ್ತಾರೆ. ಮಗು ಹುಟ್ಟಿದ ಐದನೇ ದಿನದಂದು ತಾಯಿ ಮಗುವಿಗೆ ಸ್ನಾನ ಮಾಡಿಸಿ, ಮನೆಯನ್ನೆಲ್ಲ ಸ್ವಚ್ಛಗೊಳಿಸಿ, ಮನೆಯಲ್ಲಿನ ಸೂತಕ ಹೋಯಿತು. ಎಂದು ನಂಬುತ್ತಾರೆ. ಅಂದು ಸಾಯಂಕಾಲ ಬಾಣಂತಿಯ ಕೋಣೆಯಲ್ಲಿ ವಿಶೇಷ ಪೂಜೆಯೊಂದು ಮಾಡಲಾಗುತ್ತದೆ. ಅಂದು ಮಗುವಿಗೆ ಹಳೆ ಬಟ್ಟೆಯ, ಕುಂಚಿ ಕುಲಾವಿ ಹೊಲಿಸಿ ಕಾಡಿಗೆ ಕಪ್ಪನ್ನಿಟ್ಟು ನೀರು ತುಂಬಿದ ಬಿಂದಿಗೆಯ ಪೂಜೆ ಮಾಡಲಾಗುತ್ತದೆ.

ವಿಶೇಷವಾದ ನಂಬಿಕೆಯಂದರೆ ಬ್ರಹ್ಮನು ಬಂದು ಮಗುವಿನ ಹಣೆಬರಹ ಬರೆದು ಹೋಗುತ್ತಾನೆ ಎನ್ನುತ್ತಾರೆ. ಇದಲ್ಲದೆ 'ಶೇಟವಿ' (ಶೇಟಗಿ, ಶೇಟಗೆವ್ವ ) ಎಂಬ ದೇವತೆ ಮಗುವಿನ ಹಣೆ ಬರಹ ಬರೆಯುತ್ತಾಳೆ ಎಂಬ ನಂಬಿಕೆ ಸಹ ಇದೆ. ಅಂದು ಬಿಳಿಜೋಳದ ಕಡುಬು ಮಾಡಿ ಶೇಟವಿದೇವಿಗೆ ನೈವಿದ್ಯ ಕೊಡಲಾಗುತ್ತದೆ.ಬ್ರಹ್ಮನು ಹಣೆ ಬರಹ ಬರೆಯುವ ನಂಬಿಕೆ ಒಂದು ಕಡೆ ಇದ್ದರೆ, 'ಶೇಟವಿ' ಎಂಬ ಸ್ತ್ರೀ ದೇವತೆ ಮಗು ಜನಿಸಿದ ಐದನೇ ದಿನದಂದು ಹಣೆಬರಹ ಬರೆದು ಹೋಗುತ್ತಾಳೆನ್ನುವ, ನಂಬಿಕೆ ಹಲವು ಸಮುದಾಯಗಳಲ್ಲಿ ಕಂಡು ಬರುತ್ತದೆ. ಇದು ಮಾತೃ ಆರಾಧನಾ ಪದ್ಧತಿಯನ್ನು ಎತ್ತಿ ಹಿಡಿಯುತ್ತದೆ. ಜೊತೆಗೆ ಪುರುಷ ದೇವತೆ ಬದಲಾಗಿ ಸ್ತ್ರೀ ದೇವತೆ ಹಣೆಬರಹ ಬರೆಯುವವಳಾಗಿ ದ್ದಾಳೆ. ಇದು ಮಾತ್ರ ಪ್ರಧಾನತೆಯ ಕುರುಹು ಎಂದೇ ಹೇಳಬಹುದು. ಚಿಕ್ಕ ಮಕ್ಕಳ ಕೊರಳಲ್ಲಿ 'ಶೆಟವಿ'ಯ ಚಿತ್ರ ವಿರುವ ಗೋಲಾಕಾರದ ಒಂದು ಆಭರಣ ಹಾಕಲಾಗುತ್ತದೆ. ಮಗು ಎರಡು ಮೂರು ವರುಷಗಳಾಗುವವರೆಗೆ ಇದನ್ನು ಕೊರಳಲ್ಲಿ ಕಟ್ಟಲಾಗುತ್ತದೆ.ಈ ಆಭರಣ ಬಂಗಾರ ಇಲ್ಲವೇ ಬೆಳ್ಳಿಯಿಂದ ಮಾಡಲಾಗಿರುತ್ತದೆ. ಮಗು ಜನಿಸಿದ ನಂತರ ತಾಯಿಯ ಆರೋಗ್ಯದ ಕಡೆ ಹೆಚ್ಚು ಗಮನ ಕೊಡಲಾಗುತ್ತದೆ. ಈ ಕಾಳಜಿ ಹೆಚ್ಚಾಗಿ ಚೊಚ್ಚಲ ಬಸರಿಗಿ ಮಾತ್ರ ಇರುವುದು ಬಸಿರು -ಹೆರಿಗೆಯಂತಹ ಸಂಧರ್ಭದಲ್ಲಿ ಹೆಣ್ಣಿಗೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಹೆಚ್ಚಿನ ಒತ್ತಡ ಹೆರದೆ ಆರೈಕೆಯಿಂದ ನೋಡಿಕೊಳ್ಳಲಾಗುತ್ತದೆ. ಹೆಣ್ಣಿಗೆ ಕುಟುಂಬದಲ್ಲಿ ಪ್ರಾಮುಖ್ಯತೆ ಬರುವುದು ಆಕೆ ತಾಯಿಯಾಗುವ ಸಂಧರ್ಭ ಬಂದಾಗ. ಇಲ್ಲದಿದ್ದರೆ ಆಕೆಯ ಬದುಕು ಜನಪದ ಗರತಿ ಹೇಳುವ ಹಾಗೆ 'ಹಾಸುಂಡು ಬೀಸಿ ಒಗದಂಗ' ಆಗುತ್ತದೆ.

## ಮೈನೆರೆಯುವಿಕೆ

ಹೆಣ್ಣು ಮಗು ತನ್ನ ಹನ್ನೊಂದನೆ ವಯಸ್ಸಿನಿಂದ ಹಿಡಿದು ಸುಮಾರು ಹದಿನೆಂಟನೆಯ ವಯಸ್ಸಿನವರೆಗೆ ಮೊದಲಸಲ ಋತುಮತಿಯಾಗುವ ಸ್ಥಿತಿಯನ್ನು ಮೈನೆರೆಯುವಿಕೆ ಎಂದು ಕರೇ ುಲಾಗುತ್ತದೆ. ಒಂದು ಹೆಣ್ಣು ಮಗು ಪ್ರೌಢಳಾಗುವುದು ಈ ಸಂದರ್ಭದಲ್ಲೆ ಎಂದು ನಂಬಲಾಗಿದೆ. ಕಾ ೂನಿನ ಮೂಲಕ ಹೆಣ್ಣಿನ ವಯಸ್ಸು ಹದಿನೆಂಟು ದಾಟಿದ ಮೇಲೆ ಮದುವೆಗೆ ಯೋಗ್ಯಳೆಂದು

ಹೇಳಲಾಗುತ್ತದೆ ಆದರೆ ಜನಪದರ ದೃಷ್ಟಿಯಲ್ಲಿ ಮೈನೆರೆದ ಹೆಣ್ಣು ವಿವಾಹಕ್ಕೆ ಯೋಗ್ಯಳು ಎಂದು ನಂಬುತ್ತಾರೆ.

ಮಗುವನ್ನು ಹೆತ್ತ ತಾಯಿಗೆ ಆರೈಕೆ ಮಾಡುವಂತೆ ಮೈನೆರೆದ ಹೆಣ್ಣಿಗೂ ಸಹ ತುಂಬ ಜಾಗರೂಕತೆಯಿಂದ ನೋಡಿಕೊಳ್ಳಲಾಗಿತ್ತದೆ. ಈ ಸಂದರ್ಭದಲ್ಲಿ ಹಲವು ಆಚರಣೆ ಮತ್ತು ನೆರೆ -ಹೊರೆಯ ಮುತ್ತೈದೆಯರಿಗೆ ಕರೆದು ಸ್ನಾನಾದಿಗಳನ್ನು ಮಾಡಿದ ಅನುಕೂಲಕ್ಕೆ ತಕ್ಕಂತೆ ಕೆಲ ದಿನಗಳನ್ನು ಆಕೆಗೆ ಪ್ರತ್ಯೇಕ ಕೂಡಿಸಿ ಅಲಂಕಾರ ಮಾಡಿ ನೆರೆಮನೆ ನೆಂಟರಿಷ್ಟರಿಗೆ ಕರೆದು ಸಿಹಿ ಊಟ ಕೊಡಲಾಗುತ್ತದೆ. ಬೇರೆ ಬೇರೆ ಪ್ರದೇಶ ಹಾಗೂ ಸಮುದಾಯಗಳಲ್ಲಿ ವಿಭಿನ್ನವಾದ ಆಚರಣೆಗಳನ್ನು ಕಾಣಬಹುದಾಗಿದೆ. ಉತ್ತರ ಕರ್ನಾಟಕದ ಕಡೆಗಳಲ್ಲಿ ಮೈನೆರೆದ ಹೆಣ್ಣು ಮಗಳಿಗೆ ಮನೆಯ ಆವರಣದಲ್ಲಿ ಮಂಟಪ ಹಾಕಿ ಕೂಡಿಸಿ ಸೋಬಾನ ಪದಗಳನ್ನು ಹಾಡುವುದು ಹಾಸ್ಯ -ವಿನೋದಗಳನ್ನು ಮಾಡುವುದು ಸಾಮಾನ್ಯ. ಆಕೆಗೆ ದಕ್ಷಿಣ ಕರ್ನಾಟಕದ ಕೆಲ ಸಮುದಾಯಗಳಲ್ಲಿ ಗೂಡ್ಲು ಹಾಕುವ ಪದ್ಧತಿ ಇದ್ದು ಮೈನೆರೆದ ಹೆಣ್ಣಿಗೆ ಪ್ರತ್ಯೇಕವಾದ ಮನೆಯಿಂದ ಸ್ವಲ್ಪ ದೂರದಲ್ಲಿ ಗುಡಿಸಲು ತಯಾರಿಸಿ ಕೆಲ ದಿನಗಳವರೆಗೆ ದೂರ ಇರಿಸಲಾಗುವುದು.

ತಾಯ್ತನದ ಸಂಕೇತವಾಗಿ ಮೈನೆರೆದ ಹೆಣ್ಣಿನ ಪಕ್ಕದಲ್ಲಿ ಕಟ್ಟಿಗೆಯ ಗೊಂಬೆಯೊಂದು ಇಡುವರು. ಮೈನೆರೆಯುವುದು ತಾಯ್ತನದ ಪ್ರಥಮ ಹಂತ ಎಂದೆ ನಂಬಿದ್ದಾರೆ ಜನಪದರು. ತಾಯಿ ಆಗುವ ಸಂಕೇತವೆ ಋತುಮತಿಯಾಗುವುದು. ಕಟ್ಟಿಗೆಯ ಗೊಂಬೆಯೊಂದು ಇಡುವರು. ಮೈನೆರೆಯುವುದು ತಾಯ್ತನದ ಪ್ರಥಮ ಹಂತ ಎಂದೆ ನಂಬಿದ್ದಾರೆ ಜನಪದರು ತಾಯಿ ಆಗುವ ಸಂಕೇತವೆ ಋತುಮತಿಯಾಗುವುದು. ಕಟ್ಟಿಗೆಯ ಗೊಂಬೆಗೆ ಸೀರೆ ಉಡಿಸಿ ಮೈನೆರೆದ ಹೆಣ್ಣುಮಗಳ ಬಳಿ ಇಡಲಾಗುತ್ತದೆ. ಈ ಆಚರಣೆ ತಾಯ್ತನದ ಸಂಕೇತವೆಂದೆ ಹೇಳಬಹುದು, ತಾಯಿಯಾಗಲೂ ಈ ಹೆಣ್ಣು ಸಮರ್ಥಳು ಎಂಬ ಅರ್ಥ ಬರುವಂತೆ ಗೊಂಬೆ ಇಡುವ ಆಚರಣೆ ಚಾಲ್ತಿಯಲ್ಲಿ ಬಂದಿದೆ. ಜನಪದರಲ್ಲಿ ಹೆಣ್ಣಿನ ಋತುಮತಿ ವಿಷಯವನ್ನು ಗೌಪ್ಯವಾಗಿ ಇಡದೆ ಅದನ್ನು ಸಾರ್ವಜನಿಕಗೊಳಿಸುವ ಉದೇಶವೆಂದರೆ ಆಕೆ ತಾಯಿ ಆಗುವ ಎಲ್ಲ ಲಕ್ಷಣಗಳು ಪ್ರಾಪ್ತಿಯಾಗಿವೆ. ಎಂದು ಬಹಿರಂಗ ಪಡಿಸುವುದೆ ಆಗಿದೆ ಎನ್ನಬಹುದು. "ಜಗತಿನಲ್ಲಿ ಸುಮಾರಾಗಿ ಎಲ್ಲ ದೇಶಗಳಲ್ಲೂ, ಎಲ್ಲ ಪಂಗಡಗಳಲ್ಲೂ ಹುಡುಗಿ ಮೈನೆರೆದಳೆಂದರೆ ಬಂಧುಗಳು ಕೆಲವು ಜಾಗ್ರತೆಗಳನ್ನು ವಹಿಸುತ್ತಾರೆ. ಕೆಲ ನಿಷೇಧಗಳು ಅದು ಮಾಡಬಾರದು, ಇದು ತಿನ್ನಬಾರದು ಮುಂತಾದವನ್ನು ವಿಧಿಸುತ್ತಾರೆ. ಅವುಗಳಲ್ಲಿ ಮುಖ್ಯವಾದವೆಂದರೆ ಯಾರ ಕಣ್ಣಿಗೂ ಬೀಳದಂತೆ ಒಂದು ಕತ್ತಲು ಗುಹೆಯಲ್ಲೋ, ಕೋಣೆಯಲ್ಲೋ ಹುಡಗಿಯನ್ನಿರಿಸುವುದು ಬಲು ಮಿತವಾದ ಪಥ್ಯದ ಆಹಾರ ಕೊಡುವುದು, ಹಸಿರೆಲೆಗಳಿಂದ ಹಣೆದ ಚಾಪೆಯ ಮೇಲೆಯೇ ಇರುವುದು ಮುಂತಾದವೆಲ್ಲಾ ಸರ್ವೇ ಸಾಧಾರಣವಾಗಿ ಎಲ್ಲ ದೇಶಗಳಲ್ಲೂ ಇರುವಂತಹವೇ ಈಗಲೂ ಕೆಲ ದೇಶಗಳಲ್ಲಿ, ಜಾತಿಗಳಲ್ಲಿ ಈ ಆಚಾರಗಳು ಕಂಡುಬರುತ್ತದೆ "[33] ಮೈನೆರೆದ ಹೆಣ್ಣು- ಮಗಳಿಗೆ ತಾಯಿಯು ಅನೇಕ ರೀತಿಯಲ್ಲಿ ಆರೈಕೆ ಮಾಡುವುದಷ್ಟೇ ಅಲ್ಲ, ಶೃಂಗಾರಮಾಡಿ, ಮಂಟಪಕಟ್ಟಿ

ಹಾಡಿ ಹಾರೈಸುತ್ತಾಳೆ. ಅಕ್ಕ ಪಕ್ಕದ ಮುತ್ತೈದೆಯರಿಗೆ ಕರೆಯಿಸಿ, ನೆಂಟರಿಷ್ಟರಿಗೆ ಹೇಳಿ ಸಂಭ್ರಮ ಪಡುತ್ತಾರೆ. ಮೈನೆರೆದ ಹಾಡು ಈ ಕೆಳಗಿನಂತೆ ಇದ್ದು ತಾಯಿಯ ಸಂಭ್ರಮ ಇಲ್ಲಿ ವ್ಯಕ್ತವಾಗಿರುವುದು ನೋಡಬಹುದು.

"ಮೈನೆರದ ಮಗಳಿಗೆ ಮೊಗ್ಗಿನ ಜಡಿಹಾಕಿ
ನೀಲಿ ಬಣ್ಣದ ರೇಶ್ಮಿ ಧಡಿಯ ಉಡಿಸ್ಯಾರ
ಕೈಗಳಿಗೆ ಬಡದಾರ ಶ್ರೀಗಂಧ ಹಿಗ್ಗಿಲಿ
ಹೀಂಗ ತಾಯಿಯೇ ನದುರ ಮಾಡ್ಯಾಳ ಸೋಬಾನವೆ.

ಮಗಳಾ ಅಂದವ ನೋಡಿ ಮಾದೇವ ಭೂಮಿಗ್ವಂದ
ಕಣ್ತುಂಬ ನೋಡಿ ಹರಕೆಯ ತಾ ಕೊಟ್ಟ
ಮುಂದಿನಾ ನಿನ ಜನುಮ ಸುಖದಾಗ ಆಗಲೆಂದು
ಹಿಂಗೆತ್ತಿ ಮುತ್ತೈದೇರು ಆರತಿ ಬೆಳಗಿದಾ ಸೋಬಾನವೇ "[23]

## ವಿವಾಹ -ಸೋಬಾನೆ

ವಿವಾಹವು ಸಮಾಜದಲ್ಲಿ ಮಾನ್ಯತೆ ಪಡೆದ ಒಂದು ಸಂಸ್ಥೆಯಾಗಿದೆ. ಪ್ರಪಂಚದಾದ್ಯಂತ ಕಂಡುಬರುವ ಈ ವಿವಾಹವೂ ಸಮಾಜದ ಮೂಲ ಘಟಕವಾದ ಕುಟುಂಬದ ಒಂದು ವಿಭಿನ್ನ ಅಂಗ. ಮಾನವನು ತನ್ನ ಅಗತ್ಯತೆಗಳನ್ನು ವಿವಾಹದ ಮೂಲಕ ಪೂರೈಕೆ ಮಾಡಿಕೊಳ್ಳುತ್ತಾನೆ. ಮನುಷ್ಯ ತನ್ನ ಕಾಮಾದಿಗಳ ಬಯಕೆ ಹಾಗೂ ಸಂತಾನ ಪಡೆಯುವ ಹಕ್ಕನ್ನು ವಿವಾಹ ಪೂರೈಸುತ್ತದೆ. ಸಮಾಜ ಶಾಸ್ತ್ರಜ್ಞನಾದ " ಬ್ರಾನಿಸೊ ಮಲಿನವೊಸ್ಕಿ "ವಿವಾಹವು ಸ್ತ್ರೀ ಪುರುಷರ ಲೈಂಗಿಕ ಅಪೇಕ್ಷೆಯ ಪೂರೈಕೆಗಾಗಿ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶ ಪೂರ್ವಕವಾಗಿ ಏರ್ಪಡಿಸಿಕೊಂಡ ಒಪ್ಪಂದವಾಗಿದೆ."[24] ಎನ್ನುತ್ತಾನೆ ಮಾನವನು ತನ್ನ ಅಭಿವೃದ್ಧಿಯನ್ನು, ಧಾರ್ಮಿಕ, ಸಾಂಸ್ಕೃತಿಕ ಬದುಕನ್ನು ವಿಹಾಹದೊಂದಿಗೆ ಸಮೀಕರಿಸಿಕೊಂಡಿದ್ದಾನೆ. ಏಕೆಂದರೆ ಸಮಾಜ ಒಪ್ಪಿತವಾದ ವಿವಾಹದ ಮೂಲಕ ಮನುಷ್ಯ ಲೈಂಗಿಕ ತೃಪ್ತಿ, ಮಕ್ಕಳ ಪಾಲನೆ, ಹಿರಿಯರ ಆರೈಕೆ ಸಾಮಾಜಿಕ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿರ್ವಹಿಸುವಂತೆ ಮಾಡುತ್ತದೆ. ಹೆಣ್ಣು ಗಂಡು ಪರಸ್ಪರ ಸಹಕಾರದಿಂದ ವಿವಾಹ ಸಂಸ್ಥೆ ನಡೆಸಿಕೊಂಡು ಬರಲಾಗುತ್ತದೆ.

ವಿವಾಹದ ಮುಖ್ಯ ಉದ್ದೇಶವೆಂದರೆ ಮಕ್ಕಳನ್ನು ಪಡೆಯುವುದು ಸಮಾಜದ ಮುಂದುವರೆಯುವಿಕೆಗಾಗಿ ತನ್ನ ವಂಶದ ಬೆಳವಣಿಗೆಗಾಗಿ ಸಂತಾನ ಪಡೆಯುವ ಉದ್ದೇಶ ಹೊಂದಲಾಗಿದೆ. ವಿವಾಹದ ಬಂಧನದ ಪ್ರತೀಕವಾಗಿ ಹುಟ್ಟಿದ ಮಕ್ಕಳಿಗೆ ಸಮಾಜದಲ್ಲಿ ಮಾನ್ಯತೆ ಇದೆ. ಈ ಕಾರಣಕ್ಕಾಗಿ ಸಮಾಜದ ವಿವಾಹವೆಂಬ ಸಂಸ್ಥೆಗೂ ಪ್ರಾಮುಖ್ಯತೆ ಇದೆ. ಆದರೆ ವಿವಾಹವೂ ಹೆಣ್ಣಿಗೆ ಸುಖವನ್ನು ತಂದುಕೊಡುವ ಸಾಧನವೇನೂ ಇಲ್ಲ. ವಿವಾಹದ ಮೂಲಕವಾಗಿ ಹೆಣ್ಣಿನ ಶೋಷಣೆಗಳು ರಾಜರೋಷವಾಗಿ ನಡೆಯುತ್ತಲೇ ಇರುತ್ತವೆ. "ಹುಡುಗಿ ತೊಳೆಯುವ, ಬಳಿಯುವ ವಯಸ್ಸಿಗೆ ಬರುತ್ತಿದ್ದಂತೆಯೇ ಅವಳ ಲಗ್ನದ ಬಗ್ಗೆ ಗಡಿಬಿಡಿ. ಮದುವೆಯ ಅರ್ಥ, ಅನಂತರದ ಜವಾಬ್ದಾರಿಗಳು,

ಗರ್ಭಿಣಿಯಾಗುವುದು, ಬಾಣಂತಿತನ, ಮಕ್ಕಳ ಲಾಲನೆ - ಪೋಷಣೆಯ ಬಗ್ಗೆ ತಿಳಿದುಕೊಳ್ಳುವಷ್ಟು ಮಾನಸಿಕ ಬೌದ್ಧಿಕ ಮತ್ತು ಶಾರೀರಿಕ ಶಕ್ತಿ ಆ ವಯಸ್ಸಿಗೆ ಹೆಣ್ಣು ಮಕ್ಕಳಲ್ಲಿ ಇರುವುದಿಲ್ಲ. ಹಾಗಿರುವಾಗ ಅದರ ಮೇಲೆ ಸಾಮಾಜಿಕ ಒತ್ತಾಯವನ್ನು ಹೇರುವಂತಹ ಕೌಟುಂಬಿಕ ನೀತಿಯು ಬಹಳ ಅಶಾಸ್ತ್ರೀಯ ಮತ್ತು ಅಮಾನುಷವಾದುದಾಗಿದೆ ಎಂದು ಹೇಳಬೇಕಾಗುತ್ತದೆ. "[38] ವಿವಾಹ ಪದ್ಧತಿ ಮನುಷ್ಯನ ಬದುಕು ಹಸನು ಗೊಳಿಸುವುದಕ್ಕಾಗಿ ಇರಬೇಕೆ ಹೊರತು ಅದೇ ಮಾರಕವಾಗಬಾರದು.

ವಿವಾಹಕ್ಕೆ ಒಳಗಾದ ಹೆಣ್ಣು ಮಕ್ಕಳು ತಾಯಿಯಾಗಿ ಒಂದು ತರಹದ ಶೋಷಣೆಗೆ ಒಳಗಾದರೆ, ಮಕ್ಕಳಿಲ್ಲದವರೂ ಸಹ ನಿಂದೆಗೆ ಗುರಿಯಾಗಿ ಬಾಳು ಹಿನಾಯಗೊಂಡಿರುವುದು ಸ್ಪಷ್ಟವಿದೆ. ಆದರೆ ಪ್ರಾಚೀನ ಕಾಲದಲ್ಲಿ ಮಾತೃಪ್ರಧಾನತೆಯ ಸಂಧರ್ಭದಲ್ಲಿ ವಿವಾಹ ಮತ್ತು ಮಕ್ಕಳು ಪಡೆಯುವಿಕೆಗೆ ಯಾವುದೇ ಸಂಭಂಧವಿರಲಿಲ್ಲ. ಹೆಣ್ಣನ್ನು ವಿವಾಹ ಸಂಸ್ಥೆಗೆ ಒಳಪಡಿಸುವದಕ್ಕಿಂತ ಪೂರ್ವದ ಅಂದರೆ ಮಕ್ಕಳ ಹುಟ್ಟಿಗೆ ಗಂಡೊಬ್ಬ ಕಾರಣವೆಂಬ ತಿಳುವಳಿಕೆ ಮೂಡದ ಪೂರ್ವದಲ್ಲಿ ತಾಯಿಗಾಗಲೀ ತಾಯ್ತನಕ್ಕಾಗಿ ಯಾವುದೇ ತರಹ ಆತಂಕಗಳಾಗಲೀ, ತಲ್ಲಣಗಳಾಗಲಿ ಇರಲಿಲ್ಲ. ತಾಪಿ ಧರ್ಮರಾವ ಅವರು ತಮ್ಮ ವಿವಾಹ ಹುಟ್ಟು ಮತ್ತು ಪೂರ್ವೋತ್ತರವೆಂಬ ಕೃತಿಯಲ್ಲಿ ಹೀಗೆ ಅಭಿಪ್ರಾಯ ಪಡುತ್ತಾರೆ 'ಪುರಾತನ ಮಾನವರಿಗೆ ಸಂತಾನದ ಕಾರಣ ಗೊತ್ತಿರಲಿಲ್ಲ ಯಾವಾಗಲೋ ಜೊತೆಗೂಡಿದರೆ ಮತ್ಯಾವಾಗಲೋ ಸಂತಾನವುಂಟಾಗುತ್ತದೆ. ಮನುಷ್ಯರಲ್ಲಾದರೂ, ಪ್ರಾಣಿಗಲ್ಲಾದರೂ, ಪಕ್ಷಿಗಳಲ್ಲಾದರೂ ಈ ಎರಡು ಕಾರ್ಯಗಳಿಗೂ ನಡುವೆ ಅವಧಿಯಿರುತ್ತದೆ . ಆದ್ದರಿಂದ ಸಂತಾನಕ್ಕೆ ಆ ಜೊತೆಗೂಡುವಿಕೆಯೇ ಕಾರಣವೆಂದು ತಕ್ಷಣ ಗ್ರಹಿಸಲಾರ ಆ ವಿಷಯ ಗ್ರಹಿಸಲು ಬಹಳ ಬುದ್ಧಿ, ವಿಜ್ಞಾನಗಳು ಬೇಕು .ಅಂದಿನವರಿಗೆ ಅವು ಇರಲಿಲ್ಲ. ಅವರ ದೃಷ್ಟಿಯಲ್ಲಿ ಜೊತೆಗೂಡುವಿಕೆ, ಸಂತಾನವುಂಟಾಗುವಿಕೆ, ಎಂಬವು ಬೇರೆ ಬೇರೆ ಕಾರ್ಯಗಳು, ಸಂಬಂಧವಿಲ್ಲದ್ದವು. ಆಗಿನ ಮನುಷ್ಯರು ತಿಂದಂತೆಯೇ, ಕುಡಿದಂತೆಯೇ ಜೋತೆಗೂಡುತ್ತಿದ್ದರು. ಅವರೊಂದಿಗೆ ಆ ತೃಷೆ ತೀರಿಹೋಗುತ್ತಿತ್ತು. ಆ ಕ್ರಿಯೆಯನ್ನು ಮರೆತುಬಿಡುತ್ತಿದ್ದರು. ಅಷ್ಟೇ ಹೊರತು ಅದರೊಂದಿಗೆ ಈ ಸಂತಾನವನ್ನು ಗಂಟು ಹಾಕಲಾರದಾದರು' ಎನ್ನುತ್ತಾರೆ.

ಈ ಕಾಲಾವಧಿಯಲ್ಲಿ ಬಹುಷ್ಯ ತಾಯಂದಿರ ಸ್ಥಿತಿ ಚೆನ್ನಾಗಿತ್ತು ಎಂದು ಊಹಿಸಲು ಸಾಧ್ಯ. ಏಕೆಂದರೆ ಕುಟುಂಬ ವಿವಾಹಗಳಂತಹ ಸಾಮಾಜಿಕ ತಾಯಿಯನ್ನು ಬಾಡಿಗೆ ಎತ್ತಾಗಿಯೇ ಕಂಡಿವೆ. ಹೆಣ್ಣನ್ನು ತನ್ನ ಸ್ವತ್ತು ಎಂದು ಮಾಡಿಕೊಳ್ಳುವ ವಿವಾಹ, ಆ ಮೂಲಕವಾಗಿ ಕುಟುಂಬಕ್ಕೆ ಕಾಲಿಡುವ ಹೆಣ್ಣಿನ ದಾರುಣ ಚಿತ್ರಣ ತಾಯ್ತನದಲ್ಲಿ ಪರಿವ್ಯಸನವಾಗಿ ಹೋಗಿದೆ ಎಂದರೆ ತಪ್ಪಾಗಲಾರದು. ವಿವಾಹದಿಂದ ಮಕ್ಕಳನ್ನು ಪಡೆಯಬಹುದು ಎಂಬ ವಿಷಯ ಕೇವಲಹೆಣ್ಣಿಗೆ ನೈತಿಕ ಚೌಕಟ್ಟನ್ನು ರೂಪಿಸಿ ಅದರಿಂದ ಪುರಿಷಾಧಿಕಾರ ಭದ್ರಪಡಿಸಿಕೊಳ್ಳಲು ಹುನ್ನಾರ ನಡೆಸಿ ಅದರಲ್ಲಿ ಯಶಸ್ಸು ಕಂಡಿರುವುದು ಸರ್ವವಿದಿತ. ಪುರುಷರು ತಮ್ಮ ಅಧಿಕಾರವನ್ನು ಮಹಿಳೆಯ ಮೇಲೆ ಸಾಧಿಸಲು ಪ್ರಾರಂಭಿಸಿ ಮುಕ್ತ ಲೈಂಗಿಕ ಪದ್ಧತಿಯನ್ನು ಅಳಿಸಿ ಹಾಕಿ ತನ್ನ ವಂಶದ ಕುಡಿಯನ್ನು ಭದ್ರಪಡಿಸಿಕೊಳ್ಳಲು ವಿವಾಹ ಸಂಸ್ಥೆ ಹುಟ್ಟು ಹಾಕುವುದು ಪುರುಷಶಾಹಿಗೆ ಅನಿವಾರ್ಯವಾಗಿತು.

## ಶೋಭಾನೆ

ವಿವಾಹದ ನಂತರ ಸಂತಾನ ಪ್ರಾಪ್ತಿಗಾಗಿ ನಡೆಸುವ ಗಂಡು - ಹೆಣ್ಣಿನ ಮಿಲನದ ಆಚರಣೆಯು ಈ ಶೋಭಾನೆ ಪದ್ಧತಿ. ಶೋಭಾನೆ ಎಂದರೆ ಹೆಸರೆ ಸೂಚಿಸುವಂತೆ ಶುಭವನ್ನು ಕೋರುವುದು ಸಂತಾನ ಫಲ ಪ್ರಾಪ್ತಿಯಾಗಲಿ ಎಂದು ಹಾರೈಸುವ ಹಾಡುಗಳನ್ನು ಶೋಭಾನೆ ಪದಗಳೆಂದು ಕರೆಯುವರು. ವಧು - ವರರಿಗೆ ಹಾರೈಕೆಯ ನುಡಿಗಳಿಂದ ಮುತ್ತೈದೆಯರು ಸೇರಿ ಆಶೀರ್ವದಿಸುವ ಆಚರಣೆಯೆ ಈ ಶೋಭಾನೆ. ಹೆಣ್ಣಿನ ಜೀವನದಲ್ಲಿ ಮೈನೆರೆಯುವುದು, ಮದುವೆಯಾಗಿ ಶೋಭನದ ಆಚರಣೆಗಳು ಶುಭದ ಸಂಕೇತಗಳಾಗಿ ತಾಯ್ತನದ ಪ್ರತೀಕವೆಂಬಂತೆ ಚಾಲ್ತಿಯಲ್ಲಿವೆ. ಮದುವೆಯಾದ ವಧು ವರಗಳು ಸಂತಾನಪ್ರಾಪ್ತಿ ಹೊಂದಿ ಜೀವನ ಸಾಫಲ್ಯಗೊಳಿಸಿಕೊಳ್ಳಲಿ ಎಂಬ ಹಾರೈಕೆಯು ಈ ಶೋಭನ ಪದ್ಧತಿಯುದ್ದಾಗಿರುತ್ತದೆ. ಸೋಬಾನ ಪದಗಳಲ್ಲಿ ತಮಗೆ ಎಂಥ ಮಕ್ಕಳು ಬೇಕು ಎಂಬುದನ್ನು ಬೇಡಿಕೊಳ್ಳುತ್ತಾರೆ.

''ಮಾತಿನ ಮಗಬೇಕ ನೀತಿಯ ಮಗಳು ಸಾಕ
ಉದಾಳ ಮಕ್ಕಳು ಬ್ಯಾಡ ಸೋಬಾನವೆ
ಉದಾಳ ಮಕ್ಕಳ ಕೊಡಬೇಡ ಮಾದೇವ
ಬಂಜೆಂಬ ಶಬುದ ನನಗಿರಲಿ ಸೋಬಾನವೆ
ಬಡತನ ಇರಲ್ಯಾಕ ಗಂಜಿಯ ಕುಡಿಯಲ್ಯಾಕ
ಅಭಿಮಾನ ನಮಗ ಕೊನಿತನ ಸೋಭಾನವೆ
ಅಭಿಮಾನ ನಮಗ ಕೊನಿತನ ಮಾದೇವ
ಹರಿದಹೋದ ಗಳಿಗ್ಯಾಗ ಸಾವ ಬರಲಿ ಸೋಬಾನವೆ ''[3]

ಇಲ್ಲಿ ತಾಯಿಯಾದವಳು ಉದಾಳ ಮಕ್ಕಳು ತಮಗೆ ಬೇಡ ಬಂಜೆಯಾಗಿ ಇರಬಹುದು ಆದರೆ ನೀತಿಹಿನ ಮಕ್ಕಳು ಬೇಡ ಎಂಬ ಮಾತನ್ನು ಹೇಳಿದ್ದಾಳೆ. ಬಡತನ ಇದ್ದರೂ ಚಿಂತೆ ಇಲ್ಲ ಅಭಿಮಾನದಿಂದ ಬದುಕಬೇಕು ಅಭಿಮಾನರಹಿತಳಾಗಿ ಬದುಕುವುದಕ್ಕಿಂತ ಸಾಯುವುದೇ ಲೇಸು ಎಂಬ ಮಾತು ಮಹತ್ವದ್ದಾಗಿ ಕಾಣುತ್ತದೆ. 'ಮುಂಜಾನೆ ಹುಟ್ಟಿ ಸಂಜೆಗೆ ಸಾಯಲಿ ಬಂಜೆಂಬ ಶಬುದ ಅಳಿಯಲಿ' ಎಂಬ ಮಾತು ಇಲ್ಲಿ ಹುಸಿಯಾಗಿ ಕಾಣುತ್ತದೆ. 'ಹತ್ತು ಹಡೆಯುವುದಕ್ಕಿಂತ ಒಂದು ಮುತ್ತನ್ನು ಹಡೆಯಬೇಕು' ಎನ್ನುವ ನೆಲೆಯಲ್ಲಿ ಸೋಬಾನೆ ಪದದ ರಚನೆಗೊಂಡಿದೆ.

## 3. ಬಸಿರು ಬಾಣಂತಿಯರ ಆಚರಣೆ ಮತ್ತು ನಂಬಿಕೆಗಳು

ಹೆಣ್ಣಾದವಳು ತನ್ನ ಗರ್ಭದಲ್ಲಿ ನವ ಮಾಸಗಳ ಕಾಲ ಮಗುವನ್ನು ಹೊತ್ತುಕೊಂಡಿರುತ್ತಾಳೆ. ಈ ಸಂದರ್ಭದಲ್ಲಿ ತಾಯಿಯಾಗಲಿರುವ ಹೆಣ್ಣಿಗೆ ನಾನಾ ರೀತಿಯ ಆಚರಣೆಗಳನ್ನು ಮಾಡಲಾಗುತ್ತದೆ ಅವುಗಳೆಂದರೆ ಕಳ್ಳಕುಪ್ಪಸ ಮಾಡುವುದು, ಹಣ್ಣುಕೊಡುವುದು, ಬಂಕಿ (ಬಯಕೆ)

ಊಟಕೊಡುವುದು. ಸೀಮಂತಮಾಡುವುದು ಇವುಗಳನ್ನು ಸಂತೋಷದಿಂದ ಆಚರಣೆ ಮಾಡುವುದಲ್ಲದೆ. ತಾಯಿಯಾಗುವ ಹೆಣ್ಣನ್ನು ಜಾಗರೂಕತೆಯಿಂದ ನೋಡಿಕೊಳ್ಳುವರು.

ಗರ್ಭಿಣಿಯಾದ ಮೂರು ತಿಂಗಳಲ್ಲಿ ಕಳ್ಳಕುಪ್ಪಸ ಮಾಡುವ ಆಚರಣೆ ಇದೆ. ಗರ್ಭಿಣಿಯಾದ ಸುದ್ದಿ ಮನೆಯವರಿಗೆ ತಿಳಿಯುತ್ತಲೆ ಆಕೆಯನ್ನು ಹೆಚ್ಚಾಗಿ ಗಮನಿಸಿಕೊಳ್ಳಲಾಗುತ್ತದೆ. ಆಕೆಗೆ ಕಳ್ಳ ಕುಬಸ ಮಾಡುವುದರ ಮೂಲಕ ಮನ್ನಣೆ ಕೊಡಲಾಗುತ್ತದೆ. ಪ್ರಾರಂಭದ ಗರ್ಭ ನಿಜವೋ ಸುಳ್ಳೋ ಎಂಬ ಆತಂಕದಲ್ಲಿ ಹೆಚ್ಚಾಗಿ ನೆಂಟರಿಷ್ಟರಿಗೆ ಹೇಳಿಕೊಳ್ಳದೇ ಮನೆಯಲ್ಲಿಯೆ ಈ ಆಚರಣೆ ಮಾಡಲಾಗುತ್ತದೆ. ಗರ್ಭಿಣಿಗೆ ತರತರಹದ ಅಡುಗೆ, ಹಣ್ಣು, ಹಸಿರುಕುಪ್ಪಸ, ಕೊಡುತ್ತಾರೆ. ಧಾನ್ಯ, ಕೊಬ್ಬರಿ, ಅಡಿಕೆ, ಬಾದಾಮ, ಉತ್ತತ್ತಿ ಅರಶಿನದ ಕೊಂಬುಗಳಿಂದ ಆಕೆಯ ಉಡಿಯನ್ನು ತುಂಬಲಾಗುತ್ತದೆ. ಹೂವಿನ ದಂಡೆ ತಂದು ಆಕೆಯ ಸಿಂಗರಿಸುತ್ತಾರೆ.

ಬಯಕೆ ಊಟವೂ ಬಹುವಿಶಿಷ್ಟವಾಗಿದ್ದು, ವಿವಿಧ ಪಕ್ವಾನ್ನಗಳನ್ನು ತಯಾರು ಮಾಡಿ ಗರ್ಭಿಣಿಗೆ ಉಣಬಡಿಸಲಾಗುತ್ತದೆ. ನಂತರ ಬಂದಂಥ ಎಲ್ಲ ನೆಂಟರಿಷ್ಟರು ಸಂಭ್ರಮದಿಂದ ಸೀಮಂತ ಕಾರ್ಯಕ್ರಮ ಮಾಡುತ್ತಾರೆ. ಕುಪ್ಪಸ ಹಾಗೂ ಸೀಮಂತ ಕಾರ್ಯಕ್ರಮ ಮಾಡುವುದರ ಮುಖ್ಯ ಉದ್ದೇಶ ಸಂಭ್ರಮವಾದರೂ, ಬಸಿರಾದ ಹೆಣ್ಣಿನ ಬಯಕೆಗಳನ್ನು ನೀಗಿಸುವುದು, ಆಕೆ ಆರೋಗ್ಯಕರ ಮಗುವನ್ನು ಜನ್ಮನೀಡಲಿ ಎಂದು ಹಾರೈಸುವುದೆ ಆಗಿದೆ. ಗರ್ಭಿಣಿಯಾದ ಮಹಿಳೆಯನ್ನು ಸಂತೋಷದಿಂದ ನೋಡಿಕೊಳ್ಳಬೇಕು. ಆಕೆಯ ದೇಹ ಮನಸ್ಸು ಆನಂದದಿಂದ ಕೂಡಿರಬೇಕು ಎಂಬ ಬಯಕೆ ಎಲ್ಲರದಾಗಿರುತ್ತದೆ. ಬಸಿರಾಗಿನಿಂದ ಹಿಡಿದು ಮಗುವನ್ನು ಜನ್ಮಕೊಡುವ ವರೆಗೆ ಮನೆಯ ಎಲ್ಲ ಸದಸ್ಯರ ಗಮನ ಆಕೆಯ ಮೇಲೆ ಇರುತ್ತದೆ. ಗರ್ಭಿಣಿಯರು ಏನು ಮಾಡಬೇಕು ಏನು ಮಾಡಬಾರದು ಎಂಬ ಹಲವು ನಂಬಿಕೆಗಳು ನಮ್ಮ ಸುತ್ತ ಮುತ್ತಲಿದೆ. ಅವುಗಳಲ್ಲಿ ಕೆಲವು ಕೆಳಗಿನಂತೆ ನೋಡಬಹುದು.

- ಗರ್ಭಿಣಿಯರು ' ತಂಗಳು' ಆಹಾರ ಸೇವಿಸಬಾರದು .
- ಕಾಲ ಮೇಲೆ ಕಾಲುಹಾಕಿ ಕುಳಿತುಕೊಳ್ಳಬಾರದು.
- ಗರ್ಭಿಣಿಯರಿಗೆ ಸಾವಿನ ಸುದ್ದಿ ಹೇಳಬಾರದು ಹೇಳಿದರೂ ಶವ ಸಂಸ್ಕಾರಕ್ಕೆ ಹೋಗ ಕೂಡದು.
- ಮೊದಲ ಹೆರಿಗೆ ತವರಿನಲ್ಲೇ ಆಗಬೇಕು.
- ಗರ್ಭಿಣಿಗೆ ಮಣ್ಣು ತಿನ್ನುವ ಆಸೆಯಾದರೆ ನೆಲ ಆಳುವ ಮಗ ಹುಟ್ಟಿ ಬರುವನು.
- ಮಗು ಗರ್ಭದಲ್ಲಿರುವಾಗ ತಾಯಿಗೆ ಎದೆ ಉರಿ ಕಾಣಿಸಿಕೊಂಡರೆ ಹುಟ್ಟುವ ಮಗುವಿನ ಜಾವುಳ (ತಲೆಗೂದಲು ) ಹೆಚ್ಚಾಗಿವೆ ಎಂಬ ನಂಬಿಕೆ ಇದೆ.
- ಗರ್ಭಿಣಿಯರಿಗೆ ಪ್ರಯಾಣ ನಿಷೇದ್ಧವಾಗಿದೆ.
- ಗರ್ಭಿಣಿಯರ ಬೆನ್ನು ದಾಟಬಾರದು.

* ಗರ್ಭಿಣಿಯರು ಗ್ರಹಣಗಳನ್ನು ನೋಡಬಾರದು, ಗ್ರಹಣ ದಿನದಂದು ಬಿಳಿ ಬಟ್ಟೆ ಧರಿಸಿ ಮಲಗಿರಬೇಕು.

ಹೀಗೆ ಹಲವು ಬಗೆಯ ನಂಬಿಕೆಗಳು ಕಾಣಬಹುದಾಗಿದೆ.

ಬಾಣಂತಿ ಕುರಿತಂತೆ ಬೇರೆ ಬೇರೆ ಜನಾಂಗ, ವರ್ಗ, ಪ್ರದೇಶಗಳಿಗನುಗುಣವಾಗಿ ಬೇರೆ ಬೇರೆ ಆಚರಣೆ-ನಂಬಿಕೆಗಳಿವೆ. ಹೆರಿಗೆಯಾದ ದಿನ ಸಾಮಾನ್ಯವಾಗಿ ಆಕೆಗೆ ಬಿಸಿ ನೀರಿನಿಂದ ಎಣ್ಣೆ ಸ್ನಾನ ಮಾಡಿಸಲಾಗುತ್ತದೆ. ಮೂರು ತಿಂಗಳವರೆಗೆ ಪೌಷ್ಟಿಕ ಆಹಾರಕೊಟ್ಟು ವಿಶಿಷ್ಟವಾಗಿ ನೋಡಿಕೊಳ್ಳಲಾಗುತ್ತದೆ. ಮಗುವನ್ನು ಹೆತ್ತು ಆಯಾಸ ವಾಗಿರುವ ಜೀವಕ್ಕೆ ಉಪಚಾರ ಮಾಡಲಾಗುತ್ತದೆ. ಹೆರಿಗೆಯಾದ ಐದು ದಿನಕ್ಕೆ ಮೈಲಿಗೆ ತೆಗೆದು, ಸೂತಕದಿಂದ ಮುಕ್ತಳಾಗಿ ಮಾಡಲಾಗುತ್ತದೆ. ಬಾಣಂತನವಾಗಿ ಐದು ದಿನದವರೆಗೆ ಮನೆಯಲ್ಲಿ ಯಾವುದೆ ಸಮಾರಂಭಗಳನ್ನು ಆಚರಣೆ ಮಾಡುವುದಿಲ್ಲ.

ಉತ್ತರ ಕರ್ನಾಟಕದ ಕೆಲವು ಕಡೆ ಬಾಣಂತಿಯರಿಗೆ ಅಂದರೆ ಹೆರಿಗೆ ನಂತರ ಐದು ದಿವಸಕ್ಕೆ ಕೊಯಿಲ ಮಡಿಸುವದು ಎಂಬ ಆಚರಣೆ ಮಾಡಲಾಗುತ್ತದೆ. ಇದು ಬಾಣಂತಿಯರ ಮೈಲಿಗೆ ತೆಗೆಯುವ ಆಚರಣೆಯಾಗಿದೆ. ಈ ಕುರಿತಂತೆ ಜನಪದ ಗೀತೆಯೊಂದು ಹೀಗಿದೆ.

ನಾರಿಯ ಕೈಯಾಗ ಧಾರಿಯಾ ಕುಡಗೀಲ

ನಾರೆದ್ದು ಕೊಯಿಲ ಹುಗುವಳ ಪ್ರತಿಮಾ

ನಾರಿ ನೀಹೊತ್ತ ಫಲಗೋಳ

ನಾಗಳ ಕರಿ ಎಳ್ಳ ನಾಗಳ ಬಿಳಿ ಎಳ್ಳ

ನಾಗಾಯಿ ಮುಂದ ಹೊಯ್ಯೊ ಗಾಣ

ನಾಗಾಯಿ ಮುಂದ ಹೊಯ್ಯೊ ಗಾಣದ ಎಣ್ಣೆ

ಮಾವನ ಮನಿಯವರು ಖಳುವಿದ ಈ ಎಣ್ಣೆ

ಹೊಕ್ಕಳ್ಳ ಕರಿಎಳ್ಳ ಹೊಕ್ಕಳ ಬಿಳಿಎಳ್ಳ

ಹೊಕ್ಕಾಯಿ ಮುಂದ ಹೊಯ್ಯೊ ಗಾಣ

ಹೊಕ್ಕಾಯಿ ಮುಂದ ಹೊಯ್ದ ಗಾಣದ ಎಣ್ಣೆ

ತಂದಿಯ ಮನಿಯವರು ಖಳುವ್ಯಾರೆ

ತಂದಿಯ ಮನಿಯವರು ಖಳುವಿದ ಈ ಎಣ್ಣೆ

ಅತ್ತಿಗಿ ಬಂದು ಇಡುವಳು

ಹತ್ತೊಂದು ಹಡಿಯವ್ವ ಪುತ್ರನ ಪಡಿಯವ್ವ

ಮತ್ತೊಂದು ಹೆಣ್ಣ ನಮಗವ್ವ

ಗೋಧಿಯ ಉಡಿ ತುಂಬ ಖ್ಯಾದಿಗಿ ಮುಡಿತುಂಬ

ಆಡ ಮಕ್ಕಳು ಮನಿತುಂಬ

ಅಕ್ಕಿಯ ಉಡಿತುಂಬ ಮಲ್ಲಗಿ ಮುಡಿತುಂಬ

ಓದೋ ಮಕ್ಕಳು ಮನಿತುಂಬ

(ಗಿರಿಕೋಗಿಲೆ -ಸಂ- ನೀಲಾಂಬಿಕಾ ಪೋಲಿಸ್ ಪಾಟೀಲ್-ಪು- ೨೩೬)

ಹತ್ತು ಗಂಡು ಮಕ್ಕಳು ಪಡೆದು ಮೇಲೊಂದು ಹೆಣ್ಣು ಹಡೆದು ನಮಗೆ ಕೋಡು ಎಂದು ತವರವರು ಬೇಡುತ್ತಾರೆ. ಹೀಗೆ ಬಾಣಂತಿಯರಿಗೆ ಸಂಭಂಧಿಸಿದಂತೆ ವಿಶಿಷ್ಟ ಆಚರಣೆಗಳನ್ನು ನೋಡಬಹುದು.

## ಬಾಣಂತಿಯರಿಗೆ ಸಂಭಂದಿಸಿದ ನಂಬಿಕೆಗಳು

- ಬಾಣಂತಿಯರಿಗೆ ವಿಶೇಷವಾದ ಕೋಣೆಯಲ್ಲಿ ಪ್ರತ್ಯೇಕವಾಗಿದ್ದು ಹೊರಗಿನಿಂದ ಬಂದ ಯಾರ ದೃಷ್ಟಿಯೂ ಬಾಣಂತಿಯ ಮೇಲೆ ಬಿಳಬಾರದು
- ಹೊರಗಿನಿಂದ ಬಂದವರು ಕೈಕಾಲು ತೋಳೆದು ಸ್ವಲ್ಪ ಸಮಯದ ನಂತರ ಬಾಣಂತಿ ಮತ್ತು ಮಗುವನ್ನು ಕಾಣಬೇಕು
- ಬಾಣಂತಿಯ ಕಾಲಬಳಿ ಕುಡುಗೋಲು ಇಡುವುದು.
- ಬಾಣಂತಿ ತಂಗಳು ತಿಂದರೆ ಮಗುವಿಗೆ ಹೊಟ್ಟೆನೋವು ಬರುವುದು
- ಮಗುವಿಗೆ ತಾಯಿ ತನ್ನ ಎರಡು ಬದಿಯ ಎದೆಹಾಲನ್ನು ಕುಡಿಸಬೇಕು.
- ಕಾರಣಾಂತರದಿಂದ ತಾಯಿ ಹೋರಗೆ ಹೋಗಿ ಬಂದರೆ ತನ್ನ ಸ್ತನಗಳನ್ನು ತೊಳೆದು ಮಗುವಿಗೆ ಕುಡಿಸಬೇಕು.
- ಬಾಣಂತಿಯರು ತಲೆ ಬಾಚಿಕೊಳ್ಳಬಾರದು.
- ಬಾಣಂತಿ ಒಬ್ಬಳೆ ಎಲ್ಲಿಯೂ ಹೋಗ ಕೂಡದು.
- ಬಾಣಂತಿಗೆ ಕೊಡುವ ವಿಶೇಷ ಆಹಾರ ಯಾರ ಕಣ್ಣಿಗೂ ಬೀಳಬಾರದು.

## ಬಾಣಂತಿಯ ಆಹಾರ ಪದ್ಧತಿ

ಸಾಮಾನ್ಯವಾಗಿ ಬಾಣಂತಿಯರಿಗೆ ಪೌಷ್ಠಿಕ ಆಹಾರವನ್ನೇ ಕೊಡಲಾಗುತ್ತದೆ. ಬಿಸಿ ಹಾಗೂ ಮೃದುವಾದ ಆಹಾರ ಕೊಡುತ್ತಾರೆ. ಉತ್ತರಕರ್ನಾಟಕದಲ್ಲಿ ಕಿರಿಧಾನ್ಯಗಳಿಂದ (ಶಾವಿ, ನವಣೆ ಕರಿಕಳವೆಗಳಂಥ) ತಯಾರಿಸಿದ ಆಹಾರ ಕೊಡಲಾಗುವುದು. ಮುಖ್ಯವಾಗಿ ಬಾಣಂತನದ ಪ್ರಾರಂಭ ದಿನಗಳಲ್ಲಿ ದ್ರವ ರೂಪದ ಮಿಶ್ರಣಗಳನ್ನು ತಯಾರಿಸಿ ಬಾಣಂತಿಗೆ ಕೊಡುತ್ತಾರೆ. ಗಸೆಗಸೆ ಬೆಲ್ಲ ಹಾಲು ಮಿಶ್ರಣದ ಪಾಯಸ, ಅಂಟಿನಿಂದ ತಯಾರಿಸಿ ಪಾನಕ ತರದ ಖಾಡೆ, ಕಾಂಚು, ಬೋಳ, ಜಾಜಿಕಾಯಿ, ಕುದಿಸಿ ಬೆಸೆದ ಮೆಂತೆ ನೀರು ಹೀಗೆ ಹಲವು ರೀತಿಯ ಜನಪದ ವೈದ್ಯ ಪದ್ಧತಿಯ ರೀತಿಯ ಆಹಾರವನ್ನು ಒಂದೊಂದು ಪದಾರ್ಥ ಮೂರು ದಿನಗಳವರೆಗೆ ಮುಂಜಾನೆ ಖಾಲಿ ಹೊಟ್ಟೆಯಲ್ಲಿ ಕೊಡಲಾಗುವುದು, ತೂಕ ಬದ್ಧವಾದ ಆಹಾರವನ್ನು ಕೊಡುವುದರ ಮೂಲಕ ಮಗು ತಾಯಿಯ ಆರೋಗ್ಯವನ್ನು ಬಹುಜಾಗರೂಕತೆಯಿಂದ ನೋಡಿಕೊಳ್ಳಲಾಗುತ್ತದೆ. ಮಗುವಿನ ಆರೋಗ್ಯ ತಾಯಿಯ ಆರೋಗ್ಯವನ್ನು ಅವಲಂಬಿಸಿರುತ್ತದೆ. ಈ ಹಿನ್ನಲೆಯಲ್ಲಿ ತಾಯಿ ಆರೋಗ್ಯಕ್ಕೆ ಹೆಚ್ಚು ಗಮನ ಕೊಡಲಾಗುತ್ತದೆ ಬಾಣತನದ ಕೆಲ ದಿನಗಳ ನಂತರ ಖೊಬ್ಬರಿ, ಸಕ್ಕರೆ, ಉತ್ತತ್ತಿ, ದ್ರಾಕ್ಷಿ, ಬಾದಾಮಿ, ಯಾಲಕ್ಕಿಗಳಿಂದ ತಯಾರಿಸಿದ ದಿನಿಸನ್ನು ಕೊಡುವರು ಇದು ಉತ್ತರಕರ್ನಾಟಕದ ಭಾಗದಲ್ಲಿ ಎಚ್ಚ ಎಂಬ ಹೆಸರಿಂದ ಕರೆಯುವರು ಇದು ಬಾಣತಿಗೆ ಕೊಡುವ ವಿಶೇಷ ಪೌಷ್ಠಿಕ ಆಹಾರವೆಂದೆ ಹೇಳಬಹುದು. ಬಾಣಂತಿಗೆ ಎದೆಹಾಲು ಸಮೃದ್ಧವಾಗಿ ಬಂದು ಮಗು ಬಲಿಷ್ಠವಾಗಿ ಬೆಳೆಯಲಿ ಎಂಬ ಉದ್ದೇಶದಿಂದ ತಾಯಿಯ ಆರೋಗ್ಯಕ್ಕೆ ಹೆಚ್ಚಿನ ನೀಗಾ ವಹಿಸುವರು.



## ತೊಟ್ಟಿಲಲ್ಲಿ ಹಾಕುವ ಆಚರಣೆ ಮತ್ತು ನಂಬಿಕೆಗಳು

ಹುಟ್ಟಿದ ಮಗುವಿಗೆ ಹೆಸರಿಡುವ ಆಚರಣೆಯನ್ನು ತೊಟ್ಟಿಲಿಡುವುದು ಎಂದು ಕರೆಯುತ್ತಾರೆ. ಮಗು ಜನಿಸಿದ ಇಪ್ಪತ್ತೊಂದನೆ ದಿವಸದಂದು ಸಾಮಾನ್ಯವಾಗಿ ತೊಟ್ಟಿಲಿಡುವ ಅಥವಾ ನಾಮಕರಣ ಮಾಡುವ ಪದ್ಧತಿ ಇದೆ ಮಗುವಿಗೆ ತೊಟ್ಟಿಲಿಟ್ಟು ನಾಮಕರಣ ಆಗುವ ವರೆಗೆ ತೊಟ್ಟಿಲಲ್ಲಿ ಮಲಗಿಸುವುದಿಲ್ಲ. ಬದಲಾಗಿ ಬಟ್ಟೆಯಿಂದ ತಯಾರಿಸಿದ ಜೋಳಿಗೆಯಲ್ಲಿ ಮಲಗಿಸುವರು. ತೊಟ್ಟಿಲನ್ನು ಕೊಳ್ಳಲು ಆಗದೇ ಇರುವ ಬಡ ಜನರಿಗೆ ಜೋಳಿಗೆಯೆ ಮಕ್ಕಳಿಗೆ ಆಶ್ರಯ. ಪ್ರಾಚೀನ ಕಾಲದಿಂದಲೂ ತೊಟ್ಟಿಲಲ್ಲಿ ಮಕ್ಕಳನ್ನು ಮಲಗಿಸಿ ಆರೈಕೆ ಮಾಡುವ ಪದ್ಧತಿ ಇದೆ. ನಾಮಕರಣಕ್ಕೂ ತೊಟ್ಟಿಲಿಗೂ ಅವಿನಾಭಾವ ಸಂಬಂಧ ವಿದೆ. ತೊಟ್ಟಿಲು ತಾಯ್ತನದ ಸಂಕೇತವಾಗಿ ಮಗುವಿನ ಪಾಲನೆ ಪೋಷಣೆಗೆ ಪೂರಕವಾಗಿ ತೊಟ್ಟಿಲನ್ನು ಬಳಸುತ್ತಾರೆ. ನಾನಾ ಕೆಲಸಗಳಲ್ಲಿ ನಿರತಳಾದ ತಾಯಿ ಸದಾ ಮಗುವಿಗೆ ಎತ್ತಿಕೊಂಡಿರಲು ಸಾಧ್ಯವಿಲ್ಲ ಈ ಕಾರಣಕ್ಕಾಗಿ ತಾಯಿಯಾದವಳು ತೊಟ್ಟಿಲಿನ ಸೃಷ್ಠಿಮಾಡಿರಬೇಕು. ಪ್ರಾರಂಭದಲ್ಲಿ

ಜೋಳಿಗೆಯ ಸ್ವರೂಪದ ತೊಟ್ಟಿಲು ಬರುಬರುತ್ತ ಕಟ್ಟಿಗೆ, ಲೋಹಗಳಿಂದ ಬಳಸಲ್ಪಡುವ ತೊಟ್ಟಿಲುಗಳು ಹುಟ್ಟಿಕೊಂಡವು ,ಮುಖ್ಯವೆಂದ ತೊಟ್ಟಿಲು ಸೃಷ್ಠಿಗೊಂಡಿದ್ದು ತಾಯಿಯಿಂದಲೇ. ಮಗುವಿನ ಹಿತದೃಷ್ಠಿಯಿಂದ ತೊಟ್ಟಿಲು ಮುಖ್ಯ. ಏಕೆಂದರೆ ತಾಯಿಯಾದವಳು ಕೆಲಸಮಾಡುವ ಸಂದರ್ಭದಲ್ಲಿ ಮನೆಯಲ್ಲಿ ಜಂತಿಗೆಗೆ, ತೊಟ್ಟಿಲನ್ನು ಕಟ್ಟಿ ಮಕ್ಕಳನ್ನು ಅಕ್ಕರೆಯಿಂದ ಪಾಲನೆ ಮಾಡುತ್ತ ತನ್ನ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಳು.

ಮಗುವನ್ನು ಗುರುತಿಸಲು ಜೀವನ ಪರ್ಯಂತ ಆತನಿಗೆ ಒಂದು ಶಾಬ್ದಿಕ ಸಂಕೇತ ಕೊಡುವ ಉದ್ದೇಶದಿಂದ ತೊಟ್ಟಿಲಿಟ್ಟು ನಾಮಕರಣಮಾಡುವ ಆಚರಣೆ ಬೆಳೆದು ಬಂದಿದೆ. ಈ ಆಚರಣೆ ಮಾನವನ ಜೀವನದಲ್ಲಿ ಅಗತ್ಯವಾದ ಸಂಸ್ಕಾರಗಳಲ್ಲಿ ಒಂದಾಗಿದೆ ಜನಪದರು ಈ ಆಚರಣೆಯನ್ನು ಬಹು ಸಂಭ್ರಮದಿಂದ ಆಚರಿಸುತ್ತಾರೆ.ತೊಟ್ಟಿಲ ಕುರಿತ ಜನಪದ ಗೀತೆಯ ಸಾಲುಗಳು ಹೀಗಿವೆ.

''ಯಾತಗಿರಿಯ ಬದಿಗ ಯಾತಕ ಜಾಣನು
ಕೂಸು ಕಂದಯ್ಯ ಮಲಗುವ
ಕೂಸು ಕಂದಯ್ಯ ಮಲಗುವ ತೊಟ್ಟಿಲಿಗಿ
ಕೈಬಡಿದು ಆಡುವ ಗೊಂಬಿ ಬರೆದ ''[೨೭]

ಬಹು ಜಗತ್ತಿನಾದ್ಯಂತ ತೊಟ್ಟಿಲನ್ನು ಬಳಸುವ ಪದ್ಧತಿ ಇದೆ. ನಾಮಕರಣವೂ ಸಹ ಎಲ್ಲ ಸಮುದಾಯದ, ಧರ್ಮ, ಜನಾಂಗ, ಪ್ರದೇಶದ ಜನರು ಆಚರಿಸುವ ಆಚರಣೆಯಾಗಿದೆ. ಸಾಮಾನ್ಯವಾಗಿ ಜನಪದರು ತೊಟ್ಟಲಿಡುವ ಆಚರಣೆ ವಿಶಿಷ್ಠವಾಗಿದೆ. ಚೊಚ್ಚಲ ಬಾಣತನವಾದ ಮೇಲೆ ಸಾಮಾನ್ಯವಾಗಿ ಇಪ್ಪತೋಂದನೆ ದಿನದಂದು ವಿಶೇಷ ಆಚರಣೆಯೊಂದಿಗೆ ಮಗುವಿಗೆ ತೊಟ್ಟಿಲಿಗೆ ಹಾಕಲಾಗುತ್ತದೆ. ತಾಯಿಯ ಮನೆಯಲ್ಲಿ ಇರುವ ಕೂಸಿನ ತಾಯಿ ಬಾಣಂತನ ಮುಗಿಸಿಕೊಂಡು ಗಂಡನ ಮನೆಗೆ ಹೋಗುವಾಗ ಹೊಸ ತೊಟ್ಟಿಲನ್ನು ಮತ್ತು ವಸ್ತ್ರ, ಬೆಳ್ಳಿ ಬಂಗಾರ, ಹಣ, ಆಕಳು ಮುಂತಾದವುಗಳನ್ನು ಉಡುಗೊರೆಯಾಗಿ ಪಡೆಯುತ್ತಾಳೆ. ಇದು ನಮ್ಮ ಜನಪದರಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದ ಪದ್ಧತಿ ಆದರೆ ಗಂಡನ ಮನೆಗೆ ಹೋಗುವ ಮೊದಲೆ ಮಗುವಿನ ನಾಮಕರಣ ತವರು ಮನೆಯಲ್ಲಿ ಮೊದಲು ನಡೆಯುವುದರಿಂದ ಇಲ್ಲಿ ಹಳೆಯ ತೊಟ್ಟಿಲನ್ನೆ ನಾಮಕರಣಕ್ಕೆ ಬಳಸಲಾಗುತ್ತದೆ. ಹಳೆಯ ತೊಟ್ಟಿಲನ್ನು ತೊಳೆದು ಸ್ವಚ್ಛಗೊಳಿಸಿ, ಹೂವಿನಿಂದ ಅಲಂಕರಿಸಿ ತುಂಬಿದ ತೆಂಬಿಗೆಯನ್ನು, ನೈವಿದ್ಯ, ಗೋಧಿ ಧಾನ್ಯ ಮುಂತಾದವುಗಳನ್ನು ತೊಟ್ಟಿಲ ಕೆಳಗೆ ಇಡಲಾಗುತ್ತದೆ. ಹಿಟ್ಟಿನಿಂದ ದೀಪದಾರತಿ ತಯಾರಿಸಿ ತೊಟ್ಟಿಲಿನ ಬಳಿ ಇಡುವರು.

ನಾಮಕರಣದ ಸಮಯದಲ್ಲಿ ಅಕ್ಕ ಪಕ್ಕದವರು ನೆಂಟರಿಷ್ಟರೆಲ್ಲರೂ ಸೇರಿ ಉತ್ಸಾಹದಿಂದ ಭಾಗಿಯಾಗುತ್ತಾರೆ. ತೊಟ್ಟಿಲಿಗೆ ಬರುವ ಮುತ್ತೈದೆಯರು ತಮ್ಮ ಮನೆಯಿಂದ ಅಕ್ಕಿ ,ಬಳ್ಳೊಳಿ ಗಡ್ಡೆಯನ್ನು ತರುವ ಪದ್ಧತಿ ಇದೆ. ನಾಮಕರಣ ಮಾಡುವಾಗ ಮಗುವಿನ ಸೋದರತ್ತೆಯ ಪಾಲು ಹಿರಿದಾಗಿರುತ್ತದೆ. ಇಲ್ಲಿ ಆಕೆಯೇ ಮಗುವಿನ ನಾಮಕರಣ ಮಾಡುತ್ತಾಳೆ. ಮೊದಲಿಗೆ

ತಮ್ಮ ಮನೆದೇವರ ಹೆಸರನ್ನು ಇಡಲಾಗುತ್ತದೆ. ನಂತರ ಬೇರೆ ಬೇರೆ ದೇವ - ದೇವತೆಯರ ಹೆಸರಿಡುವರು ನಂತರ ಮನೆತನದ ಹಿರಿಯರ ಹೆಸರೂ ಕೂಡ ಇಡಲಾಗುತ್ತದೆ. ಸೊದರತ್ತೆಯಾದವಳು ಮಗುವಿನ ಕಿವಿಯಲ್ಲಿ ಹೆಸರಿಟ್ಟು ಕುರ್ ಕುರ್ ಎಂದು ಜೊರಾಗಿ ಶಬ್ದ ಮಾಡುತ್ತಾಳೆ. ಆಗ ಅಲ್ಲಿರುವ ಮುತ್ತೈದೆಯರು, ಸೋದರತ್ತೆಯ ಬೆನ್ನಿಗೆ ಹೊಳಗೆ ಇಟ್ಟು ಜೊರಾಗಿ ಗುದ್ದುವರು, ನಂತರ ಮಗುವಿಗೆ ಆಡಿಸುವ ಆಚರಣೆ ಮಾಡುವರು ಮುತ್ತೈದೆಯರಿಬ್ಬರು ತೊಟ್ಟಿಲಿನ ಆ ಬದಿ ಮತ್ತು ಈ ಬದಿಯಲ್ಲಿ ನಿಂತು ಮಗುವನ್ನು ಕೊಡುಕೊಳ್ಳುವಿಕೆ ಮಾಡುವರು. ಕೊಡುವಾಗ ತೊಗೊಯವ್ವಾ ಹಾಲಿನ ಗಡಿಗೆ ಎನ್ನುತ್ತಾಳೆ, ಈ ಬದಿಯಲ್ಲಿ ಇರುವ ಇನ್ನೊಬ ಮುತ್ತೈದೆ ತಾಯವ್ವ ಮೊಸರಿನ ಗಡಿಗೆ ಎನ್ನುತ್ತಾಳೆ. ಹೀಗೆ ತುಪ್ಪದ ಕೊಡ, ಚಿನ್ನದಕೊಡ, ರನ್ನದಕೊಡ ಎಂದು ಹೇಳುತ್ತಾರೆ ಹಾಗೆ ರಾಮ ಸೀತೆ, ರಾಧಾ ಕೃಷ್ಣನನ್ನು ಹೆಸರಿಸಿ ಕೊಡುಕೊಳ್ಳುವಿಕೆ ಮಾಡಿ ಮಗುವನ್ನು ತೊಟ್ಟಿಲಲ್ಲಿ ಮಲಗಿಸುವರು, ಕೊನೆಯಲ್ಲಿ "ಕಮಾಯಿ ಕೊಡ ' ಎಂಬ ವಿಶೇಷ ಆಚರಣೆಯೂ ಮಾಡಲಾಗುತ್ತದೆ. ಅದೆಂದರೆ ತೊಟ್ಟಿಲಿನ ಕೆಳಗಡೆ ಇರುವ ತಂಬಿಗೆಯನ್ನು ಮುತ್ತೈದೆಯೊಬ್ಬಳು ಮಗುವಿನ ತಾಯಿಯ ತಲೆಯಮೇಲಿಟ್ಟು 'ಹಾಲಿನಕೊಡ, ತುಪ್ಪದಕೊಡ , ಗಂಡ ಮಾಡಿದ ಕಮಾಯಿಕೊಡ, ಹಗುರಾಗಿದೆ ಅಥವಾ ಭಾರವಾಗಿದೆ ' ಎಂದು ಪ್ರಶ್ನಿಸುತ್ತಾರೆ, ಅದಕ್ಕೆ ಅವಳು ಹಗುರಾಗಿದೆ ಎಂದು ಉತ್ತರಿಸಬೇಕು ಈ ಆಚರಣೆ ಮಗುವನ್ನು ಪಡೆದುಕೊಂಡ ತಾಯಿಯ ಸಮೃದ್ಧತೆಯನ್ನು ಪಡೆದಂತೆ ಎಂಬ ಸಂಕೇತವಿದೆ.

ಇಂಥ ಹತ್ತಾರು ಮಕ್ಕಳನ್ನು ಹೆತ್ತುಕೊಡುವೆ, ಹೀಗಾಗಿ ಈ ಕೊಡ ಹಗುರವಾಗಿದೆ ಎಂದು ಹೇಳುವ ರೂಢಿಇದೆ. ಹೀಗೆ ನಾಮಕರಣ ಆಚರಣೆ ಪೂರ್ಣಗೊಳ್ಳುತ್ತದೆ. ಮನೆಗೆ ಮರಳುವ ಮುತ್ತೈದೆಯರಿಗೆ ಜೋಳ, ಕಡಲೆಯಿಂದ ತಯಾರಿಸಿದ ಗುಗ್ಗರಿಯನ್ನು ಹಂಚುವರು. ಇಂದಿನಿಂದ ಮಗು ತೊಟ್ಟಿಲಲ್ಲೆ ಮಲಗಿಕೊಳ್ಳುತ್ತದೆ. ಸುಮಾರು ಮೂರು ವರುಷಗಳವರೆಗೆ ತೊಟ್ಟಿಲಲ್ಲಿಯೆ ಮಗು ಬೆಳೆದು ದೊಡ್ಡದಾಗುತ್ತದೆ. ತೊಟ್ಟಿಲ ಸುತ್ತ ತಾಯ್ತನದ ಹಲವು ಆಚರಣೆಗಳು ಬೆಳೆದು ಬಂದಿವೆ. ತೊಟ್ಟಿಲ ಸುತ್ತ ತಾಯಿಯ ಅನೇಕ ಕಲೆಗಳು ಮೈದಾಳಿರುವುದು ಗಮನಿಸಬಹುದು ಅವುಗಳೆಂದರೆ ಕೌದಿ, ಧುಪಾಟಿ, ಕುಂಚಿ, ಕುಲಾಯಿ, ಹೊಲಿಯುವುದು. ಬಣ್ಣ ಬಣ್ಣದ ಪಕ್ಷಿಗಳನ್ನು ತೊಟ್ಟಿಲಿಗೆ ಕಟ್ಟುವುದು, ವಾತ್ಸಲ್ಯ ಭರಿತ ಹಾಡುಗಳನ್ನು, ಕಥೆಗಳನ್ನು ಕಟ್ಟಿ ಹಾಡುವುದು. ಹೀಗೆ ಹತ್ತು ಹಲವು ಕಲೆಗಳನ್ನು ನಮ್ಮ ಜನಪದ ತಾಯಂದಿರು ಕಾಲದಿಂದ ಕಾಲಕ್ಕೆ ಬೆಳೆಸಿಕೊಂಡು ಬಂದಿರುವುದು ಕಾಣಬಹುದಾಗಿದೆ.

## ತೊಟ್ಟಿಲು ಕುರಿತು ನಂಬಿಕೆಗಳು

* ಖಾಲಿ ತೊಟ್ಟಿಲು ತೂಗಬಾರದು ತೂಗಿದರೆ ಮಗುವಿನ ಹೊಟ್ಟೆನೋಯಿಸುತ್ತದೆ
* ತೊಟ್ಟಿಲನ್ನು ಒದೆಯಬಾರದು
* ಯಾರಾದರು ತೊಟ್ಟಿಲನ್ನು ಕೇಳಿದರೆ ಕೊಡಲು ನಿರಾಕರಿಸಬಾರದು

* ತೊಟ್ಟಿಲನ್ನು ಬೊರಲು ಹಾಕಬಾರದು
* ತೊಟ್ಟಿಲಿಗೆ ಬೆಂಕಿ ಹಚ್ಚಬಾರದು

## ತಾಯಂದಿರ ಕಲೆಗಳು

ಕೌದಿ, ಧುಪಾಟಿ, ಕುಂಚಿ ಕುಲಾಯಿ ಹೊಲಿಯುವುದು ನಮ್ಮ ತಾಯಂದಿರ ಕಲೆಯೆಂದೆ ಹೇಳಬಹುದು. ತನ್ನ ತಾಯ್ತನವನ್ನು ಮಕ್ಕಳಪಾಲನೆಯಲ್ಲಿ ವ್ಯಯಿಸುವ ತಾಯಂದಿರು ತಮ್ಮ ಬಿಡುವಿನ ಸಮಯದಲ್ಲಿ ಮಕ್ಕಳಿಗಾಗಿ ಬಣ್ಣ ಬಣ್ಣದ ಕೌದಿಗಳನ್ನು ಹೊಲೆಯುತ್ತಾರೆ ಇದೊಂದು ಜನಪದ ಕಲೆಯಾಗಿ ಹಳ್ಳಿಯ ಮನೆ ಮನೆಗಳಲ್ಲಿ ಈ ಕೌದಿಗಳು ಕಂಡು ಬರುತ್ತವೆ. ಹಳೆ ಬಟ್ಟೆಯಿಂದ ತಾಳ್ಮೆಯಿಂದ ತಯಾರಿಸುವ ಕೌದಿಯಲ್ಲಿ ವಿವಿಧ ಚಿತ್ತಾರಗಳು ಇರುತ್ತವೆ. ಇದನ್ನು ಹೊಲಿಯಲು ಬಹಳ ದಿನಗಳು ಬೇಕು. ತಾಯಿಯ ಕಲೆಗಾರಿಕೆ, ಇಲ್ಲಿ ಸುಂದರವಾಗಿ ವ್ಯಕ್ತವಾಗಿದೆ. ಮಳೆ, ಚಳಿ, ಗಾಳಿಯ ಹೊಡೆತದಿಂದ ತಮ್ಮ ಮಕ್ಕಳನ್ನು ರಕ್ಷಿಸಲು ಕೌದಿಗಳನ್ನು ತಾಯಂದಿರು ಹೊಲಿಯುತ್ತಾರೆ. ಇದನ್ನು ಹೊದ್ದುಕೊಂಡರೆ ನೆಮ್ಮದಿಯ ನಿದ್ದೆ ಆವರಿಸುವುದು ಇವು ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೌದಿ ದೊಡ್ಡವರಿಗಾಗಿ ಹೊಲಿದರೆ, ಧುಪಾಟಿ ಅಳತೆಯಲ್ಲಿ ಚಿಕ್ಕವಾಗಿದ್ದು ಚಿಕ್ಕ ಮಕ್ಕಳಿಗೆ ಹೊದಿಸಲು ಉಪಯೋಗಿಸುತ್ತಾರೆ .ಇವುಸಹ ಹಳೆ ಬಟ್ಟಿ ಬಳಸಿ ತಯಾರಿಸಲಾಗುತ್ತದೆ. ಚಿಕ್ಕ ಮಕ್ಕಳಿಗೆ ಬಿಸಿಲು, ಗಾಳಿ, ಮಳೆ ಮತ್ತು ಚಳಿಯಿಂದ ಕಾಪಾಡಲು ಕುಂಚಿ ಕುಲಾಯಿಗಳನ್ನು ತಾಯಂದಿರು ಹೊಲಿಯುತ್ತಾರೆ ವಿವಿಧ ಗಾತ್ರದ, ವಿವಿದ ವಿನ್ಯಾಸದ ಬಣ್ಣ ಬಣ್ಣದ ಕುಂಚಿ ಕುಲಾಯಿಗಳು ತಾಯಂದಿರು ತಮ್ಮ ಮಕ್ಕಳಿಗೆ ಪ್ರೀತಿಯಿಂದ ಹೊಲೆಯುತ್ತಾರೆ. ಇದರ ಅಂದ ಹೆಚ್ಚಿಸಲು ಬಣ್ಣ ಬಣ್ಣದ ರಿಬ್ಬನಗಳು, ಗೊಂಡೆ, ಮುತ್ತುಗಳನ್ನು ಬಳಸಲಾಗುತ್ತದೆ. ಮನೆಯಲ್ಲೆ ತಯಾರಿಸುವ ಈ ವಸ್ತುಗಳು ತಾಯಂದಿರ ಪ್ರೀತಿಯ ಪ್ರತೀಕಗಳೇ ಆಗಿವೆ.

## ಮರಣ

ಹುಟ್ಟಿದ ಪ್ರತಿಯೊಂದು ಜೀವಿಯೂ ಸಾಯಲೇಬೇಕು. ಹುಟ್ಟು ಸಹಜವಾದರೆ ಸಾವು ಅನಿವಾರ್ಯವೇ ಸರಿ. ಮನುಷ್ಯ ಸತ್ತಾಗ ಅನೇಕ ಬಗೆಯ ಸಂಸ್ಕಾರಗಳು ಆಯಾ ಜಾತಿ, ಧರ್ಮ ಲಿಂಗ ಪ್ರದೇಶಗಳಿಗನುಣವಾಗಿ ಆಚರಣೆ ಮತ್ತು ನಂಬಿಕೆಗಳಿವೆ. ವ್ಯಕ್ತಿಯೊಬ್ಬ ಸತ್ತಾಗ ತಾಯ್ತನದ ಸಂಕೇತವಾಗಿ ಕೆಲ ಆಚರಣೆಗಳನ್ನು ಜನಪದರು ಆಚರಿಸಿಕೊಂಡು ಬಂದಿರುವುದು ಗಮನಿಸಬಹುದು ಒಂದು ಮನೆಯಲ್ಲಿ ಹೆಣ್ಣೊಬ್ಬಳು ಸತ್ತಾಗ ಆಕೆಗಾಗಿ ಕೊನೆಯ ಸೀರೆ ತವರು ಮನೆಯವರೇ ತರುತ್ತಾರೆ. ಶವಕ್ಕೆ ಸ್ನಾನಾದಿ ಕರ್ಮಗಳನ್ನು ಮುಗಿಸುತ್ತಾರೆ. ನಂತರ ತವರಿನ ಸೀರೆಯಿಂದ ಶವಕ್ಕೆ ಸಿಂಗಾರ ಮಾಡುತ್ತಾರೆ ಕೊನೆಯ ಸಲ ತವರಿನ ಸಿರೆ ಉಟ್ಟುಕೊಂಡೆ ಹೆಣ್ಣು ತನ್ನ ಅಂತಿಮ

ಯಾತ್ರೆಯನ್ನು ಮುಗಿಸುತ್ತಾಳೆ. ಇನ್ನೊಂದು ಆಚರಣೆ ಎಂದರೆ ತಾಯಿ ಮರಣ ಹೊಂದಿ ಮಣ್ಣಲಿ ಸಮಾಧಿ ಮಾಡಿದ ನಂತರ ಮುಂದೊಂದು ದಿನ ಆಕೆಯ ಮಗ ಸತ್ತರೆ ಅವನ ಶವವನ್ನು ತಾಯಿಯ ಸಮಾದಿಯಲ್ಲಿ ಅಂದರೆ ಆಕೆಯ ಮಡಿಲಲ್ಲೆ ಮಲಗಿಸುವರು. ಮರಣದಲ್ಲಿ ತಾಯಿ ಮಗ ಒಂದಾಗಲಿ ಎಂಬ ನಂಬಿಕೆಯಿಂದ ಈ ಆಚರಣೆ ಮಾಡುತ್ತಾರೆ ಎನ್ನಬಹುದು. ಇದಲ್ಲದೆ ಯಾವುದೇ ಮನೆಯಲ್ಲಿ ಸಾವು ಸಂಭವಿಸಿದರೆ, ಹೆಣ್ಣು ಮಕ್ಕಳ ಅಳು ರೋಧನೆ ಆಕಾಶಕ್ಕೆ ಮುಟ್ಟುತ್ತದೆ. ಈ ರೋಧನೆ ಗಂಡಸರಲ್ಲಿ ಕಂಡುಬರುವುದಿಲ್ಲ 'ನಕ್ಕರೆ ಮದಿ (ಮದುವೆ) ಚಂದ ಅತ್ತರೆ ಹೆಣ್ಣ ಚೆಂದ' ಎಂಬ ಗಾದೆ ಹೆಣ್ಣುಮಕ್ಕಳು ಪಾಲಿಸುತ್ತಾರೆ.

## ಸ್ತ್ರೀವಾದಿ ಚಿಂತನೆಗಳು

'ಸ್ತ್ರೀವಾದ ' ಯೆಂಬುವುದು ಮಹಿಳೆಯರಿಗೆ ಸಂಬಂಧಿಸಿದ ಆಧುನಿಕರ ಚಿಂತನೆಯಾಗಿದೆ. ಮಹಿಳೆಯರಿಗೆ ಸಂಭಂಧಿಸಿದಂತೆ ಮಾನವಿಯ ನೆಲೆಯಲ್ಲಿ ಸಾಮಾಜಿಕ ನ್ಯಾಯ ಒದಗಿಸಿಕೊಡುವ ಹಿನ್ನೆಲೆಯಲ್ಲಿ ಈ ಚಿಂತನೆ ಹುಟ್ಟಿದೆ ಎನ್ನಬಹುದು. ಸ್ತ್ರೀ- ಪುರುಷರಿಬ್ಬರು ಸಮಾನರು ಯಾರು ಯಾರಿಗಿಂತಲೂ ಮೇಲಲ್ಲ ಮತ್ತು ಕೀಳಲ್ಲ ಎಂಬ ನ್ಯಾಯ ಯುತವಾಗಿ ಆಲೋಚನೆ ಇಲ್ಲಿ ವ್ಯಕ್ತಿವಾಗಿದೆ. ಸ್ತ್ರೀ ಮತ್ತು ಪುರುಷರು ಸಮಾನತೆಯಿಂದ ಬದುಕಬೇಕು ಎಂದು ಹೇಳುವ ವಿಚರಗಳೇ ಸ್ತ್ರೀವಾದ ಎನ್ನಬಹುದು. ಈ ಅರ್ಥವನ್ನೆ ನನ್ನ ಅಧ್ಯಯನದ ಸೀಮಿತದಲ್ಲಿ ನಾನು ಗ್ರಹಿಸಿಕೊಂಡಿರುತ್ತೇನೆ, ಆದರೂ ಸ್ತ್ರೀವಾದದ ಕುರಿತು ಹಲವು ವಿದ್ವಾಂಸರು ತಮ್ಮದೇ ಆದ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ ಅವುಗಳಲ್ಲಿ ಕೆಲವನ್ನು ಗಮನಿಸಬಹುದು.

"ಸಮಾಜಶಾಸ್ತ್ರದ ಪದಕೋಶದ ಅನ್ವಯ; ಸ್ತ್ರೀವಾದವೆಂದರೆ ಮಹಿಳೆಗೆ ಸರಿಸಮಾನವಾದ ಸ್ಥಾನ ದೊರೆಯಬೇಕೆಂಬವಾದ, ಮಹಿಳಾ ಕಲ್ಯಾಣ ಪರವಾದವಾಗಿದೆ. ಕೊಲಿನ್ಸ್ ಡಿಕ್ಸನರಿ ಆಫ್ ಸೊಷಯಾಲಜಿ-'ಸ್ತ್ರೀವಾದವೆಂಬುದು ಜಾಗತಿಕ ಸ್ತ್ರೀಯರ ತುಳಿತ ಹಾಗೂ ಪುರುಷ ಅಧೀನತೆಯ ಸ್ವರೂಪವನ್ನು ಕುರಿತು ಸೂಚಿಸುವ ಸಿದ್ಧಾಂತವಾಗಿದೆ ಜೆ.ಜೆ ಮ್ಯಾಸಿಯೋನಿರವರ ಪ್ರಕಾರ -'ಸ್ತ್ರೀವಾದವು ಸ್ತ್ರೀ ಮತ್ತು ಪುರುಷರ ಸಮಾನತೆಯನ್ನು ಪ್ರತಿಪಾದಿಸುವ ಹಾಗೂ ಲೈಂಗಿಕತಾವಾದ ಮತ್ತು ಪಿತೃಪ್ರಧಾನತೆಗೆ ವಿರುದ್ಧವಾದುದಾಗಿದೆ"[28] .ಹೀಗೆ ಹಲವು ವಿದ್ವಾಂಸರು ಸ್ತ್ರೀವಾದದ ಕುರಿತು ವ್ಯಾಖ್ಯಾನವನ್ನು ಕೊಟ್ಟಿದ್ದಾರೆ.

ಕೆಲವುಸಲ ಸ್ತ್ರೀವಾದಕ್ಕೆ ತಪ್ಪು ಅರ್ಥ ಕೊಟ್ಟಿರುವುದುಂಟು ಸ್ತ್ರೀವಾದಿಗಳು ಪುರುಷರನ್ನು ದ್ವೇಷಿಸುತ್ತಾರೆ. ಅವರ ಕುರಿತು ನಕರತ್ಮಕವಾಗಿ ಮಾತನಾಡುತ್ತಾರೆ. ಮಹಿಳೆಯರು ಪುರುಷ ವಿರೋಧಿಗಳೆಂಬಂತೆ ಬಿಂಬಿಸುತ್ತಾರೆ ಎಂಬ ನಾನಾ ತಪ್ಪು ಕಲ್ಪನೆ ಇದೆ.

ಆಧುನಿಕ ಕಾಲದಲ್ಲಿ ಅಂದರೆ ಸುಮಾರು ೧೬ನೇ ಶತಮಾನದಿಂದ ಹಲವು ಸ್ತ್ರೀವಾದಿಗಳು ಅವಿರತವಾಗಿ ಮಹಿಳೆಯರ ಪರವಾಗಿ ಹೊರಾಟ ನಡೆಸುತ್ತಾ ಬಂದಿರುವುದ ಕಂಡುಬರುತ್ತದೆ. ಅವರಲ್ಲಿ ಪ್ರಮುಖರೆಂದರೆ ಮೆರಿ ವುಲ್ಸನಕ್ರೌಷ್ಟ, ಜಾನಸ್ಟುವರ್ಟಮಿಲ, ಎಲಿಜಬತ್ ಲೇಡಿ ಸ್ಟಾಂಟನ

ಹ್ಯಾರಿಯಟ್ ಮಿಲ, ರಿಫೀಲ್ಲಾ ಐನಸ್ಟ್ಯ, ಐರಿಷಯಂಗ, ಜೆಷನಲ್ ಆಲನ, ಆ್ಯನ ಓಕ್ಲ ಮತ್ತು ಎಡ್ರಿಯನ್ ರಿಚ್ ಮುಂತಾದವರನ್ನು ಹೆಸರಿಸಬಹುದು.

ಆಧುನಿಕ ಕಾಲದಲ್ಲಿ ಸ್ತ್ರೀವಾದ ಒಂದು ಚಿಂತನೆಯಾಗಿ ಬೆಳೆದು ನಿಂತಿದೆ. ಸ್ತ್ರೀ - ಪುರುಷರಿಬ್ಬರೂ ಸ್ತ್ರೀಪರವಾದ ಚಿಂತನೆಗಳನ್ನು ನೀಡುವುದರ ಮೂಲಕ ಇದಕ್ಕೊಂದು ತೂಕ ಬಂದಿದೆ ಜಗತ್ತಿನಾದ್ಯಂತ ಈ ಕುರಿತ ಗಂಭೀರ ಚರ್ಚೆಗಳು ನಡೆದಿವೆ. ಸ್ತ್ರೀವಾದದ ಕುರಿತು ಓದು ಅಧ್ಯಯನ, ಸಂಶೋಧನೆಗಳು ಸಹ ಭರದಿಂದ ಸಾಗಿವೆ.

'ಸ್ತ್ರೀವಾದ' ಯೆಂಬುವುದು ಆಧುನಿಕ ಜಗತ್ತಿನ ಬಹುದೊಡ್ಡ ಚಿಂತನೆ. ಈ ಚಿಂತನೆ ಸಂಪೂರ್ಣವಾಗಿ ಮಹಿಳಾಪರವಾದದ್ದು. ಮಹಿಳೆಯರ ಪರವಾಗಿ ನಡೆದ ಹೋರಾಟದ ಪ್ರತೀಕವೆಂತಲೂ ಕರೆಯಬಹುದು ಸಮಾಜದಲ್ಲಿ ಲಿಂಗ ತಾರತಮ್ಯವನ್ನು ಹೊಡೆದೊಡಿಸಿ ನ್ಯಾಯಯುತ ರೀತಿಯಲ್ಲಿ ಮಹಿಳೆಯರನ್ನು ಬದುಕಲು ಅವಕಾಶ ಮಾಡಿಕೊಡುವುದು ಇದರ ಮುಖ್ಯ ಉದ್ದೇಶ. ಸಾಮಾಜಿಕವಾಗಿ ಕೌಟುಂಬಿಕವಾಗಿ ನಡೆಯುವ ಮಹಿಳೆಯರ ಮೇಲಿನ ಶೋಷಣೆಯನ್ನು ವಿರೋಧಿಸುವುದರ ಜೊತೆಗೆ ಸಮಾನತೆಯ ಆಧಾರದ ಮೇಲೆ ಆಕೆಗೆ ಎಲ್ಲ ರಂಗದಲ್ಲಿ ಅವಕಾಶನ್ನು ಮಾಡಿಕೊಡುವುದು ಈ ಹೋರಾಟದ ಗುರಿ.

ಸಮಾಜದಲ್ಲಿ ಬೇರೂರಿದ ಗಂಡು ಹೆಣ್ಣುಯೆಂಬ ತಾರತಮ್ಯ ಮಹಿಳೆಯನ್ನು ಎರಡನೆ ದರ್ಜೆ ಪ್ರಜೆಯಾಗಿ ಕಾಣುವ ರೀತಿಯ ದೃಷ್ಠಿಕೊನವನ್ನು ಬದಲಾಯಿಸಿ ಮಾನವೀಯ ನೆಲೆಯಿಂದ ಆಕೆಯನ್ನು ಪರಿಗ್ರಹಿಸುವ ಪ್ರಯತ್ನ ಈ ಸ್ತ್ರೀವಾದ ಚಿಂತನೆ ಮಾಡುತ್ತದೆ. ಒಂದು ಗಮನಿಸುವ ಅಂಶವೆಂದರೆ ಸ್ತ್ರೀವಾದವು ಮಹಿಳಾ ಪರವಾಗಿದ್ದರೂ ಇದು ಪುರುಷ ವಿರೋಧಿ ಅಲ್ಲ "ಸ್ತ್ರೀವಾದಿಗಳು ಹೆಣ್ಣಿನ ಪ್ರತಿಭೆ, ಸಾಧ್ಯತೆ, ಸಾಮರ್ಥ್ಯ ಹಾಗೂ ಸಾಧನೆಗಳನ್ನು ಗುರುತಿಸುವ ಅವಕಾಶ ಮಾಡಿಕೊಡುತ್ತಾರೆ. ಅವರು ಪರಂಪರೆಯಲ್ಲಿನ ಹೆಣ್ಣಿನ ತಾಯ್ತನದ ವೈಭವೀಕರಣವನ್ನು ವಿರೋಧಿಸುತ್ತಲೇ ಸಿದ್ಧ ಮಾದರಿಯ ಪಾತ್ರಗಳಲ್ಲಿ ಮಾತ್ರ ಹೆಣ್ಣನ್ನು ಚಿತ್ರಿಸುವ ವಿಚಾರವನ್ನು ವಿರೋಧಿಸುತ್ತಾರೆ. ಲಿಂಗಾಧಾರಿತ ತಾರತಮ್ಯಗಳಿಲ್ಲದ ಜೈವಿಕ ಭಿನ್ನತೆಗಳನ್ನು ಗುರುತಿಸಬೇಕೆಂಬ ಅಂಶದ ಕಡೆಗೆ ಒತ್ತು ನೀಡುತ್ತಾರೆ"[೨]. ಸ್ತ್ರೀಯರೂ ಕೂಡ ತನ್ನದೆ ಆದ ಅಸ್ತಿತ್ವ ಹೊಂದಿದ್ದಾರೆ ಎಂಬುದು ಅವರ ಅಭಿಮತ. ಹೀಗೆ ಸ್ತ್ರೀಪರವಾದ ವೈಚಾರಿಕ ನಿಲುವನ್ನು ಹೊಂದಿ ಅವಳ ಆಮೂಲಾಗ್ರವಾದ ಅಭಿವೃದ್ಧಿಯನ್ನು ಬಯಸುವುದಷ್ಟೇ ಅಲ್ಲ. ಆಕೆಯು ಒಬ್ಬ ಮನುಷ್ಯಳು ತಾನು ಬಯಸಿದಂತೆ ಬದುಕುವ ಗಂಡು ಹೆಣ್ಣು ಸಮಾನರಾಗಿ ಬಾಳಬೇಕು.

ಹೆಣ್ಣು ಮತ್ತು ಗಂಡು ಇಬ್ಬರು ಜೈವಿಕವಾಗಿ ಭಿನ್ನರಾಗಿದ್ದರೂ ಅವರು ಸಮಾನರು ಸಮಾಜದ ಮುಂದುವರಿಕೆಗೆ ಹಾಗೂ ಅದರ ಅಸ್ತಿತ್ವಕ್ಕೆ ಇಬ್ಬರೂ ಕಾರಣರು ಹೀಗಿರುವಾಗ ಯಾರಿಂದ ಯಾರೂ ಶ್ರೇಷ್ಠರಲ್ಲ ಯಾರಿಂದ ಯಾರು ಕನಿಷ್ಠರಲ್ಲ ಮಾತೆಯರ ಅಧಿನದಲ್ಲಿ ಪಿತೃಗಳಾಗಲಿ, ಪಿತೃಗಳ ಅಧಿನದಲ್ಲಿ ಮಾತೆಯರಾಗಿ ಇರುವ ಪ್ರಮೆಯವೆ ಇಲ್ಲ. ಪ್ರಕೃತಿಯೆ ಅವರಿಗೆ

ಕೂಡಿ ಬಾಳುವ ಹಾಗೆ ವರ ನೀಡಿರುವಾಗ ಮೇಲು ಕೀಳು ಎಂಬುದು ಹಾಸ್ಯಾಸ್ಪದವಾಗಿಯೇ ಕಂಡುಬರುತ್ತದೆ .ಆದರೆ ಶತಶತಮಾನಗಳಿಂದ ಶೋಷಣೆಗೆ ಗುರಿ ಮಾಡಿರುವ ಪುರುಷಪ್ರಧಾನ ವ್ಯವಸ್ಥೆ ಹೆಣ್ಣನು ಭೋಗದ ವಸ್ತುವಾಗಿ ಆಕೆಗೆ ಉಪಟಳ ನಿಡುತ್ತ ದೈಹಿಕ ಹಾಗೂ ಮಾನಸಿಕ ಕಿರುಕುಳವನ್ನು ನೀಡಿದೆ. ಇದನ್ನು ವಿರೋಧಿಸುವ ಸ್ತ್ರೀವಾದಿಗಳು ತಮಗೆ ಸಮಾನವಾಗಿ ನೋಡಿಕೊಳ್ಳಲು ವ್ಯವಸ್ಥೆ ನಿರ್ಮಾಣವಾಗಬೇಕು . ತಮ್ಮ ಗೌರವಕ್ಕೆ ಧಕ್ಕೆ ಬರದ ರೀತಿಯಲ್ಲಿ ಜೀವಿಸುವ ಹಕ್ಕು ದೊರೆಯಬೇಕೆಂದು ಹೋರಾಟ ನಡೆಸುತ್ತಿದ್ದಾರೆ.

## ತಾಯ್ತನದ ಚಿಂತನೆಗಳು

ಸ್ತ್ರೀವಾದಿಗಳು ತಾಯ್ತನದ ಕುರಿತಂತೆ ತನ್ನದೆ ಆದ ವೈಚಾರಿಕ ನಿಲುವನ್ನು ಹೊಂದಿದ್ದಾರೆ. ಹೆಣ್ಣೊಬ್ಬಳು ತಾಯಿಯಾಗುವುದು ಗೌರವದ ವಿಷಯವೆಂಬುದನ್ನು ಇವರು ಅಲ್ಲಗಳೆಯುತ್ತಾರೆ. ಏಕೆಂದರೆ ಹೆಣ್ಣಿನ ಶೋಷಣೆ ನಿಂತಿರುವುದು ಆಕೆ ತಾಯಿ ಆಗುವ ವಿಶೇಷ ಶಕ್ತಿಯಿಂದಲೇ ಎನ್ನುತ್ತಾರೆ. ಹೆಣ್ಣು ಮಗು ಪಡೆಯುವ ಯಂತ್ರವೆಂಬಂತೆ ತಿಳಿದುಕೊಂಡಿರುವ ಪುರುಷಪ್ರಧಾನ ವ್ಯವಸ್ಥೆಯನ್ನು ಸ್ತ್ರೀವಾದಿಗಳು ಖಂಡಿಸುತ್ತಾರೆ. ತಾಯ್ತನವು ಒಂದು ಜೈವಿಕ ಪ್ರಕ್ರಿಯೆಯಾಗಿದೆ. ಯಾವುದೇ ಜಾತಿ, ಮತ, ವರ್ಗ, ಧರ್ಮಕ್ಕೆ ಸಂಬಂಧಿಸಿದ ಹೆಣ್ಣನ್ನು ಪುರುಷಪ್ರಧಾನ ವ್ಯವಸ್ಥೆ ಶೋಷಣೆಗೆ ಗುರಿಮಾಡಿರುವುದನ್ನು ಸ್ತ್ರೀವಾದ ವಿರೋಧಿಸುತ್ತದೆ. ಪರಂಪರಾಗತವಾಗಿ ಬಂದ ಹೆಣ್ಣಿನ ಹೆಣ್ತನದ ಸಾರ್ಥಕವಿರುವುದು ತಾಯ್ತನದಲ್ಲಿ ಎಂಬ ನಿಲುವನ್ನು ಇವರು ಅಲ್ಲಗಳೆಯುತ್ತಾರೆ. ಬದಲಾಗಿ "ಗರ್ಭಧಾರಣೆಯು ಹೆಣ್ಣಿನ ವಿಧಿಯಾಗದೆ ಗರ್ಭಾಶಯವು ಅವಳ ಅನನ್ಯತೆಯ ಶಕ್ತಿ ಕೇಂದ್ರವಾಗಿ ವ್ಯಾಖ್ಯಾನಕ್ಕೆ ಒಳಗಾಗಿದೆ "[೩೦]. ಈ ಮೂಲಕವಾಗಿ ಆಕೆ ಮುಖ್ಯಳಾಗಬೇಕೆ ಹೊರತು, ಆ ಕಾರಣಕ್ಕಾಗಿಯೇ ಶೋಷಣೆಗೆ ಗುರಿಯಾಗಬಾರದು. ಪಿತೃಪ್ರಧಾನತೆಯಲ್ಲಿ ಸ್ತ್ರೀಯರು ಪುರುಷರ ಅಧಿನರಾಗಿರಿವುದನ್ನು ವಿರೋಧಿಸುತ್ತದೆ. ಗಂಡಿಗಿಂತಲೂ ಹೆಣ್ಣು ಕೀಳು ಎಂಬ ನಿಲುವು ತಿರಸ್ಕರಿಸಿ ಸಂಪೂರ್ಣ ಸ್ವತಂತ್ರವಾದ ವಿಚಾರಗಳನ್ನು ಸ್ತ್ರೀವಾದ ಮಂಡಿಸುತ್ತದೆ. ಕುಟುಂಬದಲ್ಲಿ ನಿರ್ಧಾರವಾಗುವ ಪರಾವಲಂಬಿ ಜೀವನ, ತನ್ನ ಅಸ್ತಿತ್ವ ಇಲ್ಲದಿರುವಿಕೆ, ಕಾಮಾದಿ ಹಾಗೂ ಮಕ್ಕಳನ್ನು ಹೆರುವ ಕುರಿತು ಇಲ್ಲದ ಸ್ವಾತಂತ್ರವನ್ನು ನೇರವಾಗಿ ವಿರೋಧಿಸುತ್ತಾರೆ.

ಸ್ತ್ರೀವಾದಿಗಳು ತಾಯ್ತನವನ್ನು ಒಂದು ವಿಶಿಷ್ಟನೆಲೆಯಲ್ಲಿ ನಿಂತು ನೋಡಲು ಪ್ರಯತ್ನಿಸಿದ್ದಾರೆ. ಅವರ ನಿಲುವು ಹೀಗೆ ಕ್ರೂಢಿಕರಿಸಬಹುದು.

- ತಾಯ್ತನ ಸಹಜ ಹಾಗೂ ಪ್ರಕೃತಿದತ್ತವಾದದ್ದು.
- ತಾಯಿ ಜೀವವನ್ನು ಸೃಷ್ಟಿಸುವವಳು ಮತ್ತು ರಕ್ಷಿಸುವವಳು.
- ಗರ್ಭಾಶಯ ಹೆಣ್ಣಿನ ಅನನ್ಯತೆಯ ಶಕ್ತಿ ಕೇಂದ್ರ

* ವಿವಾಹವೆಂಬ ಬಂಧನ ತಾಯ್ತನವನ್ನು ವೈಭವೀಕರಿಸಿದೆ.
* ತಾಯಿಯಾಗುವ ನಿರ್ಧಾರ ಸಂಪೂರ್ಣವಾಗಿ ಮಹಿಳೆಯದ್ದೆ ಆಗಿರಬೇಕು.
* ಮಕ್ಕಳನ್ನು ಪಡೆಯುವ ಮಹಿಳೆ ಎಷ್ಟು ಮಕ್ಕಳನ್ನು ಪಡೆಯಬೇಕು ಮತ್ತು ಅಂತರದ ಕಾಲ ಎಷ್ಟಿರಬೇಕು ಎಂಬ ನಿರ್ಧಾರ ಮಹಿಳೆಯದ್ದೆ ಆಗಿರಬೇಕು.
* ಮಕ್ಕಳ ಲಾಲನೆ ಪಾಲನೆ ಮಹಿಳೆಗೆ ಮಾತ್ರ ಸಿಮೀತ ಮಾಡದೆ ಸಮಾನವಾಗಿ ಹಂಚಿಕೊಳ್ಳುವುದು.
* ತಾಯ್ತನಕ್ಕೆ ಇರುವ ತಲ್ಲಣಗಳನ್ನು ಕಡಿಮೆ ಮಾಡುವುದು.
* ಉದ್ಯೋಗಸ್ಥ ತಾಯಂದಿರ ಕೆಲಸದ ಇಬ್ಬಗೆಯ (ಮನೆಯಒಳ ಮತ್ತು ಹೊರ) ಹೊರೆಯನ್ನು ಕಡಿಮೆ ಮಾಡುವುದು.
* ಹೆಣ್ಣು ಗಂಡುವೆಂಬುದು ಮೇಲು ಕೀಳುವೆಂಬ ವಿರುದ್ಧವಾದ ವ್ಯಕ್ತಿಗಳಾಗಿರದೆ ಭಿನ್ನರಷ್ಟೇ ಎಂಬ ಅರಿವು ಮೂಡಿಸುವುದು.
* ಬಂಜೆಯರನ್ನು, ಅವಿವಾಹಿತೆಯನ್ನು ಹಾಗೂ ಮಕ್ಕಳನ್ನು ಬೇಡವೆನ್ನುವರನ್ನು ಸಮಾಜ ನೋಡುವ ಸಾಂಪ್ರದಾಯಕ ದೃಷ್ಟಿ ಕೋನವನ್ನು ಬದಲಾಯಿಸುವುದು.
* ಮಾತೆಯಾಗಿ , ಮಾಯೆಯಾಗಿ ಕಾಣದೆ ಒಬ್ಬ ಮನುಷ್ಯಳಾಗಿ ಕಾಣುವುದು.
* ಹೆಣ್ಣಿನ ದೇಹದ ಬಗ್ಗೆ ಇದ್ದ ಪಾರಂಪರಿಕ ನಿಲುವುಗಳನ್ನು ಬದಲಿಸುವುದು.
* ಸ್ತ್ರೀ - ಪುರುಷರಿಬ್ಬರು ಮಹತ್ವ ಮನಗಾಣುವಂತೆ ಮಾಡುವುದು.
* ಮಹಿಳೆಯರಿಗೆ ತಮ್ಮ ದೇಹದ ಮೇಲೆ ಸಂಪೂರ್ಣ ಹಕ್ಕು ಇರಬೇಕು.
* ಮಹಿಳೆಯ ದೇಹ ವೈದ್ಯರಂಗದ ಪ್ರಯೋಗ ಪಶುವಾಗದೆ ಸ್ವತಂತ್ರ್ಯದ ಆಯ್ಕೆ ಆಕೆಗೆ ಇರಬೇಕು.
* ತಾಯಂದಿರ ಆರೋಗ್ಯದ ಕಡೆಗೆ ಲಕ್ಷವಹಿಸುವುದು.

ಕುಟುಂಬದಲ್ಲಿ ಮಹಿಳೆಯ ವೈಯಕ್ತಿಕ ಬದುಕಿಗೆ ಮನ್ನಣೆ ದೊರೆತು ತಾಯ್ತನದ ಸಂಪೂರ್ಣ ಸ್ವಾತಂತ್ರ ಆಕೆ ಪಡೆಯಬೇಕು ತಾನು ತಾಯಿ ಆಗುವ ಹಾಗೂ ನಿರಾಕರಿಸುವ ಹಕ್ಕು ಆಕೆ ಪಡೆಯಬೇಕು. ಮಕ್ಕಳನ್ನು ಯಾವಾಗ ಪಡೆಯಬೇಕು ಮತ್ತು ಎಷ್ಟು ಮಕ್ಕಳನ್ನು ಪಡೆಯಬೇಕು. ಪ್ರತಿ ಮಗುವಿನ ನಡುವೆ ಅಂತರ ಎಷ್ಟಿರಬೇಕು ಎಂಬುದು ತಾಯಿ ಆಗುವವಳ ನಿರ್ಧಾರವೇ ಮುಖ್ಯ ಎಂದು ಬಗೆಯಬೇಕು. ತಾಯ್ತನವೆಂಬುದು ಬರೀ ತಾಯಿಯ ಕರ್ತವ್ಯವಾಗದೆ ಅದು ತಂದೆತನಕ್ಕೂ ಅನ್ವಯವಾಗಿದ್ದು, ಮಕ್ಕಳ ಲಾಲನೆ ಪಾಲನೆ ಪೋಷಣೆಯಲ್ಲಿ ಆತನು ಸರಿಸಮಾನನಾಗಿ ಕರ್ತವ್ಯ ನಿರ್ವಹಿಸಬೇಕು ಎಂಬುದು ಸ್ತ್ರೀವಾದಿಗಳ ನೀಲುವು. ಪುರುಷವ್ಯವಸ್ಥೆ ಸಮಾಜದಲ್ಲಿ ಪರತಂತ್ರಕ್ಕೆ ಒಳಗಾದ ಮಹಿಳೆಯರ ಬದುಕನ್ನು

ಬಿಡುಗಡೆಗೊಳಿಸಬೇಕು. ವಿವಿಧ ರೀತಿಯ ಪಾತ್ರವನ್ನು ನಿರ್ವಹಿಸುತ್ತ ಬರುವ ಮಹಿಳೆ ತಾಯಿಯಾಗಿ, ತನ್ನ ಬಹುತೇಕ ಎಲ್ಲ ಸಮಯವನ್ನು ಕುಟುಂಬಕ್ಕಾಗಿ ಅದಕ್ಕಾಗಿ ವ್ಯಯಿಸಿ ಸಾಮಾಜಿಕವಲಯದಲ್ಲಿ ಹಿಂದುಳಿಯಲು ಕಾರಣವೂ ಆಗಿದೆ.

ಆ ಕಾರಣಕ್ಕಾಗಿ ತೀವ್ರಗಾಮಿ ಸ್ತ್ರೀವಾದಿಗಳಂತೂ ತಾಯ್ತನವನ್ನೆ ಧಿಕ್ಕರಿಸುವ ಹಂತಕ್ಕೆ ತಲುಪಿ ಮಹಿಳೆಯನ್ನು ಶೋಷಣೆಯಿಂದ ವಿಮುಕ್ತಗೊಳಿಸಲು ಪ್ರಯತ್ನಿಸಿದ್ದಾರೆ. ''ಮಕ್ಕಳನ್ನು ಹೆರುವ ಪ್ರಜನನ ಕಾರ್ಯಕ್ಕೆ ಅಣಿಗೊಳಿಸಿ, ತಾಯ್ತನ, ಲಾಲನೆ, ಪಾಲನೆಗಳಿಗೆ ಪೋಷಕವಾಗಿದೆ. ಜೈವಿಕನೆಲೆ ಪ್ರಧಾನವಾಗಿದೆ. ಶೈಲಾಸ್ಮಿತ ಫೈರಸ್ಟೋನ್‌ರವರ ಅಭಿಪ್ರಾಯದಂತೆ ಪ್ರಜನನ ತಂತ್ರಜ್ಞಾನವನ್ನು ಬದಲಾಯಿಸುವುದರಿಂದ ಜೈವಿಕವಾಗಿ ಮಹಿಳೆಯ ಶೋಷಣೆಯಿಂದ ಮುಕ್ತಗೊಳಿಸುವುದಾಗಿದೆ. ಎಂದು ತಿಳಿಸಿದ್ದಾರೆ. (ನಳಿಕಾ ಮಗುವಿನ ಜನನದ ವೈಜ್ಞಾನಿಕ ತಂತ್ರಜ್ಞಾನದ ವರ್ಗಾಯಿಸಲ್ಪಡುವ ಕ್ರಿಯೆ). ಇದರಿಂದಾಗಿ ಲಿಂಗ ವ್ಯವಸ್ಥೆ ಮತ್ತು ಜೈವಿಕ ಭಿನ್ನತೆಗಳು ಕೊನೆಗೊಳ್ಳುತ್ತವೆ, ಇದರಿಂದಾಗಿ ಅಸ್ತಿತ್ವದಲ್ಲಿದ್ದ ಕುಟುಂಬಪದ್ಧತಿ ಅಂತಗೊಳಿಸುವುದರಿಂದ ಮಾತ್ರ ಸ್ತ್ರೀಯ ಏಳ್ಗೆ ಸಾಧ್ಯ ಎನ್ನುವುದು ತೀವ್ರಗಾಮಿ ಸ್ತ್ರೀವಾದಿಗಳ ವಾದವಾಗಿದೆ ''[೩೦]. ಈ ಹಿನ್ನಲೆಯಲ್ಲಿ ತಾಯ್ತನದ ಕುರಿತಂತೆ ಸ್ತ್ರೀವಾದಿಗಳ ಎಷ್ಟು ತೀಕ್ಷ್ಣವಾದ ವಿಚಾರಗಳನ್ನು ಮಂಡಿಸಿದ್ದಾರೆ ಎಂಬುದು ತಿಳಿಯಬಹುದು. ಇವರ ಈ ನಿಲುವಿಗೆ ಸೂಕ್ತಕಾರಣಗಳು ಇವೆ. ಕುಟುಂಬವೊಂದರಲ್ಲಿ ಮನೆಯ ಎಲ್ಲ ಜವಾಬ್ದಾರಿಗಳನ್ನು ತಾಯಿಯ ಮೇಲೆ ಹಾಕಲಾಗಿದೆ. ಮಗುವನ್ನು ಹೊರುವುದರಿಂದ ಹಿಡಿದು, ಹೆರುವ ಪಾಲನೆ ಪೋಷಣೆ ಅವಳಿಗೆ ಮಾತ್ರ ಆರೋಪಿಸಲಾಗಿದೆ. ತಾಯ್ತನದಲ್ಲಿಯೇ ತನ್ನ ಹೆಣ್ತನದ ಸಾರ್ಥಕತೆ ಕಾಣಬೇಕೆ ಹೊರತು, ಉಳಿದಂತೆ ಆಕೆಗೆ ಅಸ್ತಿತ್ವವೇ ಇಲ್ಲ ಎಂಬಂತೆ ವರ್ತಿಸಲಾಗುತ್ತದೆ. ಹೆತ್ತವಳೆ ಮಗುವಿನ ಆರೈಕೆ ಮಾಡಬೇಕು ತಂದೆಯಾದವನು ಈ ಜವಾಬ್ದಾರಿಯಿಂದ ವಿಮುಖನಾಗಿ ತಾಯಿಯಾದವಳಿಗೆ ಒಂದು ಸೀಮಿತದಲ್ಲಿ ಬಂಧಿಸಿ ಅದು ಆಕೆಯ ಸಾರ್ಥಕದ ಬದುಕು ಎಂದು ಬಿಂಬಿಸಿ ಭಾವನಾತ್ಮಕವಾಗಿ ತಾಯಿಯನ್ನು ಬಂಧಿಸಲು ಪ್ರಯತ್ನಿಸಲಾಗಿದೆ ಎಂದು ಸ್ತ್ರೀವಾದಿಗಳು ಅಭಿಪ್ರಾಯ ಪಡುತ್ತಾರೆ.

ಈ ಹಿನ್ನೆಲೆಯಲ್ಲಿ ಖ್ಯಾತ ಸ್ತ್ರೀವಾದಿ ಸಿಮೋನ ದಿ ಬೊವಾಳ ವಿಚಾರಗಳ ಕುರಿತು ಡಾ. ಗಾಯಿತ್ರೀನಾವಡ ಹೀಗೆ ಅಭಿಪ್ರಾಯ ಪಡುತ್ತಾರೆ. 'ಹೆಣ್ಣುತನ ಎನ್ನುವುದು ಅಮೂರ್ತ ಪರಿಕಲ್ಪನೆಯನ್ನು ನಿರಾಕರಿಸುವ ಬೋವಾ 'ಸ್ತ್ರೀಯೆಂದರೆ ಏನು? ' ಎನ್ನುವ ಪ್ರಶ್ನೆಗೆ 'ಸ್ತ್ರೀಯೆಂದರೆ ಗರ್ಭಕೋಶ' ಎನ್ನುವುದು ಸಾಂಪ್ರದಾಯಿಕ ತಿಳಿವು, ಇಂತಹ ಸ್ವೀಕೃತ ಅರ್ಥವನ್ನು ಬದಲಾಯಿಸಲು ಸ್ತ್ರೀಯೆಂದರೆ ಏನ್ನು? ಎನ್ನುವ ಪ್ರಶ್ನೆಯನ್ನು ಮತ್ತೆ ಎತ್ತಿಕೊಳ್ಳಬೇಕಾಗುತ್ತದೆ ಎನ್ನುತ್ತಾರೆ. ಯಾಕೆಂದರೆ ಈ ಬಗೆಯ ಸಾಂಪ್ರದಾಯಿಕ ಅರ್ಥೈಸುವಿಕೆಯು ಹೆರಿಕೆ ಮತ್ತು ಸಂಗೋಪನೆಗಳಷ್ಟೇ ಹೆಣ್ಣಿನ ಸಾಮರ್ಥ್ಯಗಳೆಂದು ಪರಿಗಣಿಸಿ ಆಕೆಯ ಅನೇಕ ಸಾಧ್ಯತೆಗಳನ್ನು ನಿರಾಕರಿಸುತ್ತದೆ ಹೆಣ್ಣನ್ನು ಆಯ್ಕೆ ಸ್ವಾತಂತ್ರ್ಯದ ನೆಲೆಯಲ್ಲಿ ಅರ್ಥೈಸಿಕೊಳ್ಳುವಲ್ಲಿ ಈ ಮೂಲಭೂತ ಪ್ರಶ್ನೆಗೆ ನಾವಿಂದು ಉತ್ತರಿಸಬೇಕಾಗಿದೆ. ಎನ್ನುತ್ತಾರೆ. ತಾಯ್ತನದ ನೆಲೆಯಿಂದ ಗಮನಿಸಿದರೆ

ಈ ಪ್ರಶ್ನೆ ತುಂಬಾ ಮಹತ್ವದದಾಗಿದೆ. ಅದರ ಉತ್ತರದಲ್ಲಿಯೇ ಸ್ತ್ರೀಯ ಶೋಷಣೆ ಹಾಗೂ ಅದರಿಂದ ಮುಕ್ತಿಯ ದಾರಿಗಳು ಕಂಡುಕೊಳ್ಳಲು ಸಾಧ್ಯ ಏಕೆಂದರೆ ಯಾವುದು ಮೇಲ್ನೋಟಕ್ಕೆ ಸತ್ಯವಲ್ಲ. ಅದನ್ನು ತೋರ್ಪಡಿಸಲು ಪುರುಷ ರಾಜಕಾರಣವೊಂದು ಹೇಗೆ ತನ್ನ ಕಾರ್ಯ ನಿರ್ವಹಿಸಿದೆ ಎಂಬುದು ಗುರುತಿಸುವುದು ಅಷ್ಟೊಂದು ಕಷ್ಟದ ಕೆಲಸವೇನಲ್ಲ.

ಏಕೆಂದರೆ ಪಾರಂಪರಿಕವಾಗಿ ಹೆಣ್ಣನ್ನು ಒಂದು ಚೌಕಟ್ಟಿಗೆ ಸೀಮಿತಗೊಳಿಸಲಾಗಿದೆ ಮಕ್ಕಳನ್ನು ಹೆರುವ ಹೆಣ್ಣು ಅವುಗಳ ಜವಾಬ್ದಾರಿಯನ್ನು ಕುಟುಂಬದ ನೆಲೆಯಲ್ಲಿಯೇ ನಿಂತು ಪಾಲಿಸಬೇಕು ಎಂಬ ಅನಿವಾರ್ಯಯನ್ನು ಸೃಷ್ಟಿಸಲಾಗಿದೆ. ಒಂದು ಮಗುವಿನ ತಾಯಿ ಯಾರು? ಎಂಬ ಪ್ರಶ್ನೆ ಬಹು ಸರಳವಾಗಿದ್ದು. ತಂದೆ ಕುರಿತು ಪ್ರಶ್ನೆಬಂದಾಗ ಉತ್ತರ ಅಷ್ಟು ಸುಲಭ ಸಾಧ್ಯವಾಗದೆ. ಹೆಣ್ಣಿನ ಮೇಲಿನ ಶೀಲದ ಕುರಿತು ಅನುಮಾನ, ಗುಮಾನಿಗಳು ಉಂಟಾಗಿ ಆಕೆ ತನ್ನನ್ನು ಒಂದು ಚೌಕಟ್ಟಿಗೆ ಮಾತ್ರ ಸಿಮಿತಗೊಳಿಸಿರುವುದು ಕಂಡುಬರುತ್ತದೆ. ಹೆಣ್ಣಿಗೆ ಸ್ವಾತಂತ್ರ್ಯ ಕೊಟ್ಟರೆ ತಮ್ಮ ಅಸ್ತಿತ್ವಕ್ಕೆ ಕುಂದು. ಪ್ರಕೃತಿ ಸಹಜವಾಗಿರುವ ಹೊರುವ ಮತ್ತು ಹೆರುವ ಕಾರಣ ನೀಡಿ ಆಕೆಯನ್ನು ಒಂದಡೆ ಕೂಡಿ ಹಾಕಲಾಯಿತು. ತಾಯಿ ಆಗುವ ಸ್ಥಿತಿಯನ್ನು ತಾಯ್ತನವೆಂಬ ವೈಭವೀಕರಣಕ್ಕೆ ಒಳಮಾಡಿ ತಂದೆತನವನ್ನು ಅಷ್ಟು ಮಾನ್ಯತೆ ನೀಡದೆ ಎಲ್ಲ ಜವಾಬ್ದಾರಿ ಹೆಣ್ಣಿಗೆನೆ ವಹಿಸಿಕೊಡಲಾಯಿತು, ಇದು ಸಮಾಜದ ಅರ್ಧ ಜನಾಂಗದ ದುಸ್ಥಿತಿಗೆ ಕಾರಣವೂ ಆಯಿತು. ಹೆಣ್ಣಿನ ಸ್ಥಾನಮಾನದಲ್ಲಾಗುವ ಏರುಪೇರಿಗೆ ಎಲ್ಲೋ ಒಂದು ಕಡೆ ತಾಯ್ತನವೇ ಕಾರಣವಾಯಿತು.

ಕುಟುಂಬವನ್ನು ನಿರ್ವಹಿಸುವ ಜವಾಬ್ದಾರಿಗಳು ಆಕೆಯನ್ನು ಸೀಮಿತ ವಲಯದಲ್ಲಿ ಮಾತ್ರ ನಿಂತು ಆಲೋಚಿಸುವಂತೆ ಮಾಡಿತು, ಇದನ್ನೆ ಸ್ತ್ರೀವಾದಿಗಳು ವಿರೋಧಿಸುತ್ತಾರೆ. ಹೆಣ್ಣಿಗೆ ಒಂದು ಅಸ್ತಿತ್ವ ತಂದು ಕೊಡಲು ಹವಣಿಸುತ್ತಿದ್ದಾರೆ. ಹೀಗೆ ಸ್ತ್ರೀವಾದಿಗಳ ಚಿಂತನೆಯನ್ನು ಗಮನಿಸಿದಾಗ ಇವರ ಮಾತಿನಲ್ಲಿನ ಸಂತ್ಯಾಂಶ ಸ್ಪಷ್ಟವಾಗಿ ಗೋಚರಿಸುತ್ತದೆ. ಇದೋಂದು ಮಾನವೀಯ ಹೋರಾಟವಾಗಿದ್ದು , ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಮಹತ್ವದ್ದಾಗಿದೆ. ಹೆಣ್ಣುಮಗು ಹುಟ್ಟಿದ ತಕ್ಷಣ ಅದು ಹೆಣ್ಣಾಗಲೀ ಗಂಡಾಗಲೀ ಆಗಿರುವುದಿಲ್ಲ. ಹೆಣ್ಣು - ಗಂಡು ಎಂಬ ಗ್ರಹಿಕೆಗಳನ್ನು ಆ ಮಗುವಿನ ಮೇಲೆ ಹೆರಲಾಗುತ್ತದೆ. ಅಲ್ಲಿಂದ ಪ್ರಾರಂಭವಾದ ಹೆಣ್ಣು ಎಂಬ ಜೀವಿಗೆ ಜೀವನಪರ್ಯಂತ ಹಲವು ನಿರ್ಭಂದಗಳಿಂದ ಬಂಧಿಸಲಾಗುತ್ತದೆ. ಹೆಣ್ಣಿಗೆ ಭಾವನೆಗಳಿವೆ, ನೋವು - ನಲಿವುಗಳಿವೆ ಎಂಬುದನ್ನು ಲೆಕ್ಕಕ್ಕೆ ತೆಗೆದುಕೊಳ್ಳದ ಪುರುಷಗ್ರಾಹಿ ಸಮಾಜದ ಧೋರಣೆಯನ್ನು ಬದಲಿಸುವ ಉದ್ದೇಶ ಸ್ತ್ರೀವಾದ ಹೊಂದಿದೆ. ಹೆಣ್ಣನ್ನು ಗಂಡಿಗಿಂತ ಭಿನ್ನವಾಗಿ ಕಾಣುವ ಮೂಲ ನೆಲೆಯೆಂದರೆ ಆಕೆಯ ಗರ್ಭಾಶಯ ಆದರೆ ಇದೆ ಆಕೆಯ ಒಟ್ಟು ಬದುಕಿಗೆ ಈ ಸಮಾಜ ಕಂಟಕವನ್ನು ಸೃಷ್ಟಿ ಮಾಡಿದೆ. ಇದನ್ನೆ ಸ್ತ್ರೀವಾದಿಗಳು ಒಪ್ಪಿಕೋಳ್ಳುವುದಿಲ್ಲ. ಲಿಂಗ ಸಮಾನತೆಗಾಗಿ ಅವರ ಹೋರಾಟ ನಿರಂತರ ನಡೆದೆ ಇದೆ.

## ಅಡಿ ಟಿಪ್ಪಣಿ

1. 'ತಾಯಿ' ಲೇ - ರಾಜೇಶ್ವರಿ ಪು-೧೦೫
2. 'ಭಾರತದಲ್ಲಿ ಮಹಿಳಾ ಅಧ್ಯಯನ' ಲೇ-ಚ.ನ ಶಂಕರರಾವ ಪು-೨೪
3. 'ಭಾರತದಲ್ಲಿ ಮಹಿಳಾ ಅಧ್ಯಯನ' ಲೇ-ಚ.ನ ಶಂಕರರಾವ ಪು. ೨೬
4. 'ಮಾತೃಪೂಜೆ' ಲೇ- ಚಿ. ನಾ ಮಂಗಳಾ ಪು. ೬
5. 'ಮಾತೃಪೂಜೆ' ಲೇ- ಚಿ. ನಾ ಮಂಗಳಾ ಪು.೧೧
6. 'ಮಾತೃಪೂಜೆ' ಲೇ- ಚಿ. ನಾ ಮಂಗಳಾ ಪು.೫೫
7. 'ಗ್ರಾಮ ದೇವತೆಗಳು' ಲೇ-ಡಾ.ಸಿದ್ಧಲಿಂಗಯ್ಯ ಪು. ೨೨
8. 'ಮಾತೆಯರು ಮಾನ್ಯರಾಗಿದ್ದಾಗ' ಲೇ-ದೇವಿಪ್ರಸಾದ ಚಟ್ಟೋಪಾಧ್ಯಾಯ ಪು. ೫೫
9. 'ಗರತಿ ಹಾಡು' ಲೇ-ಸಂ. ದ. ರಾ. ಬೇಂದ್ರೆ ಪು.೫೧
10 'ಗರತಿ ಹಾಡು' ಲೇ-ಸಂ. ದ. ರಾ. ಬೇಂದ್ರೆ ಪು.೪೫
11. 'ಗರತಿ ಹಾಡು' ಲೇ-ಸಂ. ದ. ರಾ. ಬೇಂದ್ರೆ ಪು.೪೩
12. 'ಗ್ರಾಮ ದೇವತೆಗಳು' ಲೇ-ಡಾ.ಸಿದ್ಧಲಿಂಗಯ್ಯ ಪು.೧೬
13. 'ಗ್ರಾಮ ದೇವತೆಗಳು' ಲೇ-ಡಾ.ಸಿದ್ಧಲಿಂಗಯ್ಯ ಪು.೨೦
14. 'ಗ್ರಾಮ ದೇವತೆಗಳು' ಲೇ-ಡಾ.ಸಿದ್ಧಲಿಂಗಯ್ಯ ಪು.೨೧
15. 'ಏಳು ಊರಿನ ದೇವತೆಗಳ ' ಲೇ-ಡಾ.ಸಿ. ಟಿ ಗುರುಪ್ರಸಾದ ಪು. ೧೦
16. 'ಭಾರತದಲ್ಲಿ ಮಹಿಳಾ ಅಧ್ಯಯನ' ಚ. ನ. ಶಂಕರರಾವ್ ಪು. ೨೬
17. ' ಕೃಷಿ ಜಾನಪದ ಮತ್ತು ಮಹಿಳೆ ' -ಡಾ. ಸುಮಂಗಲಾ ಅತ್ತಿಗೇರಿ ಪು. ೫೪
18. ' ಮಹಿಳೆ ಮತ್ತು ಧರ್ಮ' - ಡಾ.ಶಿವಾನಂದ ಎಸ್. ವಿರಕ್ತಮಠ. ಪು. ೬೫
19. ' ಮಹಿಳೆ ಮತ್ತು ಧರ್ಮ' - ಡಾ. ಶಿವಾನಂದ ಎಸ್ ಪು. ೧೩೪
20. "ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು" -ಲೇ -ಡಾ.ಎಂ.ಉಷಾ ಪು.೧೫೧
21. 'ಸಮಗ್ರ ಸಮಾಜಶಾಸ್ತ್ರ ' ಲೇ- ರಾಮಚಂದ್ರ ಜೋಷಿ ಪು. ೬೩
22. 'ವಿವಾಹ ಹುಟ್ಟು ಮತ್ತು ಪೂರ್ವೋತ್ತರ 'ಲೇ - ತಾಪಿ ಧರ್ಮರಾವ ಪು. ೧೪೦
23. 'ಅವ್ವ ಕಾಡಾದಿ ಗೌರವ್ವ ಹಾಡಿದ ಹಾಡು ' ಡಾ.ನೀಲಾಂಬಿಕಾ ಪೋಲಿಸ ಪಾಟೀಲ ಪು.೧೮೯
24. 'ಸಮಗ್ರ ಸಮಾಜಶಾಸ್ತ್ರ' ಲೇ- ರಾಮಚಂದ್ರ ಜೋಷಿ ಪು. ೨೧೯
25. 'ಭಾರತೀಯ ಸ್ತ್ರೀ-ಜೀವನ' ಡಾ.ಲೀಲಾ ಪಾಟೀಲ (ಮರಾಠಿ ಮೂಲ) ಡಾ. ವಿಠಲರಾವ
    ಟಿ. ಗಾಯಕ್ವಾಡ (ಕನ್ನಡಕ್ಕೆ) ಪು. ೨

26. 'ಅವ್ವ ಕಾಡಾದಿ ಗೌರವ್ವ ಹಾಡಿದಹಾಡು'ಸಂ ಡಾ.ನೀಲಾಂಬಿಕಾ ಪೋಲಿಸ ಪಾಟೀಲ ಪು. ೧೯೦

27. ' ಅವ್ವ ಕಾಡಾದಿ ಗೌರವ್ವ ಹಾಡಿದಹಾಡು'ಸಂ ಡಾ.ನೀಲಾಂಬಿಕಾ ಪೋಲಿಸ ಪಾಟೀಲ ಪು. ೨೦೫

28. 'ಸಮಗ್ರ ಸಮಾಜಶಾಸ್ತ್ರ' ಲೇ- ರಾಮಚಂದ್ರ ಜೋಷಿ ಪು.೬೪೨

29. 'ಭಾರತದಲ್ಲಿ ಮಹಿಳಾ ಅಧ್ಯಯನ' ಚ. ನ. ಶಂಕರರಾವ್ ಪು. ೪೩

30. 'ಮಹಿಳೆ ಮತ್ತು ಧರ್ಮ' -ಡಾ.ಶಿವಾನಂದ ಎಸ್. ವಿರಕ್ತಮಠ. ಪು. ೧೩೪

31. ' ಸಮಗ್ರ ಸಮಾಜಶಾಸ್ತ್ರ ' ಲೇ-ರಾಮಚಂದ್ರ ಜೋಷಿ ಪು. ೬೪೬

# ಅಧ್ಯಾಯ:-3 ಜನಪದ ಗೀತೆಗಳಲ್ಲಿನ ಗ್ರಹಿಕೆಗಳು

- ಸಿದ್ಧ ಮಾದರಿಯ ಗ್ರಹಿಕೆಗಳು
- ಸಮಾನತೆಯ ಗ್ರಹಿಕೆಗಳು.

# ಅಧ್ಯಾಯ 3

## ಜನಪದ ಗೀತೆಗಳಲ್ಲಿ ತಾಯ್ತನದ ಗ್ರಹಿಕೆಗಳು

ಜನಪದ ಸಾಹಿತ್ಯ ಮಾನವನ ಸಂಸ್ಕೃತಿಯನ್ನು ಹೊತ್ತು ತಂದಿದೆ. ಯಾವುದೇ ಸಾಹಿತ್ಯದ ಮೂಲ ಬೇರು ಜನಪದ ಸಾಹಿತ್ಯವೆಂಬುದು ಎಲ್ಲರೂ ಒಪ್ಪಿಕೊಂಡ ಅಂಶ. ಜನಪದ ವಿಸ್ತಾರ ಬಹುವ್ಯಾಪಕವಾದುದು. ಬದುಕಿನ ಪ್ರತಿಯೊಂದು ಮಗ್ಗಲಿನಲ್ಲಿ ಜನಪದ ಸಾಹಿತ್ಯದ ಅಂಶಗಳನ್ನು ಗುರುತಿಸಬಹುದಾಗಿದೆ. ಇಲ್ಲಿ ಜನರ ಬದುಕಿನ ರೀತಿ-ನೀತಿ, ಆಚಾರ-ವಿಚಾರ, ಉಡುಗೆ-ತೊಡುಗೆ, ನಂಬಿಕೆ ಆಚರಣೆಗಳಷ್ಟೆ ಅಲ್ಲದೆ, ಗೀತೆ , ಕಥನಗೀತೆ, ಲಾವಣಿ, ಮಹಾಕಾವ್ಯ , ಕಥೆ, ಗಾದೆ, ಒಗಟು-ಒಡಬುಗಳಂತಹ ನಾನಾ ರೀತಿಯ ರೂಪಗಳನ್ನು ಕಾಣಬಹುದಾಗಿದೆ. ಗದ್ಯ ಮತ್ತು ಪದ್ಯ ಸಾಹಿತ್ಯವನ್ನು ಒಳಗೊಂಡಿರುವ ಜನಪದ ಸಾಹಿತ್ಯದಲ್ಲಿ ಪದ್ಯ ಸಾಹಿತ್ಯಕ್ಕೆ ಹೆಚ್ಚು ಮನ್ನಣೆ ದೊರೆತಿದೆ.

ಮಾನವನ ಜೀವನ ಎಷ್ಟು ವೈವಿಧ್ಯಮಯವಾಗಿದೆಯೋ ಅಷ್ಟು ಪದ್ಯ ಸಾಹಿತ್ಯವೂ ವೈವಿಧ್ಯತೆಯಿಂದ ಕೂಡಿದೆ. ದುಡಿತವರ್ಗದ ಜೀವಾಳವಾದ ಗೀತೆಗಳು ದುಡಿಮೆ ಸಂದರ್ಭದಲ್ಲಿ ಕೃಷಿಕಾರ್ಯ ಜರುಗುವ ವೇಳೆಯಲ್ಲಿ ಕುಟ್ಟುವಾಗ-ಬೀಸುವಾಗ, ತೊಟ್ಟಿಲು ತೂಗುವಾಗ, ಸುಖದಲ್ಲಿ-ದುಃಖದಲ್ಲಿ, ಸಂಭ್ರಮದಲ್ಲಿ ಹೀಗೆ ಹತ್ತು ಹಲವಾರು ಸಂದರ್ಭದಲ್ಲಿ ಸರಾಗವಾಗಿ ಹೊರಹೊಮ್ಮಿದೆ. ಜನಪದರ ಹೃದಯ ವೈಶಾಲ್ಯತೆ, ಬವಣೆ ಗೀತೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಅದರಲ್ಲೂ ಜನಪದ ಗೀತೆ ಪ್ರಕಾರ ಹೆಣ್ಣಿನ ಆಲೋಚನೆಯ ಕ್ರಮವನ್ನು ತಿಳಿಸುತ್ತವೆ. ಪುರುಷಪ್ರಧಾನ ಸಂಸ್ಕೃತಿಯಲ್ಲಿ ತಾನು ಕಂಡ ನೋವು-ನಲಿವು, ಸುಖ- ದುಃಖಗಳನ್ನು ಕೆಲವುಸಲ ಸಂಕೀರ್ಣವ್ಯವಸ್ಥೆಯ ತನ್ನ ಮನೋಲಹರಿಯನ್ನು ಗೀತ ಸಾಹಿತ್ಯದ ಮೂಲಕ ಜನಪದ ಹೆಣ್ಣುಮಗಳು ತನ್ನದೆ ಆದ ಗೀತೆಯಲ್ಲಿ ಅಭಿವ್ಯಕ್ತಪಡಿಸಿದ್ದಾಳೆ.

ಜನಪದ ಗೀತೆಗಳು ಬಹುವಾಗಿ ಹೆಣ್ಣು ಮಕ್ಕಳಿಂದಲೇ ಸೃಷ್ಟಿಗೊಂಡಿವೆ. ಸ್ವತ ಹೆಣ್ಣು ಮಗಳು ತನ್ನ ಅನುಭವಗಳನ್ನು . ಹಾಡಿನ ಮೂಲಕ ಸೃಷ್ಟಿಸಿದ್ದಾಳೆ. ಅಷ್ಟೇಅಲ್ಲ ಅದನ್ನು ಪ್ರದರ್ಶನ ಕೂಡ ಮಾಡುವವರು ಹೆಣ್ಣು ಮಕ್ಕಳೆ ಆಗಿದ್ದಾರೆ. ಜನಪದ ಗೀತ ಪ್ರಕಾರದಲ್ಲಿ ಹೆಚ್ಚಾಗಿ ಮೂಡಿಬಂದಂಥವುಗಳೆಂದರೆ ತ್ರಿಪದಿಗಳು. ಇವು ಹೆಣ್ಣಿನ ಎಳೆ ಎಳೆ ಭಾವನೆಗಳಿಗೆ ಅಭಿವ್ಯಕ್ತಿಯಾಗಿ ಹಸಿ ಗೋಡೆಗೆ ಹರಳು ಹೊಡೆಯುವ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿವೆ. ಪುರುಷ ಬದುಕಿನಿಂದ ತನ್ನ ಭಾವವನ್ನು ದೂರಸರಿಸಿ ಇಲ್ಲಿ ಮುಕ್ತವಾದ ಭಾವ ಲಹರಿಯನ್ನು ಆಕೆ ಹರಿಬಿಟ್ಟಿದ್ದಾಳೆ. ಇಲ್ಲಿ ಯಾವುದೇ ಕಲ್ಪನೆಗೆ ಅವಕಾಶವಿಲ್ಲ . ವಾಸ್ತವ ಬದುಕಿನಲ್ಲಿ ತಾನು ಕಂಡ ಅನುಭವವನ್ನು ಜೀವಪಡೆದು ಹೊರಹೊಮ್ಮಿವೆ.

ವೈವಿಧ್ಯಮಯವಾದ ವಿಷಯಗಳನ್ನೊಳಗೊಂಡಂತೆ ಹೆಣ್ಣಿನ ಬದುಕು ದಾಖಲುಗೊಂಡಿದೆ. ತಾಯಿಯಾದವಳು ತನ್ನ ಗರತಿ ಜೀವನವನ್ನು ಕುಟುಂಬದ ಭಾಂಧವ್ಯಗಳನ್ನು ಗರಿಗೆದರಿ ಬಿಚ್ಚಿಟ್ಟಿದ್ದಾಳೆ. ಜನಪದ ಗೀತ ಸಾಹಿತ್ಯದಲ್ಲಿ ಹೆಣ್ಣಿನ ಕುರಿತಂತೆ ಮೂರು ಬಗೆಯ ನಿಲುವುಗಳನ್ನು ಮಹತ್ವ ಕೊಡಲಾಗಿದೆ. ಒಂದು ಹೆಣ್ಣಿನ ಶಿ ಲ, ಎರಡು ಪಾತಿವ್ರತ್ಯ , ಮೂರು ಆಕೆಯ ತಾಯ್ತನ , ಆದರೆ ವಿಪರ್ಯಾಸವೆಂದರೆ

ಈ ಮೂರು ನೆಲೆಗಳು ಪುರುಷ ಪ್ರಧಾನದಿಂದ ಬಂದಂಥಹ ಹರಕೆಯ ಆಲೋಚನಾಕ್ರಮವೇ ಮೂಲ ಕಾರಣ ಎಂದು ಹೇಳಬಹುದು.

ಜನಪದ ಗೀತ. ಸಾಹಿತ್ಯದಲ್ಲಿ ದಾಖಲೆಗೊಂಡ ತಾಯಿಯ ಬದುಕು ಮುಖ್ಯವಾಗಿ ಎರಡು ನೆಲೆಯಲ್ಲಿ ಗುರುತಿಸಬಹುದಾಗಿದೆ. ಒಂದು ತವರುಮನೆಯನ್ನು ನೆನಸಿಕೊಳ್ಳುವುದು ಇನ್ನೊಂದು ಗಂಡನ ಮನೆಯಲ್ಲಿ ತಾನು ಅನುಭವಿಸುತ್ತಿರುವ ಸುಂದರ ಹಾಗೂ ಯಾತನಾ ಪೂರ್ವವಾಗಿರುವ ಭಾವನೆಗಳನ್ನು ಹಾಡಿನ ಮೂಲಕ ವ್ಯಕ್ತಪಡಿಸಿದ್ದಾಳೆ. ಕೊಟ್ಟ ಮಗಳು ಕುಲಕ್ಕೆ ಹೊರಗಾಗಿ ಬದುಕಬೇಕಾಗುತ್ತದೆ. ಕುಲಕ್ಕೆ ಹೋರಗಾಗಿ ಹೆಂಡತಿಯಾಗಿ ನಂತರ ತಾಯಿಯಾಗಿ ತನ್ನ ಅನುಭವಗಳನ್ನು ವ್ಯಕ್ತಪಡಿಸಿದ್ದಾಳೆ. ಆಕೆಯ ಬದುಕಿನ ಬವಣೆ ಹಾಡಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

ಜನಪದ ಗೀತ ಸಾಹಿತ್ಯದಲ್ಲಿ ತನ್ನ ತವರುಮನೆ, ತಾಯಿ, ತಂದೆ, ಅಕ್ಕ-ತಂಗಿ, ಅಣ್ಣ-ತಮ್ಮಂದಿರನ್ನು ನೆನೆಸಿಕೊಳ್ಳುತ್ತಾಳೆ. ಹಲವು ಸಂದರ್ಭದಲ್ಲಿ ತನ್ನ ತವರುಮನೆ ಘನತೆಯನ್ನು ಎತ್ತಿ ಹಿಡಿಯುತ್ತಾಳೆ. ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಅನಿವಾರ್ಯವಾಗಿ ತನ್ನ ಗಂಡನ ಮನೆಯಲ್ಲಿ ಅನುಭವಿಸುವ ನೋವು - ನಲಿವುಗಳನ್ನು ಗೀತೆಯ ರೂಪದಲ್ಲಿ ಹೊರಹಾಕಿದ್ದಾಳೆ. ತನ್ನ ತವರು ಮತ್ತು ತಾಯಿಯ ಮನೆಯ ಬಂಧುಗಳನ್ನು ತನಗೆ ಮರೆಯಲು ಸಾಧ್ಯವಿಲ್ಲವೆಂಬ ಭಾವನಾಪ್ರಧಾನ ಹಾಡುಗಳು ಕಟ್ಟಿ ಅದನ್ನು ಮೆಲುಕುಹಾಕುತ್ತಾ ತನ್ನ ಹೃದಯವನ್ನು ಹಗುರು ಮಾಡಿಕೊಂಡಿದ್ದಾಳೆ. ತವರಿನಲ್ಲಿರುವ ತಾಯಿ - ತಂದೆ, ಅಣ್ಣ -ತಮ್ಮ, ಅಕ್ಕ - ತಂಗಿ, ಹೀಗೆ ಹಲವು ಕರುಳು ಕುಡಿಗಳನ್ನು ನೆನೆದು ಕಣ್ಣೀರಿಟ್ಟಿದ್ದಾಳೆ. ತಾಯಿ ಮನೆಯಿಂದ ಬಂದ ಹೆಣ್ಣು ಮಗಳು ಗಂಡನ ಮನೆ ಬೆಳಗಲೇಬೇಕು. ಅದು ಆಕೆಯ ಮುಖ್ಯ ಕರ್ತವ್ಯ.

ಹೆತ್ತ ಮನೆಗೂ ಹೂವನ್ನೆ ತರಬೇಕು ವಿನ: ಹುಲ್ಲು ತರಕೂಡದು ಎಂಬ ಪುರುಷ ಪ್ರಧಾನ ಸಮಾಜದ ರೀತಿ - ನೀತಿಗಳು ಪುರುಷರ ಪರವಾಗಿಯೇ ರೂಪಿತವಾಗಿರುವುದರಿಂದ ಅವಳು ಎದುರಿಸುವ ಬಹುತೇಕ ಎಲ್ಲ ಸಮಸ್ಯೆಗಳು ಗೀತ ಸಾಹಿತ್ಯದಲ್ಲಿ ಪ್ರತಿಬಿಂಬಿಸಿವೆ. ಜನಪದ ಮಹಿಳೆಯಲ್ಲಿ ತಾಯಿ-ತವರಿಗೆ ಕೊಟ್ಟ ಮಹತ್ವ ಅಪಾರ. ಇಲ್ಲಿ ತವರಿಗಾಗಿ ನೆನೆಯುವುದು ಹಾತೊರೆಯುವುದು ಮುಖ್ಯವಾಗಿ ಕಾಣಬಹುದಾಗಿದೆ. ತಾಯ್ತನಕ್ಕೆ ಸಂಬಂಧಿಸಿದ ಗ್ರಹಿಕೆಗಳನ್ನು ತವರುಮನೆಯ ಮೂಲಕ ನಮ್ಮ ಮಹಿಳಾಲೋಕ ಹೇಗೆ ಗ್ರಹಿಸಿದೆ ಎಂಬುದನ್ನು ಮುಂದಿನಂತೆ ನೋಡಬಹುದು.

## • ಸಿದ್ಧ ಮಾದರಿಯ ಗ್ರಹಿಕೆಗಳು

ತಾಯ್ತನವೆಂಬುದು ಸ್ಥಾಪಿತ ಮೌಲ್ಯವಾಗಿ ನಮ್ಮ ಸಮಾಜ ಪರಿಗಣಿಸಿದೆ. ಜನಪದ ಗೀತ ಸಾಹಿತ್ಯದಲ್ಲಿ ಕಂಡು ಬರುವ ತಾಯ್ತನದ ಗ್ರಹಿಕೆಗಳೆಲ್ಲವು ಪರಂಪರಾಗತವಾಗಿ ಮೂಡಿಬಂದ ತಾಯ್ತನದ ವೈಭವೀಕರಣವನ್ನೆ ಪ್ರತಿಷ್ಠಾಪಿಸಿದೆ. ಪುರುಷಕೇಂದ್ರಿತವಾದ ಸಾಮಾಜಿಕ ಮೌಲ್ಯಗಳನ್ನು ಮನಸಾರೆ ಒಪ್ಪಿ ಕೆಲಸಂಧರ್ಭದಲ್ಲಿ ವಿರೋಧಿಸಿಯೂ ಮತ್ತೆ ಅದನ್ನೆ ಒಪ್ಪಿಕೊಂಡು ಬದುಕುತ್ತಿರುವ

ಹೆಣ್ಣಿನ ಸಂಖ್ಯೆ ಕಡಿಮೆ ಏನಿಲ್ಲ. ಜನಪದ ಗೀತ ಸಾಹಿತ್ಯದಲ್ಲಿ ಕಂಡು ಬರುವ ಸ್ತ್ರೀ ಮಾದರಿಗಳು ಪಾರಂಪರಿಕವಾಗಿ ಬಂದಂಥವುಗಳು. ಕೆಲವು ಸಲ ಅವುಗಳನ್ನು ಪ್ರಶ್ನಿಸಿದರೂ ಆದರಿಂದ ಹೊರಬರಲಾರದೆ ನೋವು ಅನುಭವಿಸುತ್ತಿರುವುದು ವಾಸ್ತವ ಸಂಗತಿ. ಜನಪದ ಗೀತ ಸಾಹಿತ್ಯದಲ್ಲಿ ತಾಯ್ತನ ಮೂಡಿಬಂದ ಬಗೆ ಬಹುಮೃದುವಾಗಿದೆ. ತಾಯ್ತನದ ಭಾವ ನಮ್ಮ ಸಮಾಜದ ಹೆಣ್ಣಿನ ಮನಸ್ಸನ್ನು ತಂಪುಗೊಳಿಸಿದೆ. ಹಿಂದಿನಿಂದಲೂ ಸಾಗಿ ಬಂದ ನಮ್ಮ ಪರಂಪರೆ ತಾಯ್ತನವನ್ನು ವೈಭವೀಕರಣದ ಹಿನ್ನಲೆಯಲ್ಲಿ ಕಾಣಿದೆ.

ಬಹುಮಟ್ಟಿಗೆ ತಾಯಿಯನ್ನು ಮಮತಾಮಾಯಿ, ಸಹಿಷ್ಣತೆ, ಕ್ಷಮಯಾಧರಿತ್ರೆ, ಎಂಬ ಗುಣಗಳನ್ನು ಆರೋಪಿಸಿ ಬೆಳೆಸಲಾಗಿದೆ. ಇಲ್ಲಿ ತಾಯಿಗಾಗಲಿ ತಾಯ್ತನಕ್ಕಾಗಲಿ ಬೆಲೆ ಇದ್ದರೂ ಅದು ಪುರುಷ ಪ್ರಧಾನ ಸಮಾಜದ ವ್ಯವಸ್ಥಿತ ಹುನ್ನಾರವೆಂಬುದು ಸತ್ಯ.

ತಾಯ್ತನವೆಂಬ ಬಹುಮಹತ್ವದ ಮೌಲ್ಯವನ್ನು ಕ್ರೌರ್ಯತನದಿಂದ ಕಂಡಿರುವುದು ವಿಪರ್ಯಾಸ. "ಹೆಣ್ಣಿನ ಸ್ವಭಾವ ನಡವಳಿಕೆಗಳೂ ಕೂಡ ಪುರುಷ ಪ್ರಧಾನ ಮೌಲ್ಯಗಳಿಂದ ಪ್ರೇರಿತವಾಗಿದೆ. ಅಡುಗೆ ಮನೆ- ಹೆರಿಗೆ ಮನೆಗಳ ಬಂಧನದಲ್ಲಿಯೇ ಅವಳು ತನ್ನ ಜೀವಿತಾವಧಿಯ ಬಹುಕಾಲವನ್ನು ಕಳೆದಿದ್ದಾಳೆ. "ಅತ್ತೆ- ಮಾವರಿಗಂಜಿ ಸುತ್ತೇಳು ನೆರೆಗಂಜಿ ಮತ್ತೆ ಆಳುವ ದೊರೆಗಂಜಿ ನನ್ನ ಮಗಳೇ ಅತ್ತೆಯ ಮನೆಯೊಳಗೆ ಬಾಳವ್ವ" ಎಂಬ ಉಪದೇಶವೇ ಅವಳ ಬಾಳ ಮಾರ್ಗದರ್ಶಿ. ಇದಕ್ಕೆ ತಪ್ಪಿ ನಡೆದಲ್ಲಿ ಅವಳ ಜೀವನದ ನೆಲೆ ತಪ್ಪುತ್ತಿತ್ತು. ಸಮಾಜದ ಕಣ್ಣಿನಲ್ಲಿ ಆಕೆಗೆ ನಿಕೃಷ್ಟ ಸ್ಥಾನ ದೊರೆಯುತ್ತಿತ್ತು . ಹೆಣ್ಣಿನ ಹಾಡಿನ ಪ್ರದರ್ಶನ ಬಹುತೇಕವಾಗಿ ಬೀಸುವ ಕಲ್ಲಿನ ಮುಂದೆ, ಕುಟ್ಟುವ ಒನಕೆಯ ಜೊತೆಗೆ, ಹೆಚ್ಚೆಂದರೆ ಮದುವೆ ಮುಂಜಿ ಮುಂತಾದ ಶುಭ ಸಂಧರ್ಭಗಳಲ್ಲಿ ನೆರೆದ ಬಳಗದ ಮುಂದೆ ಗಂಡಸರ ಹಾಡುಗಳಂತೆ ಇವರ ಹಾಡುಗಳು ಸಾರ್ವಜನಿಕ ಸಂದರ್ಭಗಳಿಗಲ್ಲ. ಶೀಲ ಪಾತಿವ್ರತ್ಯ ಮುಂತಾದ ಗುಣಗಳನ್ನು ಎತ್ತಿ ಹಿಡಿಯುವ ಗೀತೆ ಕಥೆಗಳದ್ದೇ ಸಂಖ್ಯೆ ಜಾಸ್ತಿ ಈ ಅಂಶವನ್ನು ಶಿಶು ಪ್ರಾಸದಿಂದ ಹಿಡಿದು ಬಲಿದಾನಗಳವರೆಗಿನ ಗೀತೆ-ಕಥೆಗಳಲ್ಲಿ ಕಾಣಬಹುದು . ಈ ಬಗೆಯ ಆದರ್ಶ ಹೆಣ್ಣಿನ ಚಿತ್ರಗಳಲ್ಲಿ ಪುರುಷನ ಶ್ರೇಷ್ಠತೆಯ ಭಾವನೆಯೂ ಹುದುಗಿರುವುದನ್ನು ಕಾಣುತ್ತೇವೆ.

ಅವ್ವ ಅವ್ವ ದೋಸೆ ಹೊಯ್ಯೊ
ಅಪ್ಪ ಅಪ್ಪ ಮೀಸೆ ತಿರುಗ್ಸು

ಎಂಬ ಶಿಶುಗೀತೆ ಇದಕ್ಕೆ ನಿದರ್ಶನ. 'ಗರತಿಯಗಳಲ್ಲಿ ಬಹುಪಾಲು ತ್ರಿಪದಿಗಳು ತಾಯಿ, ಹೆಂಡತಿ, ತಂಗಿ, ಮಗಳು ಇತ್ಯಾದಿ ಸಮಾಜ ಪ್ರತಿಷ್ಠಾಪಿಸುವ ಸಿದ್ಧ ಪಾತ್ರಗಳನ್ನು ಹಾಡು'ಗಳಲ್ಲಂತೂ ಗಂಡನ ಪ್ರೀತಿಗಾಗಿ ಹಾತೊರೆಯುವ ತಾಯ್ತನಕ್ಕಾಗಿ ತುಡಿಯುವ, ಬಂಜೆತನಕ್ಕಾಗಿ ಮರುಗುವ ಒಟ್ಟಾರೆ ಕೌಟುಂಬಿಕ ನೆಲೆಯಲ್ಲಿ ಭಾವನಾತ್ಮಕ ಸಂಭಂಧಗಳನ್ನು ಪ್ರತಿಬಿಂಬಿಸುವ ತ್ರಿಪದಿಗಳನ್ನೇ ಹೆಚ್ಚಾಗಿ ಕಾಣುತ್ತೇವೆ. ಇವು ಕಟ್ಟಿಕೊಡುವಲ್ಲಿ ಸಫಲವಾಗಿವೆ. ಪುರುಷ ಶ್ರೇಷ್ಠತೆಯನ್ನು ಮೆರೆಯುವ ಕೆಲವು ಗೀತೆಗಳು, ಗಾದೆಗಳು , ನಂಬಿಕೆಗಳು ಇನ್ನೂ ಚಲಾವಣೆಯಲ್ಲಿರುವುದು . ಆ ಭಾವನೆ ಎಷ್ಟು ಆಳವಾಗಿ ಜನಪದ ಸಮಾಜದಲ್ಲಿ ಬೇರು ಬಿಟ್ಟಿವೆ ಎಂಬುದನ್ನು ತೋರಿಸುತ್ತ" ಜನಪದ ತಾಯಿಯಂದಿರು ಸ್ಥಾಪಿತ

ಮೌಲ್ಯಕ್ಕೆ ಮಾರು ಹೋಗಿದ್ದಾರೆ, ತಾಯ್ತನವನ್ನು ತಕರಾರಿಲ್ಲದೆ ಒಪ್ಪಿಕೊಂಡಿದ್ದಾರೆ. ಮಕ್ಕಳನ್ನು ಯಾವಾಗ ಎಷ್ಟು ಹೆರಬೇಕು ಎಂಬುದು ಆಕೆಯ ಕೈಯಲ್ಲಿ ಇಲ್ಲ . ಅದನ್ನು ನಿರ್ಧರಿಸುವವನು ಪುರುಷ ಅಥವಾ ಕುಟುಂಬದವರು. ಕುಟುಂಬದಲ್ಲಿ ಪುರುಷರ ಸ್ಥಾನ ಮೇಲು ಎಂಬ ಭಾವನೆ ಹಿಂದಿನಿಂದಲೂ ಬಂದಂಥಹದು. ಗ್ರಹಬಂಧನದಲ್ಲಿಯೇ ಹೆಣ್ಣು ತನ್ನ ಹೆಚ್ಚಿನ ಜೀವನಾವಧಿಯನ್ನು ಕಳೆಯುವಂತೆ ಮಾಡಲಾಯಿತು. 'ಹೆಣ್ಣು ತಿರುಗಿ ಕೆಟ್ಟಳು, ಗಂಡು ಕುಳಿತುಕೆಟ್ಟ' ಎಂಬ ಗಾದೆ ಈ ಹಿನ್ನಲೆಯಲ್ಲೆ ಹುಟ್ಟಿಕೊಂಡಂತಿದೆ.

ಸ್ತ್ರೀಯರು ಪುರುಷನಿಗಾಗಿಯೆ ತನ್ನ ಬದುಕನ್ನು ನಡೆಸಿದರು. ಈಕೆ ತಾಯಿಯಾಗಿ ಅಷ್ಟೇ ಅಲ್ಲ ಅಕ್ಕ -ತಂಗಿ, ಹೆಂಡತಿ, ಪ್ರೇಯಸಿ ಅಷ್ಟೇ ಏಕೆ ಸೂಳೆಯಾಗಿಯೂ ತನ್ನ ಬದುಕನ್ನು ನಿರ್ವಹಿಸುತ್ತಾ ಸಾಗುತ್ತಾಳೆ. ಇಂಥ ಸಂಕೀರ್ಣತೆಯ ಸಂದರ್ಭದಲ್ಲಿ ಬದುಕು ಸಾಗಿಸಿದ ಹೆಣ್ಣು ಸುಖವನ್ನು ಕಂಡಿದ್ದು ತಾಯ್ತನದಲ್ಲೆ ಆಕೆ ಮನಸಾರೆ ಸಂತೋಷಪಟ್ಟಿದ್ದು ತನ್ನ ಕರುಳಕುಡಿಯ ಜೊತೆಗೆನೆ, ಬಂಜೆ ಎಂಬ ಪಟ್ಟ ಹೊತ್ತ ಹೆಣ್ಣಿನ ಸ್ಥಿತಿ ಮಾತ್ರ ಚಿಂತಾಜನಕವಾಗಿದೆ.

ಜನಪದ ಗೀತ ಸಾಹಿತ್ಯ ಸೃಷ್ಟಿಗೊಂಡಿದ್ದು ಮುಖ್ಯವಾಗಿ ಹೆಣ್ಣು ಮಕ್ಕಳಿಂದ ಅದರಲ್ಲಿ ತಾಯಂದಿರಿಂದ. ಗಂಡಿಗೆ ಸರಿಸಮಾನವಾಗಿ ಹೊಲದಲ್ಲಿ ದುಡಿಯುದರಿಂದ ಹಿಡಿದು ಮನೆಗೆಲಸದ ಎಲ್ಲ ಸಂದರ್ಭದಲ್ಲೂ ತಾಯಿಯ ಪಾತ್ರ ಹಿರಿದಾದದ್ದು. ಆಕೆಯ ಎಲ್ಲ ಅನುಭವಗಳು ಜನಪದ ಗೀತ ಸಾಹಿತ್ಯದಲ್ಲಿ ಮಡುಗಟ್ಟಿ ನಿಂತಿವೆ. ಭಾವ ಪ್ರಧಾನವಾಗಿ ಕಂಡು ಬರುವ ಜನಪದ ಗೀತ ಸಾಹಿತ್ಯ ಹೆಣ್ತನ, ತಾಯ್ತನ, ಬಂಜೆತನವನ್ನು ವ್ಯಾಪಕವಾಗಿ ಚಿತ್ರಿಸಿವೆ. ಜನಪದ ಗೀತ ಸಾಹಿತ್ಯದಲ್ಲಿ ತಾಯ್ತನದ ಗ್ರಹಿಕೆಗಳು ಸಿದ್ಧ ಮಾದರಿಯಲ್ಲಿ ಮೂಡದೆ ಬಂದಿವೆ ಕೆಳಗಿನ ಅವುಗಳನ್ನು ನೆಲೆಯಲ್ಲಿ ಗ್ರಹಿಸಬಹುದಾಗಿದೆ. ಅವುಗಳೆಂದರೆ,

೧. ತವರು ಮನೆ

೨. ತಾಯಿಯ ಪ್ರೀತಿ

೩. ಬಸರಿ - ಬಯಕೆ - ಬಾಣಂತಿ

೪. ವಾತ್ಸಲ್ಯ

## 1. ತವರು ಮನೆ

ಜನಪದ ಗೀತ ಸಾಹಿತ್ಯದಲ್ಲಿ ನಮಗೆ ತವರು ಮನೆಯ ಕುರಿತು ಅನೇಕ ಹಾಡುಗಳು ದೊರೆಯುತ್ತವೆ. ನಮ್ಮ ಸಮಾಜದಲ್ಲಿ ಸಹಜವೆಂಬಂತೆ ನೆಲೆಯೂರಿರುವ ಪುರುಷ ಪ್ರಧಾನತೆ. ಹೆಣ್ಣನ್ನು ಗೌಣವಾಗಿ ಕಂಡಿವೆ. ಹೆಣ್ಣು ಮಕ್ಕಳು ಮದುವೆಯ ನಂತರ ತನ್ನ ತಂದೆ- ತಾಯಿಯ ಮನೆಬಿಟ್ಟು ಗಂಡನ ಮನೆ ಸೇರುತ್ತಾರೆ. ಅಲ್ಲಿ ಸು:ಖವಿರಲಿ - ದು:ಖವಿರಲಿ ಬಾಳಲೆಬೇಕು ಎಂಬ ಅನಿವಾರ್ಯತೆಯಿಂದ ತನ್ನ ಬದುಕನ್ನು ಸಾಗಿಸುತ್ತಾಳೆ . ಆಗ ಸಹಜವಾಗಿ ಆಕೆ ಪ್ರತಿದಿನ ತನ್ನ

ತವರನ್ನು ನೆನೆಸುತ್ತಾಳೆ . ಹೆಣ್ಣಿಗೆ ಗಂಡನ ಮನೆಯೇ ತನ್ನಬದುಕಿನ ಅನಿವಾರ್ಯತೆಯ ನೆಲೆ. ತವರಿನಲ್ಲಿ ಹುಟ್ಟಿ ಬೆಳೆದು ಎಲ್ಲರ ಅಕ್ಕರೆಗೆ ಪಾತ್ರಳಾಗಿ ಒಂದು ದಿನ ಸಹಜವಾಗಿ ಆಕೆಗೆ ಗಂಡನ ಮನೆಗೆ ಹೋಗುವ ಸಂಧರ್ಭ ಬಂದಾಗ ತಾನು ತವರಿಗೆ ಎರವು ಆಗಿಬಿಟ್ಟೆ ಎಂಬ ಕಾರಣದಿಂದ ತನ್ನ ದು:ಖವನ್ನು ವ್ಯಕ್ತಪಡಿಸುತ್ತಾಳೆ. ತಾವರೆಯ ಗಿಡ ಹುಟ್ಟಿ ದೇವರಿಗೆ ನೆರಳಾಗುವಂತೆ ಮಗಳು ತಾ ಹುಟ್ಟಿ ಮನೆಗೆ ಎರವಾಗುತ್ತಾಳೆ ಹಡೆದವ್ವಳು ಯಾವ ಮನೆಗೆ ಕೊಡುತ್ತಾಳೆ ಆ ಮನೆಗೆ ಹೆಸರಾಗಲೇಬೇಕು. ಯಾವುದೇ ಕಾರಣಕ್ಕೂ ತವರು ಮನೆಗೆ ಅಪಖ್ಯಾತಿ ತರಲಾರೆ ಕೊಟ್ಟ ಮನೆ ಹೇಗಿದ್ದರೂ ಬದುಕಿ ತೋರಿಸುವೆ ಎಂಬ ಭಾವ ಇಲ್ಲಿ ವ್ಯಕ್ತವಾಗಿದೆ.

ತವರಿನಿಂದ ಬೇರ್ಪಟ್ಟು ಗಂಡನ ಮನೆ ಸೇರಿ ಅಲ್ಲಿ ಬಂದ ಕಷ್ಟ ನಿಭಯಿಸಿ ತವರಿನ ಹೆಸರು ತಂದುಕೊಡುವುದಾಗಿ ಹೇಳುತ್ತಾಳೆ. ತವರಿನಿಂದ ಅಗಲಿದ ಗರತಿಗೆ ಗುರಿ ಒಂದೇ ತವರ ಹೆಸರು ಉಳಿಸಬೇಕು ಕಷ್ಟಗಳನ್ನು ಪ್ರಶ್ನೆಗಳಿಲ್ಲದೆ ನುಂಗಬೇಕು ಎನ್ನುವ ಹೆಣ್ಣು, ಪುರುಷ ಪ್ರಧಾನ ಸಮಾಜದ ಕೈಗೊಂಬೆಯಾಗಿ ಅದರಲ್ಲೆ ಸು:ಖ ಕಾಣುವ ಭಾವ ಆಕೆಯದು. ಇಲ್ಲಿ ತವರು ಮನೆಯನ್ನು ಅಗಲಿದ ದು:ಖವಿದ್ದರೂ ಅದನ್ನು ತೋರುಗೊಡದೆ ಗಂಡನ ಮನೆಯಲ್ಲಿ ಹೆಸರು ಬರುವಂತೆ ಬಾಳುವ ಭರವಸೆ ನೀಡುವ ಮೂಲಕ ತವರು ಮನೆಯನ್ನು ನೆನೆಸಿಕೊಳ್ಳುತ್ತಾಳೆ.

"ಹಾಲುಂಡ ತವರೀಗೆ ಏನೆಂದು ಹಾಡಲೆ
ಹೊಳೆದಂಡಿಲೆರುವ ಕರಕೀಯ ! ಕುಡಿಯಂಗ
ಹಬ್ಬಲೆ ಅವರ ರಸಬಳ್ಳಿ "[೨]

ತವರು ಮನೆ ಬಿಟ್ಟು ಬಂದ ಹೆಣ್ಣಿಗೆ ಸದಾ ತವರೂರಿನ ನೆನಪು ಕಾಡುತ್ತದೆ. ಹಾಲುಂಡು ಬೆಳೆದ ತವರಿಗೆ ಎನೆಂದು ಹಾರೈಕೆ ಕೊಡಲೆಂದು ಯೋಚಿಸಿ ಕರಕೀಯ ಕುಡಿಹಂಗ ತವರಿನ ರಸಬಳ್ಳಿ ಬೆಳೆಯಲಿ ಎಂದು ಹಾರೈಸುತ್ತಾಳೆ. ಇಲ್ಲಿ ಗಂಡನ ಮನೆಯಲ್ಲಿ ಬಾಳುತ್ತಿರುವ ಹೆಣ್ಣಿನ ಮನದಾಳದಲ್ಲಿ ತವರಿನ ಅಭಿವೃದ್ಧಿಯಾಗಲಿ ಎಂಬ ಆಶಯವಿದೆ . ಭಾವನಾತ್ಮಕವಾಗಿ ಮೂಡಿಬಂದ ಇಂಥ ಹಲವು ಹಾಡುಗಳ ನಮಗೆ ಜನಪದ ಸಾಹಿತ್ಯದಲ್ಲಿ ಕಂಡು ಬರುತ್ತವೆ.

ಗಂಡನ ಮನೆಯಲ್ಲಿದ್ದು ತವರಿಗೆ ಹಾರೈಕೆಕೊಡುವ ಹೆಣ್ಣು ತಾನೂ ತವರಿಗೆ ಹೋಗಿ ಬರಬೇಕೆಂದು ಹಂಬಲಿಸುತ್ತಾಳೆ. ಹೆಣ್ಣು ಮಕ್ಕಳಿಗೆ ಎಷ್ಟೇ ವಯಸ್ಸಾದರೂ ತನ್ನ ತವರುಮನೆಯ ಮೇಲೆ ಇದ್ದ ಪ್ರೀತಿ ಮಾತ್ರ ಮಾಸದು. ತವರವರು ಬಡವರಾದರೂ ನಾಕು ದಿನವಾದರೂ ಇದ್ದು ಬರುವೆ ಎಂದು ಕಾತರಿಸುತ್ತಾಳೆ.ರಾಗಿಯ ಒಣರೊಟ್ಟಿ ರಾಜಗೋಳಿಯ ಪಲ್ಯೆ ತವರಲ್ಲಿ ಊಂಡರು ತವರುಮನಿಯಾಗ ನಾಕು ದಿನವಿದ್ದು ಬರುವೇನು ಎಂದು ಹಂಬಲಿಸುತ್ತಾಳೆ. ಇಲ್ಲಿ ತವರಿನವರು ಬಡವರಿದ್ದರೂ ಆಕೆಗೆ ಅವರ ಮೇಲೆ ಇದ್ದ ಪ್ರೀತಿ ಎಷ್ಟು ಎಂಬುದು ಈ ಹಾಡು ವ್ಯಕ್ತಪಡಿಸುತ್ತದೆ. ಅತ್ತೆ ಮನೆ ಸೆರೆವಾಸವಾಗಿ ಕಂಡುಕೊಂಡ ಹೆಣ್ಣು ಶಿಕ್ಷೆ ಅನುಭವಿಸುವ ರೀತಿಯಲ್ಲಿ ಆಕೆ ಜೀವನ ಸಾಗಿಸುತ್ತಿರುತ್ತಾಳೆ. ಏಕೆಂದರೆ ಒಂದು ಮನೆಯ ಸೊಸೆಯಾಗಿ, ತಾಯಿಯಾಗಿ ತೊತ್ತಾಗಿ ದುಡಿಯಬೇಕು. ಅಲ್ಲಿನ ಕಷ್ಟವೆಲ್ಲ ಸಹಿಸಿ

ತವರಿಗೆ ಹೆಸರು ತರಬೇಕು. ಅತ್ತಿಯ ಮನೆಯಲ್ಲಿ ಅರವತ್ತು ಗಂಗಾಳು ಬೆಳಗುವುದಾಗಿ ಹೇಳುತ್ತಾಳೆ. ಗಂಡನ ಮನೆಯ ಕಷ್ಟ ಕಾರ್ಪಣ್ಯಗಳು ಆಕೆಗೆ ಘಾಸಿಗೊಳಿಸಿವೆ. ಅದಕ್ಕಾಗಿ ತವರಿನ ಕುರಿತು ಹೆಣ್ಣಿನ ನೆನೆಕೆಗಳು ಹಸಿಹಸಿಯಾಗಿ ಕಂಡು ಬರುತ್ತದೆ. ತಾನು ಸುಖವನ್ನು ಕಂಡ ತವರು ಮನೆ ಕುರಿತು ಎಲ್ಲಿಲ್ಲದ ಭರವಸೆ, ನೀರಿಕ್ಷೆ, ಸಂತೋಷ ಆಕೆಯ ಎದೆಯಾಳದಲ್ಲಿದೆ. ಗಂಡನ ಮನೆಯಲ್ಲಿ ತನ್ನನ್ನು ಒಂದು ದುಡಿವ ಎತ್ತು ಎಂಬಂತೆ ಕಂಡಿದ್ದಕ್ಕಾಗಿ ಮನದಾಳದಲ್ಲಿ ದು:ಖ ದುಮ್ಮಾನಗಳಿವೆ.

ವಿರೋಧಾಭಾಸವೆಂಬಂತೆ ಕೆಲ ಹಾಡುಗಳಲ್ಲಿ ಹೆಣ್ಣು ಮಕ್ಕಳು ತವರಿನ ಬದಲಾಗಿ ಗಂಡನ ಮನೆಯೇ ಲೇಸು ಎಂಬ ನಿರ್ಧಾರಕ್ಕೂ ಬಂದಿದ್ದಾರೆ.!

"ಗಂಜೀಯ ಕುಡಿದರು ಗಂಡನ ಮನಿಲೇಸ
ಅಂದಣದ ಮ್ಯಾಲ ಚವುರವ ! ಸಾರಿದರ
ಹಂಗೀನ ತವರಮನಿ ಸಾಕ!! " [೩]

ಅನಿವಾರ್ಯ ಕಾರಣದಿಂದ ತವರು ಮನೆಯಲ್ಲಿ ಜೀವನ ಕಳೆಯುವ ಸಂಧರ್ಭ ಬಂದರೆ ತವರಿನಲ್ಲಿ ಪ್ರೀತಿಯಿಂದ ನೋಡಿಕೊಳ್ಳಲಾಗದೆ ಹೋದಾಗ ಸಹಜವಾಗಿ ಹೆಣ್ಣಿಗೆ ಈ ಭಾವ ಬಂದಿರಲುಂಟು. ಇಲ್ಲಿ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಗಂಡನ ಮನೆಬಿಟ್ಟು ಬಂದ ಹೆಣ್ಣಿಗೆ ಬೆಲೆ ಇಲ್ಲ ಎಂಬುದು ಸಾಬೀತಾಗುತ್ತದೆ. ತವರಲ್ಲಿ ಹೆಣ್ಣು ಮಗಳಿಗೆ ರಕ್ಷಣೆ ಇಲ್ಲ. ಏನೇ ಕಷ್ಟ ಬಂದರು ಗಂಡನ ಮನೆಯಲ್ಲಿ ಇರಲು ಇಷ್ಟ ಪಡುತ್ತಾಳೆ. "ಪ್ರೀತಿಯಿರಲಿ ಇಲ್ಲದಿರಲಿ, ಸುಖವಿರಲಿ - ಕಷ್ಟವಿರಲಿ ಅವೆಲ್ಲವನ್ನು ಸಮನಾಗಿ ಕಂಡ ಈ ಸ್ತ್ರೀ ಗಂಡನ ಮನೆಯ ವಿಷವನ್ನು ವಿಷಕಂಠನಂತೆ ನುಂಗಿ ಸಂಸಾರವನ್ನು ಅಮೃತವಾಗಿಸಿದ್ದಾಳೆ.

ಆಸತ್ರ ನನ ಮನೆಯ ಬ್ಯಾಸತ್ರ ನನ ಮನೆಯು
ಕೂಸು ಕಡಿದರೂ ನನ ಮನೆಯು ತವರೂರು
ಏಸು ದಿನದ್ದೂರಮನೆಯು
ಎಂಬ ನಿರ್ಣಯಕ್ಕೆ ಬಂದು ಗಂಡನ ಕುಟುಂಬದಲ್ಲಿ ಒಂದಾಗುವುದಕ್ಕೆ ಪ್ರಯತ್ನಿಸಿದ್ದಾಳೆ. "[೪]
ಕಷ್ಟ- ಸುಖದಲ್ಲಿ ಗಂಡನ ಮನೆಯೆ ಸರಿ ಎನ್ನುತ್ತಾಳೆ.
"ಆಕಳಂಥಾ ಅತ್ತಿ ಗೋಕುಲಂಥಾ ಮಾವ
ಶ್ರೀಕೃಷ್ಣನಂಥ ಪತಿರಾಯ ! ನಿದ್ದರ
ಸಾಕೀದ ತವರ ಮರತೇನ "[೫] !!

ಗಂಡನ ಮನೆಯಲ್ಲಿ ಎಲ್ಲರೂ ಒಳ್ಳೆಯವರಾಗಿದ್ದರೆ ತನಗೆ ತವರಿನ ನೆನಪು ಬರುವುದಿಲ್ಲ ಎಂದು ಹೇಳುತ್ತಲೇ ಮತ್ತೆ ಮತ್ತೆ ತವರನ್ನು ಹಾಡಿ ಹೋಗಳುತ್ತಾಳೆ. ಗಂಡನ ಮನೆಯಲ್ಲಿ ಎಲ್ಲರ ಪ್ರೀತಿ ದೊರೆತು ಕೆಲ ಸಮಯ ತವರನ್ನು ಮರೆತರೂ ಮರೆಯಲಾಗುವುದಿಲ್ಲ .

ಹೀಗೆ ಹೆಣ್ಣು ಮಗಳು ತನ್ನ ತಾಯಿಮನೆಯಾದ ತವರು ಮನೆಯನ್ನು ಜನಪದ ಹಾಡುಗಳಲ್ಲಿ ಯಥೇಚ್ಛವಾಗಿ ಹಾಡಿದ್ದಾಳೆ. ಇದರ ವಿರೋಧಾಭಾಸ ಎಂಬಂತೆ ತವರು ಮನೆಯನ್ನು ಕೊಂಡಾಡಿ ಮತ್ತೆ ಹೇಗಿದ್ದರೂ ಗಂಡನ ಮನೆ ಲೇಸು ಎಂಬ ಭಾವ ವ್ಯಕ್ತಪಡಿಸಿದ್ದಾಳೆ. ಆದರೆ ಬಹುವಾಗಿ ಹೆಣ್ಣು ಸದಾ ತನ್ನ ತವರುಮನೆಯ ಪ್ರೀತಿಗಾಗಿ ಅವರ ಬರುವಿಕೆಗಾಗಿ ಹಾಗೂ ತವರಿಗೆ ಹೋಗಲು ಸದಾ ಕಾತರಿಸುತ್ತಿರುತ್ತಾಳೆ. ಗಂಡನ ಮನೆಯಲ್ಲಿ ಯಾರಾದರೂ ಸಿಟ್ಟು ಮಾಡಿಕೊಂಡರೆ ಅಂಥವರಿಗೆ ಹೆಣ್ಣಾದವಳು ತನ್ನ ತವರಿನ ಬಲ ಕುರಿತು ಹೀಗೆ ಹೇಳುತ್ತಾಳೆ.

"ಸಿರಿಗೌರಿ ಅತ್ತೆಮ್ಮ ಸಿಟ್ಟು ಮಾಡಲಿ ಬ್ಯಾಡ
ಸಿಟ್ಟಿನ ನನ್ನ ತವರವರು ಕೇಳಿದರೆ
ಕೆಟ್ಟಿತ್ತ ನಿನ್ನ ಸಂಸಾರ

ತವರ ಬೆಂಬಲವಿದ್ದರೆ ಮಹಿಳೆಯ ಆತ್ಮಬಲ ಹೆಚ್ಚುತ್ತದೆ. ಆಗವಳು ತನ್ನ ಮೇಲಾಗುವ ದಬ್ಬಾಳಿಕೆಯನ್ನು ತಡೆಯಲು ಯತ್ನಿಸುತ್ತಾಳೆ. ಸ್ವಲ್ಪ ಮಟ್ಟಿನ ಪ್ರತಿರೋಧ ತೋರಲು ಸಮರ್ಥಳಾಗುತ್ತಾಳೆ "[1]
ಹೀಗೆ ಜನಪದ ಗೀತೆಗಳು ತವರಿನ ಕುರಿತು ಹೆಣ್ಣಿನ ಅಂತರಾಳದ ಭಾವವನ್ನು ವ್ಯಕ್ತಪಡಿಸಿವೆ. ಹಾಗೆಯೇ

"ತೊಟ್ಟಿಲ ಹೊತ್ಕೊಂಡು ತವರ ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತೌರೂರ
ತಿಟ್ಟತ್ತಿ ತಿರುಗಿ ನೋಡ್ಯಾಳೋ"[2]

ತನ್ನ ಚೊಚ್ಚಲ ಬಾಣಂತನ ತವರಿನಲ್ಲಿ ಮುಗಿಸುವುದು ವಾಡಿಕೆ. ಮರಳಿ ಗಂಡನ ಮನೆಗೆ ಬರುವಾಗ ತವರಿನವರು ಕೊಟ್ಟ ತೊಟ್ಟಿಲು, ಜೊತೆಗೆ ಕೊಟ್ಟ ಎಮ್ಮೆ, ಮಗುವಿಗೆ ಬೇಕಾದ ವಸ್ತುಗಳೇ ತೆಗೆದುಕೊಂಡು ಮಗುವಿನೊಂದಿಗೆ ಗಂಡನ ಮನೆಗೆ ಬರುವಾಗ ಹೆಣ್ಣಿಗೆ ಹೇಳಲಾಗದ ಸಂಕಟ. ತನ್ನ ತವರಿನಿಂದ ಬೇರೆಯಾಗುತ್ತಿರುವ ಭಾವ ಮತ್ತೆ ಮೂಡಲಾರಂಭಿಸುತ್ತದೆ. ಅದನ್ನು ತಾಯಿಯಾಗಿರುವ ಹೆಣ್ಣೊಬ್ಬಳು ಸಮರ್ಥವಾಗಿ ಚಿತ್ರಿಸಿದ್ದಾಳೆ.

ಹೆಣ್ಣು ಮಕ್ಕಳಿಗೆ ತಂಪಾಗಿ ಕಂಡುಬರುವ ತವರುಮನೆ. ಆಕೆಯ ಭರವಸೆಯ ಬೆಳಕಾಗಿದೆ. ತನಗೆ ನೆಮ್ಮದಿ ತಾಣವಾಗಿದೆ. ತವರಿನಲ್ಲಿ ಆಕೆಗೆ ತಾಯಿಯೇ ಕೇಂದ್ರಬಿಂದು ತವರಿನಲ್ಲಿದ್ದ ತಾಯಿ ತನ್ನ ಬದುಕಿನ ಆಹ್ಲಾದತೆಗೆ ಮೂಲ ಸೆಲೆ, ಕೌಟುಂಬಿಕ ವ್ಯವಸ್ಥೆಯಲ್ಲಿ ತಾಯಿಯಷ್ಟು ಪ್ರೀತಿ, ವಾತ್ಸಲ್ಯ, ಮಮತೆ, ಭದ್ರತೆ ಒದಗಿಸುವ ಜೀವ ಮತ್ತೊಂದಿಲ್ಲ ಎನ್ನುತ್ತಾಳೆ. ಆದರೂ" ನೆತ್ತಿ ನೋಡಿ ಎಣ್ಣೆ ಒತ್ತುವ ತಾಯಮ್ಮನಿದ್ದರೂ ಕೌಟುಂಬಿಕ ವ್ಯವಸ್ಥೆ ಹೆಣ್ಣಿಗೆ ಅಷ್ಟೇನೂ ಸುಖ ಸಂತೋಷಗಳಿಂದ ಕೂಡಿದ್ದಾಗಲಿ, ನೆಮ್ಮದಿಯ ಬದುಕನ್ನು ನೀಡಿದ್ದಾಗಲಿ ಆಗಿರಲಿಲ್ಲ ಎನ್ನುವುದಕ್ಕೆ ಕೆಳಗಿನ ತ್ರಿಪದಿಯನ್ನು ಗಮನಿಸಬಹುದು.
ತಾಯಿಲ್ಲ ತವರಿಗೆ ಹೋಗದಿರು ನನ ಮನವೆ

ನೀರಿಲ್ಲ ಕೆರೆಗೆ ಕರು ಬಂದು - ಹೋಗುವಾಗ
ನೋಡದರ ದುಕಗಳ

ಹೆಣ್ಣಿನ ಬದುಕಿನುದ್ದಕೂ ಆಸರೆಯಾಗಿ ನಿಲ್ಲುವ ತವರು ತಾಯಿಯ ಸಾವಿನಿಂದಾಗಿ ಹೆಣ್ಣಿನ ಕೈತಪ್ಪಿದ ಕರುಣಾಜನಕ ಚಿತ್ರಣ ಈ ತ್ರಿಪದಿಯಲ್ಲಿ ವ್ಯಕ್ತವಾಗಿದೆ . ಬಾಯಾರಿ ಬಂದ ಕರುವಿಗೆ ನೀರಿಲ್ಲದ ಕೆರೆ ಎಷ್ಟರ ಮಟ್ಟಿಗೆ ನಿರಾಸೆಯನ್ನುಂಟು ಮಾಡುತ್ತದೆಯೋ ಹಾಗೆಯೇ ಹೆಣ್ಣಿನ ಹಂಬಲವೂ ಸಹ ಹತಾಶೆಗೊಳಗಾಗುವ ಚಿತ್ರವನ್ನು ಅರ್ಥಪೂರ್ಣವಾದ ಉಪಮೆ ಕಣ್ಮುಂದೆ ನಿಲ್ಲಿಸುತ್ತದೆ "
ಹೆಣ್ಣು ಸದಾ ತನ್ನ ಸುಖ ಸಂತೋಷಗಳನ್ನು ಬದಿಗೊತ್ತಿ ತನ್ನ ಅಂತರಂಗದ ನೂರಾರು ನೋವಿನ ಅಲೆಗಳನ್ನು ಎಬ್ಬಿಸುತ್ತ ಕೆಲಸಲ ಪ್ರಶಾಂತತೆ ಕಾಯುತ್ತ ಜೀವನ ಸಾಗಿಸಿರುವುದು ಸಾಮಾನ್ಯ ಸಂಗತಿಯಾಗಿದೆ. ಕಾರಣಾಂತರಗಳಿಂದ ತಾಯಿ ಅಕಾಲ ಮರಣವಾಗಿ ಹಸುಗೂಸುಗಳನ್ನು ತಬ್ಬಲಿ ಮಾಡಿದಾಗ ಹೆಣ್ಣು ಮಕ್ಕಳು ತನ್ನ ತಾಯಿಗೆ ನೆನೆಸಿಕೊಂಡು ಕಣ್ಣೀರಿಡುತ್ತಾರೆ.

"ಹುಟ್ಟಿಬಂದೇನು ಜಗತಲಿ
ತಾಯಿನೆರಳು ನನಗೆಲ್ಲಿ
ಬಿಟ್ಟು ಹೋದೆಯವ್ವಾ ನನ್ನವ್ವ ಇಲ್ಲಿ
ಯಾರಿಗಿ ಅವ್ವಾ ಎನ್ನಲಿ
ಎಲ್ಲಂತ ನಾನು ಹುಡುಕಲಿ" '

'ತಾಯಿಬೇಕು ಜನುಮಕ ಇಲ್ಲಂದರ ಜೀವ ನರಕ' ಎಂದು ದು:ಖಿಸುತ್ತಾಳೆ.

## 2. ತಾಯಿಯ ಪ್ರೀತಿ

ಜನಪದ ಗೀತೆಯಲ್ಲಿ ಹೆಣ್ಣು ತನ್ನ ತಾಯಿಯ ನೆನೆದು ಆಕೆಯ ವಾತ್ಸಲ್ಯವನ್ನು ಮನಸ್ಸಾರೆ ಹಾಡಿ- ಹೊಗಳಿದ್ದಾಳೆ. ತಾಯಿಯ ಕುರಿತಂತೆ ಅನೇಕ ಜನಪದ ಹಾಡುಗಳು ಸೃಷ್ಟಿಯಾಗಿವೆ. ತಾಯಿಂದ ದೂರವಾದ ಹೆಣ್ಣು ಮಗಳಿಗೆ, ಮಗಳಿಂದ ದೂರವಾದ ತಾಯಿಗೆ ಇಬ್ಬರಿಗೂ ಪರಸ್ಪರದ ನೆನಪು ಸದಾ ಕಾಡುತ್ತಿರುತ್ತದೆ. ತಾಯಿ ಅಕ್ಕರೆಯಲ್ಲಿ ಬೆಳೆದ ಮಗಳು ಗಂಡನ ಮನೆ ಕಷ್ಟದಲ್ಲಿ ಹೆಜ್ಜೆ-ಹೆಜ್ಜೆಗೂ ತಾಯಿಯನ್ನು ನೆನಪಿಸಿಕೊಳ್ಳುತ್ತಾಳೆ. ಕುಟುಂಬ ನೆಲೆಯಲ್ಲಿ ಮಾತ್ರ ಬೆಳೆದ ಹೆಣ್ಣಿಗೆ ತಾಯಿಯೇ ಆತ್ಮೀಯಳು ಗಂಡನ ಮನೆಗೆ ಪಯಣ ಬೆಳೆಸುವ ಸಂದರ್ಭದಲ್ಲಿ ತಾಯಿಯಿಂದ ಅಗಲುವುದು ಆಕೆಗೆ ಬಲು ಕಷ್ಟ.

"ಯಾರ ಇದ್ದರು ನನ್ನ ತಾಯವ್ವನೋಲರ
ಸಾವಿನ ಕೊಳ್ಳಿ ಒಲಿಮ್ಯಾಗ ಇದ್ದರ
ಜ್ಯೋತಿ ನಿನ್ಯಾರ ಹೋಲರ "[10]

ಎನ್ನುವಲ್ಲಿ ತಾಯಿಗೆ ತಾಯಿಯೇ ಸರಿಸಾಟಿ ಎನ್ನುವ ಭಾವ ವ್ಯಕ್ತಪಡಿಸಿದ್ದಾಳೆ.

"ಬ್ಯಾಸಗಿ ದಿವಸಕ ಬೇವಿನ ಮರತಂಪ
ಭೀಮರತಿ ಎಂಬ ಹೊಳಿ ತಂಪು!! ಹಡೆದವ್ವ
ನೀ ತಂಪ ನನ್ನ ತವರೀಗಿ"[೧೦]

"ಕಾಸೀಗಿ ಹೋಗಲಾಕ ಏಸೊಂದು ದಿನ ಬೇಕ
ತಾಸ್ಹೊತ್ತಿನ್ಹಾಗ ತವರೂರ !! ಮನಿಯಾಗ
ಕಾಸಿ ಕುಂತಾಳ ಹಡೆದವ್ವ "[೧೧]

ಹಡೆದ ತಾಯಿಯ ಪರಿಪರಿಯಾಗಿ ನೆನೆಸಿಕೊಳ್ಳುವ ಹೆಣ್ಣು ಆಕೆಯಿಂದ ದೂರುಳಿದು ವೇದನೆ ಪಡುತ್ತಿರುತ್ತಾಳೆ. ದೂರ ಕಾಸಿಗೆ ಹೋಗಿ ಮುಕ್ತಿ ಪಡೆಯುವುದಕ್ಕಿಂತ ತಾಸ್ಹೊತ್ತಿನಲಿ ಹೋಗಬಹುದಾದ ತೌರೂರಲ್ಲಿ ಕಾಶಿ ಸ್ವರೂಪಿಯಾದ ಹಡೆದವ್ವನ ದರ್ಶನದಿಂದಲೆ ತನಗೆ ತನ್ನ ಆತ್ಮಕ್ಕೆ ಹಿತ, ಮುಕ್ತಿ ಎಂದು ಮಾರ್ಮಿಕವಾಗಿ ಹಾಡಿದ್ದಾಳೆ . ತಾಯಿ ಕಾಣದೆ ಬಹು ದಿನಗಳಾದಾಗ ಗಂಡನ ಮನೆಯಲ್ಲಿ ಆಕೆ ಜೀವ ನಿಲ್ಲದು. ತಳಮಳದಲ್ಲಿ ದಿನಗಳನ್ನು ಕಳೆಯುತ್ತ ತಾಯಿಯನ್ನು ಅಗಲಿದ ಕರುವಿನಂತೆ ಹಲಬುತ್ತಾಳೆ.

"ತಾಯಿ ಕಾಣದ ಜೀವ ತಾವೂರಿ ಬಾವೂರಿ
ಭಾಳ ಬಿಸಲಾನ ಅವರೀಯ ! ಹುವಿನ್ಹಾಂಗ
ಬಾಡತೀನಿ ತಾಯಿ ಕರೆದೊಯ್ಯ "[೧೨]

ಇಂಥ ಹಾಡುಗಳಲ್ಲಿ ಹೆಣ್ಣಿನ ಅಸಹಾಯಕ ಪರಿಸ್ಥಿತಿ ಮನಮುಟ್ಟುತ್ತದೆ. ಪುರುಷ ಸಮಾಜದಲ್ಲಿ ಹೆಣ್ಣಿಗೆ ಇದು ಎಂಥ ಅಸಹಾಯಕತೆ! ಮನ ಬಂದಾಗ ತಾಯಿಯನ್ನು ನೋಡಲಾಗದ ಸ್ಥಿತಿ ಹೆಣ್ಣಿನ ಬದುಕಿನ ವಾಸ್ತವ ಚಿತ್ರಣ ದಂಗು ಬಡಿಸುತ್ತದೆ.

ಮದುವೆಯಾದ ದಿನ ತನ್ನ ತಾಯಿಯ ಬಿಟ್ಟು ಬರಲು ಹೆಣ್ಣಿಗೆ ಕಷ್ಟ . ಹೆತ್ತು - ಹೊತ್ತು ಸಾಕಿದ ಮಗಳನ್ನು ಕಳೆದುಕೊಳ್ಳುವ ಸನ್ನಿವೇಶ ತಾಯಿಗೆ ದು:ಖ ತಂದುಕೊಡುತ್ತದೆ. "ಹಡೆದ ತಾಯಿಯನ್ನೆ ಬಿಟ್ಟುಹೊರಡಬೇಕಾದ ಅಸಹ್ಯ ಯಾತನೆಯನ್ನು ಅವಳು ಅನುಭವಿಸಬೇಕು ವ್ಯವಸ್ಥೆಯ ಈ ಪದ್ಧತಿಯನ್ನು ಒಪ್ಪಿದ ತಾಯಿ ಮಗಳು ಇಬ್ಬರೂ ಕಣ್ಣೀರಿನ ಮೂಲಕ ಪ್ರತಿಭಟಿಸಿದ್ದಾರೆ.

ಒಂಬತ್ತು ತಿಂಗಳು ನಿನ ತುಂಬಿಕೊಂಡು ತಿರುಗೇನ
ಹಂಬಲಿಸಿ ನಿನ್ನ ಹಡೆದೇನ ಚಿತ್ತರದ
ಗೊಂಬಿ ನಿನ್ನೊಪ್ಪಿಸಿ ಕೊಡಲ್ಯಾಂಗ

ಹುಟ್ಟೀದೆಣ್ಮಕ್ಕಳು ಮೆಟ್ಟಂಗಳಿವಾಗ
ಹೊಟ್ಟೇಲಿ ಸಾಸುವೆ ತಯ್ದಂತೆ. ಹೆಣ್ಮಕ್ಕಳು

ಹುಟ್ಟಾರದೇಳುಜಲುಮಕ್ಕ

ಈ ಬಗೆಯ ಉದ್ದಾರಕ್ಕೆ ಹೆಣ್ಣನ್ನು ಗಂಡನ ಮನೆಗೆ ಕಳಿಸುವಂತೆ ಪ್ರೇರೇಪಿಸುವ ಮದುವೆ ಪದ್ಧತಿ ಹಾಗೂ ಗಂಡನ ಮನೆಯಲ್ಲಿ ಹೆಣ್ಣನ್ನು ನಡೆಸಿಕೊಂಡ ರೀತಿಗಳೇ ಕಾರಣವಾಗಿವೆ.

ಸುಡುವ ಬೆಂಕೀಗೆ ಎಣ್ಣೀಯ ಕೊಡನೊಯ್ದು
ಕುಂಬಳ ಕಾಯೂಯ್ದು ಕುಡುಗೋಲಿಗೆ ಕೊಟ್ಟಂತೆ
ಎಂಥವರಿಗೆ ಕೊಟ್ಟೆ ಹಡೆದವ್ವ.

ಮದುವೆಯಾಗಿ ಹೋದ ಹೆಣ್ಮಕ್ಕಳಲ್ಲಿ ಸಾಮಾನ್ಯವಾಗಿ ಈ ರೋಧನೆ ಕಂಡು ಬರುತ್ತದೆ. ಹೆಣ್ಣನ್ನು ತಮ್ಮ ಮನೆಯ ಸದಸ್ಯಳಂತೆ ತಿಳಿದುಕೊಳ್ಳುವುದಾಗಲೀ ಗಂಡನ ಮನೆಯಲ್ಲಿ ಸಾಧ್ಯಾವಿರಲಿಲ್ಲ. ಹೆಣ್ಣುಗಳ ಬಗೆಗೆ ಸಮಾಜದಲ್ಲಿ ನಿಕೃಷ್ಟ ಭಾವನೆ ಹಾಗೂ ಸೊಸೆ ಪರ ಮನೆಯಿಂದ ಬಂದ ಸದಸ್ಯೆಯಾಗಿರುವದು. ಇವರೆಡೂ ಕೂಡಿ ಅವಳನ್ನು ಗಂಡನ ಮನೆಯಲ್ಲಿ ಯಾತನೆಗೆ ಗುರಿ ಮಾಡಿದ್ದವು.ತಾಯಿಯ ಉಪದೇಶವನ್ನು ನೆನಪಿನಲ್ಲಿಟ್ಟುಕೊಂಡು ತವರವರ "ಉತ್ತಮರ " ಹೆಸರನ್ನು ತರುವುದಕ್ಕಾಗಿ ಅವಳು ಏನೆಲ್ಲಾ ಕಷ್ಟಪಡಬೇಕು ಎಂಬುದಕ್ಕೆ ಕೊನೆಯಿರಲಿಲ್ಲ."[೧೪] ತಾಯಿ ಮಗಳಿಬ್ಬರೂ ವಿವಾಹ ಎಂಬ ಸಂಸ್ಥೆಯಿಂದ ಯಾತನೆಯನ್ನೆ ಅನುಭವಿಸಿದ್ದಾರೆ . ಮಕ್ಕಳನ್ನು ಹೆರದೆ ಹೋದರ 'ಬಂಜೆ'ಯಾಗಿ ಹೆತ್ತರೆ ತೊತ್ತಿನ ಪ್ರಾಣಿಯಾಗಿ ಕುಟುಂಬದ ನೊಗ ಹೊತ್ತುಕೊಂಡಿರುತ್ತಾಳೆ. ಮದುವೆ ನಂತರ ತವರುಮನೆ ಮತ್ತು ಗಂಡನ ಮನೆ ಎರಡೂ ಕಡೆ ಹೆಣ್ಣು ಮಕ್ಕಳಿಗೆ ನೆಮ್ಮದಿ ದೊರೆಯುವುದಿಲ್ಲ.

ಜನಪದ ಗರತಿಯ ತಾಯಿಯು ಬಗ್ಗೆ ಅಪಾರ ಪ್ರೀತಿ ಮತ್ತು ವ್ಯಾಮೊಹ ಹೆಣ್ಣು ಮಕ್ಕಳು ತವರಿಗೆ ಬರುವುದು ತಾಯಿ ಕಾಣುವ ಹಂಬಲದಿಂದ ತನ್ನ ಹಡೆದವ್ವನನ್ನು ಕಂಡು ತನ್ನ ಆಸರಿಕೆ ಬ್ಯಾಸರಿಕೆಗಳೆಲ್ಲವನ್ನು ಕಳೆದುಕೊಳ್ಳಬೇಕು ಎಂಬ ಆಸೆ ಆಕೆಯದು . ಇಂದಿಗಿಂತಲೂ ಹಿಂದಿನ ಕಾಲದಲ್ಲಿ ಹೆಣ್ಮಕ್ಕಳು ತವರಿಗೆ ಹೋಗುವುದು ಅಪರೂಪವಾಗಿರುತ್ತಿತ್ತು. ಯಾವುದಾದರು ಮದುವೆ ಅಥವಾ ಯಾವುದೇ ದೊಡ್ಡ ಹಬ್ಬ - ಹರಿದಿನಗಳಲ್ಲಿ ಮಾತ್ರ ತವರು ಮನೆಗೆ ಹೋಗಲು ಅವಕಾಶವಿತ್ತು. ಅಂಥ ಅವಕಾಶವನ್ನು ಹೆಣ್ಮಕ್ಕಳು ಸದಾ ಎದುರು ನೋಡುತ್ತಿದ್ದರು, ತಾಯಿದ್ದರೆ ತವರಿಗೆ ಹೋಗುವುದು ಆಕೆಗೆ ಸಂತೋಷ ಕೊಡುವ ಸಂಗತಿಯಾಗಿತ್ತು. ಆದರೆ ತಾಯಿಲ್ಲದ ತವರು ಆಕೆಯ ಪಾಲಿಗೆ ಸಂಕಟವನ್ನೆ ಊಂಟು ಮಾಡುತ್ತಿತ್ತು. ಆದರೆ ತಾಯಿಯನ್ನು ಸದಾ ಕಾಣಬೇಕು ಎಂಬ ಹಂಬಲವಿರುವ ಗರತಿಗೆ ಗೊತ್ತಿದೆ. ತಾನು" ತಾಯಿಯ ರಕ್ತ ಗೋಮಾಂಸಗಳಿಂದಲೇ ನಮ್ಮ ಮೈ ಸಿದ್ಧವಾಗಿರುತ್ತದೆ. ಆಕೆಯ ಮೊಲೆ ಹಾಲು ಕುಡಿದು ಬೆಳೆದಿರುತ್ತೇವೆ. ಆಕೆಯ ತುತ್ತನ್ನುಂಡು ಚೆಲುವಾಗಿರುತ್ತೇವೆ. ಆಕೆ ಮೈದಡವಿ ನಮ್ಮ ಬೆನ್ನಿಗೆ ಭೀಮರಕ್ಷೆ ಇರಿಸಿದ್ದಾಳೆ. ಆಕೆ ಹಸಿವೆ, ನೀರಡಿಕೆ, ಹೇಸಿಕೆ ಮೊದಲಾದವುಗಳನ್ನು ತ್ಯಾಗ ಮಾಡಿದ್ದರಿಂದಲೇ ನಾವು ಒಂದು ವ್ಯಕ್ತಿಯಾಗಿ ನಿಲ್ಲುತ್ತೇವೆ.

ಕಣೆಂಜಲ ಕಾಡಿಗಿ ಬಾಯೆಂಜಲ ವೀಳ್ಯವ
ಯಾರೆಂಜಲುಂಡು ನನ ಮನವೆ ! ಹಡೆದವ್ವ

ಬಾಯೆಂಜಲುಂಡು ಬೆಳೆದೇನ "[೦೫]

ಎಂದ ತಾಯಿಯ ತ್ಯಾಗವನ್ನು ಹೆಣ್ಣು ಕಂಡುಕೊಂಡಿದ್ದಾಳೆ . ಇಲ್ಲಿ ತಾಯಿಯ ಉಪಕಾರಕ್ಕೆ ಕೊನೆ ಇಲ್ಲ. "ಆಕೆ ಸಾಕ್ಷಾತ್ ಗಂಗಾದೇವಿ ! ಆಕೆಯ ನಿಸ್ವಾರ್ಥ ಉಪಕಾರದ ಮಹಾಗಣಿಯೇ ಆಗಿರುವುದರಿಂದ ಆಕೆಯನ್ನು ನೆನೆಸುವುದರಿಂದ ಮಾಸಿದ ತಲೆಯು ಮಡಿಯಾಗುತ್ತದೆ "[೦೬] ಎಂದು ಗರತಿ ಹಾಡಿ ಹರಿಸಿದ್ದಾಳೆ. ಹೀಗೆ ಜನಪದದಲ್ಲಿ ತಾಯಿಗೆ ತನ್ನದೇ ಆದ ಗೌರವಯುತವಾದ ಸ್ಥಾನ ಇರುವುದನ್ನು ಕಾಣಬಹುದಾಗಿದೆ. ಇದು ತಾಯಿಯ ಮೇಲೆ ಇದ್ದ ಜನಪದರ ಪ್ರೀತಿ ಎತ್ತಿ ತೋರಿಸುತ್ತದೆ. ಹಾಗಾಗಿಯೇ ಜನಪದ ಹೆಣ್ಣು ಮಗಳು ತನ್ನ ಹಡೆದ ತಂದೆ- ತಾಯಿಗಳ ಕುರಿತು ಹೀಗೆ ಹಾಡುತ್ತಾಳೆ.

"ಉಂಗುರ ಉಡುದಾರ ಮುರಿದರ ಮಾಡಿಸಬಹುದು
ಮಡದಿ ಸತ್ತರೆ ತರಬಹುದು ಹಡೆದಂಥ
ತಂದೆ ತಾಯೆಲ್ಲಿ ಸಿಕ್ಕಾರು "[೦೭]

ಹೀಗೆ ಪ್ರಶ್ನಿಸಿಕೊಳ್ಳುವವರು ಯಾರೇ ಆದರೂ ಉತ್ತರ ಮಾತ್ರ ಒಂದೇ ಇದೆ. ಅದು ತಾಯಿ ಪ್ರೀತಿ ಎಂದೆಂದಿಗೂ ಶಾಶ್ವತ.

### 3. ಬಸುರಿ-ಬಯಕೆ-ಬಾಣತನ

ಜನಪದ ಗೀತ ಸಾಹಿತ್ಯದಲ್ಲಿ ಹೆಣ್ಣಿನ ವಿವಿಧ ಹಂತಗಳನ್ನು ಭಾವನಾತ್ಮಕವಾಗಿ ಚಿತ್ರಿಸಲಾಗಿದೆ. ಹೆಣ್ಣು ಮಗಳು ದೊಡ್ಡವಳಾದಾಗ, ಮದುವೆ ಬಸುರಿ, ಬಯಕೆ, ಬಾಣಂತನದಂಥ ವಿವಿಧ ಹಂತಗಳಲ್ಲಿ ಆಕೆ ಅನುಭವಿಸುವ ಮನದಾಳದ ಭಾವಗಳನ್ನು ಇಲ್ಲಿ ನೋಡಬಹುದಾಗಿದೆ.

ಮದುವೆಯಾದ ಹೆಣ್ಣಿನಿಂದ ಸಮಾಜ ಹಾಗೂ ಕುಟುಂಬದವರು ಮೊದಲು ಅಪೇಕ್ಷಿಸುವುದು ಕುಲಪುತ್ರನನ್ನು, ಮಕ್ಕಳನ್ನು ಪಡೆದುಕೊಳ್ಳುವುದು ಇಲ್ಲಿ ದಂಪತಿಗಳ ನಿರ್ಧಾರವಾಗಿರುವುದಿಲ್ಲ. ಒಂದರ್ಥದಲ್ಲಿ ಸಮಾಜ ಅವರಿಗೆ ಪರೋಕ್ಷವಾಗಿ ನಿರ್ಭಂದನೆ ಹಾಕುತ್ತದೆ. ಕುಲಪುತ್ರ ಕೊಡಲೇ ಬೇಕು ಕೊಡದಿದ್ದ ಪಕ್ಷದಲ್ಲಿ ಆ ಹೆಣ್ಣಿಗೆ ಹಿನಾಯಕವಾಗಿ ಕಾಣಲಾಗುವುದು.

ಕುಟುಂಬದವರು ಸಮಾಜದವರು ಸ್ತ್ರೀಧರ್ಮ ಎನ್ನುವ ಕ್ರೌರ್ಯತನದಿಂದ ತಾಯಿಯಾಗಲು ಮಾನಸಿಕವಾಗಿ ಸಿದ್ದಗೊಳಿಸುತ್ತಾರೆ. ತಾಯಿಯಾಗುವುದು ಇಲ್ಲಿ ಹೆಣ್ಣಿಗೆ ಸ್ವಇಚ್ಛೆ ಎಂದು ಬಿಂಬಿತವಾಗಿದ್ದರೂ ಆಕೆಗೆ ಇದು ಮಹತ್ವದ ಕರ್ತವ್ಯ ಎಂದೇ ಮನಗಾಣಿಸಲಾಗುತ್ತದೆ.

ಪರಂಪರಾಗತವಾಗಿ ಬಂದ ಈ ಧೋರಣೆಯನ್ನು ಮನಸಾರೆ ಒಪ್ಪಿಕೊಂಡ ಹೆಣ್ಣು ಮದುವೆ ಆದ ಕೂಡಲೆ ಮಗುವಿಗಾಗಿ ಹಾತೊರೆಯುತ್ತಾಳೆ. ತಾನು ಮಕ್ಕಳನ್ನು ಕೊಡದೇ ಹೋದರೆ ಈ

ಸಮಾಜದಲ್ಲಿ ತಾನು ಹಾಸುಂಡು ಬೀಸಿ ಒಗೆದ ಬಾಳೆ ಎಲೆ ಎಂಬುದು ಆಕೆಗೆ ಅಂತರ್ಗತವಾಗಿದ್ದಿದೆ. ಹಾಗಾಗಿ ಮಕ್ಕಳಿಗಾಗಿ ಹಪಹಪಿಸುವುದು ನಮ್ಮ ಸಮಾಜದ ಸಾಮಾನ್ಯ ದೃಶ್ಯ.

ಮಕ್ಕಳಾಗದೇ ಇರುವಾಗ ದಂಪತಿಗಳಲ್ಲಿ ಕೇವಲ ಹೆಣ್ಣಿಗೆ ದೋಷಿಸಲಾಗುತ್ತದೆ. ಬಂಜೆ ಎಂಬ ಪಟ್ಟ ಕಟ್ಟಿ ಆಕೆಗೆ ಹೀನಾಯವಾಗಿ ಕಾಣಲಾಗುತ್ತದೆ. ಮದುವೆಯ ನಂತರ ಹೆಣ್ಣು ಸಹಜವಾಗಿ ಮಗುವಿಗಾಗಿ ಹಾತೊರೆಯುತ್ತಾಳೆ. ಈ ಹಾತೊರೆಯುವಿಕೆ ಜನಪದ ಗೀತೆಗಳಲ್ಲಿ ಸುಂದರವಾಗಿ ವರ್ಣಿತವಾಗಿವೆ.

"ಆಡು ಮಕ್ಕಳ ಕಂಡು ಬೇಡಿತ್ತ ನನ ಜೀವ
ಕೇಳಿದ್ದನೇನ ಶಿವರಾಯ ಹೊಟ್ಯಾಗ
ಮೂಡಿದ್ದನೇನ ಮಗರಾಯ "[೧೮]

ಮದುವೆಯಾದ ಕೆಲದಿನಗಳ ನಂತರ ಹೆಣ್ಣು ಮಕ್ಕಳ ಹೃದಯ ಮಕ್ಕಳಿಗಾಗಿ ಹಾತೊರೆಯುತ್ತದೆ ಅಂಗಳದಲ್ಲಿ ಬೇರೆ ಮಕ್ಕಳು ಆಡುವುದನ್ನು ನೋಡಿ ತನಗೂ ಅಂಥದ್ದೊಂದು ಮಗು ಬೇಕು ಎನ್ನುವ ಭಾವ ಹೆಣ್ಣಿಗೆ ಮೂಡುತ್ತದೆ ಎಂಬುದನ್ನು ಸುಂದರವಾಗಿ ಚಿತ್ರಿಸಿದ್ದಾರೆ. ತನ್ನ ಮನಸಿಚ್ಛೆ ಜೊತೆಗೆ ತನ್ನ ಕುಟುಂಬದವರು ಸಹ ಕುಲಪುತ್ರನ ಆಗಮನಕ್ಕಾಗಿ ಹವಣಿಸುವ ಗೀತೆಯನ್ನು ಇಲ್ಲಿ ನೋಡಬಹುದು.

"ಮಾವೀನ ಮಿಡಿ ತಂದು ಮಾವ ಉಡಿಯಾಗ್ಹಾಕಿ
ಮಾಯಾದ ಮಕ್ಕಳ್ಹಡಿಯೆಂದು ಹಿಗ್ಗೀಲಿಮಾವ
ಬಂದ್ಹರಕಿ ಕೊಡತಾರ "[೧೯]

ಎನ್ನುವಲ್ಲಿ ಕುಟುಂಬದವರು ಸಂತಾನಕ್ಕಾಗಿ ತೀವ್ರತರವಾದ ನಿರೀಕ್ಷೆ ಇಟ್ಟುಕೊಂಡಿದ್ದಾರೆ. ಎಂಬುದನ್ನು ತಿಳಿಸುತ್ತಾಳೆ. ತನ್ನ ಕುಟುಂಬದವರಷ್ಟೇ ಅಲ್ಲ ಸುತ್ತ ಬಳಗವೆಲ್ಲ ಇದೇ ನಿರೀಕ್ಷೆಯಲ್ಲಿರುತ್ತದೆ ಎಂಬುದು ಮರೆಯುವಂತಿಲ್ಲ.

"ಬಸಿರ ಬಯಕೆ ಚಂದ ಹಸಿರು ಕುಪ್ಪಸ ಚಂದ
ನಸುಗೆಂಪಿನವಳ ನಗೆ ಚಂದ ಅಕ್ಕಯ್ಯ
ಬಸುರಾದರೆ ಚಂದ ಬಳಗಕ

ನಾಕು ತಿಂಗಳ ಬಸರ ನಾಕೇಳಿ ನೀ ಕೇಳಿ
ನೀರ ಹೊಳಿ ಕೇಳಿ ನಿಜವಾಗಿ ! ಮನಿಯಾನ
ಮಾವ ಕೇಳಿ ಹೂವ ಮುಡಿಸ್ಯಾರ "[೨೦]

ಹೀಗೆ ಒಬ್ಬ ಹೆಣ್ಣು ತಾಯಿಯಾಗುವ ಸುದ್ದಿ ತಿಳಿದೊಡನೆ ಆಕೆಗೆ ಎಲ್ಲಿಲ್ಲದ ಗೌರವ ಸಿಗುತ್ತದೆ.

ಬಸಿರಾಗುವ ಬಯಕೆ ಎಲ್ಲರಿಗೂ ಸಂತೋಷ ಕೊಡುವ ಸುದ್ದಿ . ಬಸಿರಾದ ಸುದ್ದಿ ತಿಳಿದೊಡನೆ ಬಂಧು - ಬಾಂಧವರೆಲ್ಲ ಹಾರೈಸುತ್ತಾರೆ.

"ಸಂತೋಷ ಸುದ್ದಿ, ಸಂತ್ಯಾಗ ಕೇಳೀನಿ
ಕೆಂಚಿ ನನ ತಂಗಿ ಬಸರಂತ ! ಹೇಳ್ಯಾನ
ಹಂಪಿಸಾಗರದ ಬಣಜೀಗ " [೨೦]

ತಾಯಿಯಾಗುವ ಸುದ್ದಿ ಅದು ಸಂತೋಷದ ಸುದ್ದಿ, ಸಮಾಜ, ಬಂಧು - ಬಳಗ, ಕುಟುಂಬ ಎಲ್ಲರೂ ಕಾತರದಿಂದ ಕಾಯುವ ಸುದ್ದಿ ಎಂದೇ ಹೇಳಬಹುದು. ತಾಯಾಗುವ ಆಸೆ, ಮಕ್ಕಳ ಬಯಕೆ ಎಷ್ಟು ತೀವ್ರವಾಗಿರುತ್ತವೆಂದರೆ ಅದಕ್ಕಾಗಿ ದೇವರಲ್ಲಿ ಮೊರೆ ಹೋಗಿ ನಾನಾ ಹೆರಕೆಗಳನ್ನು ಕೊಡುವುದಾಗಿ ಬೇಡಿಕೊಳ್ಳಲಾಗುತ್ತದೆ. ತನಗಾಗಿ ಕೆಲಸಲ ತನ್ನವರಿಗಾಗಿ ದೇವರಲ್ಲಿ ಹರಕೆ ಹೊತ್ತುಕೊಳ್ಳಲಾಗುತ್ತದೆ.

" ಕೂಡಲ ಸಂಗಯ್ಯ ನೀಡು ಮಕ್ಕಳ ನನಗ
ನನಗಲ್ಲ ನನ್ನ ಗೆಳೆತೀಗೆ ! ಕೊಟ್ಟರ
ಬಾಗಿಲಕ ಹೊನ್ನ ಬಡಿಸೇನ !!"[೨೧]

ತನ್ನ ಗೆಳತಿಗೆ ಮಕ್ಕಳಾಗಲಿ ಎಂದು ಕೂಡಲಸಂಗಯ್ಯನಲ್ಲಿ ಮೊರೆ ಇಡುವುದನ್ನು ಈ ತ್ರಿಪದಿಯಲ್ಲಿ ಕಾಣಬಹುದಾಗಿದೆ. ಕುಟುಂಬ, ಬಳಗ, ಸಮಾಜದವರೆಗೆ ಹೆಣ್ಣೊಬ್ಬಳು ತಾಯಿಯಾಗುವ ವಿಷಯ ಸಂತೋಷ ಕೊಡುವಂಥದ್ದು . ಅದನ್ನು ಹೆಣ್ಣು ಮಕ್ಕಳು ಜನಪದ ಹಾಡುಗಳ ಮೂಲಕ ಸುಂದರವಾಗಿ ಚಿತ್ರಿಸಿದ್ದಾರೆ. ಸಮಾಜದಲ್ಲಿ ಹೆಣ್ಣು ತಾಯಿಯಾಗುವ ಬಯಕೆ ತೀವ್ರವಾಗಿದೆ ಎಂಬುದು ಗಮನಿಸಬಹುದು. ಹೆಣ್ಣು ತಾಯಿಯಾಗಿ ಪರಿಪೂರ್ಣತೆ ಪಡೆದುಕೊಳ್ಳುವುದರ ಮೂಲಕ ತಾ ಬದಕುವ ಸಮಾಜದಲ್ಲಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತಾಳೆ. ಈ ಪ್ರಾಮುಖ್ಯತೆಯೇ ಆಕೆ ತಾಯಿಯಾಗಲೇ ಬೇಕು ಎಂಬ ಒತ್ತಡ ಹೇರುತ್ತದೆ.! ಈ ಒತ್ತಡ ಆಕೆ ಎದುರಿಸುವ ನಾನಾ ಸಂಕೀರ್ಣ ಸಮಸ್ಯೆಗಳಿಗೆ ಮೂಲ ಕಾರಣವೆನ್ನಬಹುದು. ಮದುವೆಯಾದನಂತರ ದಾಂಪತ್ಯದ ಪ್ರತೀಕವಾಗಿ ಹೆಣ್ಣು ತಾಯಿಯಾಗುವ ಸಂಧರ್ಭ ಬಂದೊದಗುತ್ತದೆ. ಹೊಟ್ಟೆಯಲ್ಲಿ ಮಗು ಮೂಡಿದಾಗ ದೈಹಿಕವಾಗಿ ಮಾನಸಿಕವಾಗಿ ಬದಲಾವಣೆ ಹೊಂದುವ ಹೆಣ್ಣು ನಾನಾ ರೀತಿಯ ಬಯಕೆಗಳು ಆಕೆಯನ್ನು ಕಾಡುತ್ತವೆ. ಆಕೆ ಇಷ್ಟಪಡುವ ಆಹಾರವನ್ನು ನೀಡಲಾಗುತ್ತದೆ. ಅಷ್ಟೇ ಅಲ್ಲ ಆಕೆಯನ್ನು ಸಂತೋಷದಿಂದ ನೋಡಿಕೊಳ್ಳಬೇಕೆಂಬ ರೂಢಿ ಇದೆ.ಅದರಲ್ಲಿಯೂ ಚೊಚ್ಚಲ ಬಸುರಿಗೆ ವಿಶೇಷವಾಗಿ ಆರೈಕೆ ಮಾಡಲಾಗುತ್ತದೆ. ನಮ್ಮ ಸಮಾಜದಲ್ಲಿ ಮಹಿಳೆಯೊಬ್ಬಳು ಮಾನ್ಯಳಾಗುವುದು ಆಕೆ ಹೆತ್ತು ಕೊಡುವ ಮಕ್ಕಳ ಮೂಲಕ ಹೆಣ್ಣು ಹುಟ್ಟಿನಿಂದಲೇ ಸಮಾಜದಲ್ಲಾಗಲೀ ಕುಟುಂಬದಲ್ಲಾಗಲೀ ಮಾನ್ಯತೆ ಪಡೆದಿಲ್ಲ. ಕೇವಲ ಗರ್ಭಾಶಯ ಕಾರಣವಾಗಿ ಮಾನ್ಯತೆ ಪಡೆದುಕೊಂಡ ಹೆಣ್ಣು ಸಹಜವಾಗಿ ಬಸುರಿಯಾದ ಹೆಣ್ಣಿಗೆ ಮಾತ್ರ ಆರೈಕೆಯಿಂದ ನೋಡಿಕೊಳ್ಳುವುದು ವಾಡಿಕೆಯಾಗಿದೆ.

ಸಹಜ ಎಂಬಂತೆ ಪ್ರಾಕೃತಿಕವಾಗಿ ತಾಯಿಯಾಗಲಿರುವ ಹೆಣ್ಣಿನ ದೇಹ ಮತ್ತು ಮನಸ್ಸು ಬದಲಾವಣೆಗೆ ಒಳಗಾಗುವುದು ನಿಜಸಂಗತಿ.ಮಗು ಗರ್ಭದಲ್ಲಿ ಮೂಡಿದ ದಿನದಿಂದ ಅದರ

ಜನನದವರೆಗೆ ವಿವಿಧ ರೀತಿಯ ಬಯಕೆಗಳು ಕಾಡುತ್ತವೆ. " ಹೆಣ್ಣಿಗೆ ತಾಯಿಯಾಗಬೇಕೆಂಬ ಬಯಕೆ ಸ್ವಾಭಾವಿಕವೇ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಮೌಲ್ಯ ಜಾರಿಯಲ್ಲಿದ್ದ ಕಾಲದಲ್ಲಿ ಗಂಡು ಮಗುವನ್ನು ಪಡೆಯುವುದೇ ಅವಳ ಪರಮ ಸೌಭಾಗ್ಯವಾಗಿತ್ತು. ವೀರಪತ್ನಿ, ವೀರಮಾತೆ ಎಂದು ಕರೆಸಿಕೊಳ್ಳಲು ಹೆಣ್ಣಿಗೆ ಅಪ್ಯಾಯಮಾನವಾಗಿತ್ತು. (ಗದಾಯುದ್ಧ - ರನ್ನ ) ಪ್ರಾಚೀನ ಕಾಲದಲ್ಲಿ ವೀರ ಮಕ್ಕಳನ್ನು ಪಡೆಯುವುದಕ್ಕಾಗಿ ಅನೇಕ ವ್ರತಾದಿಗಳನ್ನು ಪಡೆದುಕೊಂಡಳು (ಪಂಪಭಾರತ) ಗರ್ಭಿಣಿ ಸ್ತ್ರೀಯ ಬಯಕೆಗಳು ವಿಚಿತ್ರವಾಗಿರುತ್ತವೆ. ಯಶಸ್ವತಿದೇವಿಯು ಭರತನಿಗೆ ಗರ್ಭಧರಿಸಿದಾಗ ಷಟ್ಖಂಡ. ಕ್ಷೇತ್ರದ ಮಣ್ಣನ್ನು ರುಚಿ ನೋಡುವ ಬಯಕೆಯಾಯಿತಂತೆ (೮ - ೩೨ ವಚನ ) ಅರ್ಜುನನಿಗೆ ಗರ್ಭಿಣಿಯಾದಾಗ ಕುಂತಿಗೆ ಹೊಳೆಯುವ ಖಡ್ಗದಲ್ಲಿ ಮುಖ ನೋಡಿಕೊಳ್ಳಬೇಕೆಂಬ ಆಸೆಯಾಯಿತಂತೆ "[23] ಹೀಗೆ ಬಸುರಿಯ ಬಯಕೆ ಕುರಿತಂತೆ ಪ್ರಾಚೀನ ಕಾಲದಿಂದಲೂ ನಂಬಿಕೆಗಳಿವೆ. ಅವುಗಳನ್ನು ಈಡೇರಿಸಲು ಪ್ರಯತ್ನ ಪಡುವುದು ನಿಜ.

ಬಸುರಿಯ ಬಯಕೆ ಕುರಿತಂತೆ ' ಮಲ್ಲಿಗೆ ದಂಡೆ 'ಕೃತಿಯ ಹಾಡಿನಲ್ಲಿ ವಿವಿಧ ರೀತಿಯ ತಿನಿಸುಗಳ ಒಂದು ಪಟ್ಟಿಯೇ ಇದೆ. ಅವುಗಳೆಂದರೆ ಕಸಕಸಿ, ಖೊಬ್ಬರಿ, ಜಿಲೇಬಿ, ಹೂರಣಗಡಬು, ಬೆಲ್ಲ ಬಾಲೆಹಣ್ಣು, ಖಬ್ಬು, ಪರಡಿ, ಸವತೆಬೀಜದ ಪಾಯಸ, ತುಪ್ಪ, ಎಳ್ಳು, ಹಚ್ಚಿದ ರೊಟ್ಟಿ, ಡಣ್ಣಿಬದನೆಕಾಯಿ ಪಲ್ಯ, ಮೊಸರು, ಅನ್ನ ಮುಂತಾದವುಗಳು ಬಸುರಿ ಹೆಣ್ಣು ಮಗಳ ಬಂಕಿ (ಬಯಕೆ )ಬಹಳ ವಿಚಿತ್ರವಾಗಿದೆ ಎಂಬುದು ಎಲ್ಲರೂ ಒಪ್ಪುವಂತ ಮಾತು. ಬಯಕೆಯ ಕುರಿತಂತೆ ಜನಪದ ಗೀತೆ ಹೀಗೆ ಮೂಡಿ ಬಂದಿದೆ.

"ಕುಂತರ ಆಕಡಕಿ ನಿಂತರ ತೂಕಡಕಿ
ತಾಳಲಾರೆನೆ ತಾಯಿ ತೋಳಾರೆ ತಾರ
ಮಂಚದ ಒಪ್ಪತ ಹಾಸೀಗಿ ಮಾಡ
ಮಂಚಕ ಎನ್ನ ಎಳದ್ಹಾಕ ತಾಯೀ!
ಬಂಕಿ ಕಾಡತಾವ " [೨೪]

ಎಂದು ತನ್ನ ಸ್ಥಿತಿ ತಿಳಿಸುತ್ತಾಳೆ. ಬಸುರಿಯಾದ ಹೆಣ್ಣು ಮಗಳ ತನ್ನ ಒಡಲಿನಲ್ಲಿ ಮಗುವನ್ನು ಒಂಬತ್ತು ತಿಂಗಳು ಹೊತ್ತುಕೊಂಡು ಹತ್ತಾರು ಬಯಕೆಗಳನ್ನು ಇಟ್ಟುಕೊಂಡು ತನ್ನ ಮಗುವಿನ ಆಗಮನಕ್ಕಾಗಿ ಹಾತೊರೆಯುತ್ತಾಳೆ. ಜನಪದ ಗೀತೆಗಳಲ್ಲಿ ಹೆಣ್ಣು ಮಕ್ಕಳ ಬಯಕೆಯ ಕುರಿತು ಹಾಡುಗಳು ಸುಂದರವಾಗಿ ಮೂಡಿ ಬಂದಿವೆ. ಒಂದೊಂದು ತಿಂಗಳು ದಾಟುತ್ತಿದ್ದಂತೆ ಒಂದೊಂದು ರೀತಿಯ ಬದಲಾವಣೆ ಹೊಂದುತ್ತಿರುವ ತನ್ನ ಶರೀರದೊಂದಿಗೆ ತನ್ನ ಮನಸ್ಸಿನ ವ್ಯಾಕುಲತೆಯನ್ನು ಹಾಡುಗಳಲ್ಲಿ ವ್ಯಕ್ತವಾಗಿದೆ .

"ತನ್ನ ಮನೀಗಿ ತಾ ಬಂದಾಳೆಲ್ಲಮ್ಮ ರಾಮು ರಾಮ
ಒಂದ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮುರಾಮ
ಮೂಡಲ ಹರಿಯ ಏ ಎಳನೀರ ರಾಮು ರಾಮ

ಎರಡ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಮೂರ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಕಡ್ಡಿಯ ಬಳಿಯ ಏ ತಿಳಿನೀರ ರಾಮು ರಾಮ

ನಾಕ ದಿನಬಂದು ನಾಕ ತಿಂಗಳನಾಗಿ ರಾಮು ರಾಮ

ನಾಕ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಕಾಕಿಯ ಹಣ್ಣ ಏ ಕೈಯ ತುಂಬೆ ರಾಮು ರಾಮ

ಐದು ದಿನಬಂದು ಐದು ತಿಂಗಳನಾಗೆ ರಾಮು ರಾಮ

ಐದ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಕೊಯ್ದು ಮಲ್ಲೀಗಿ ಏ ನೆನಿದಂಡಿ ರಾಮು ರಾಮ

ಆರ ದಿನಂಬಾದು ಆರ ತಿಂಗಳಿನಾಗೆ ರಾಮು ರಾಮ

ಆರ್ರಾಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಹಾರುಕ್ಕಿನ ಬಾನ ಏ ಕೆನಿಮೊಸರೇ ರಾಮು ರಾಮ

ಏಳ ದಿನಂಬದು ಏಳ ತಿಂಗಳನಾಗೆ ರಾಮು ರಾಮ

ಏಳ್ರಾಗ ಎಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಹೇಳಿಕಿ ಪತ್ತಲ ಹಸರ ಕುಬಸ ರಾಮು ರಾಮ

ಎಂಟು ದಿನಂಬದು ಎಂಟು ತಿಂಗಳನಾಗೆ ರಾಮು ರಾಮ

ಎಂಟ್ರಗೆಲ್ಲಮ್ಮ ಏನೇನ ಬಗಸ್ಯಾಳೆ ರಾಮು ರಾಮ

ಕಂಠಲೇರಕ್ಕಿ ಏಕೊಡ ತುಪ್ಪ ರಾಮು ರಾಮ

ಒಂಬತ್ತು ತಿಂಗಳಿಗಿ ತುಂಬ್ಯಾವೆ ನವಮಾಸ ರಾಮು ರಾಮ "[೨೫]

ಹೀಗೆ ಒಂದೊಂದು ದಿನಗಳಲ್ಲಿ ಒಂದೊಂದು ತೆರನಾದ ಬಯಕೆಗಳು ಬಸುರಿ ಹೆಣ್ಣು ಮಕ್ಕಳಿಗೆ ಕಾಡುತ್ತವೆ. ಈ ಹಿನ್ನಲೆಯಲ್ಲಿಯೇ ಗರ್ಭವತಿಯಾದ ಹೆಣ್ಣು ಮಕ್ಕಳಿಗೆ ವಿವಿಧ ಆಚರಣೆಗಳನ್ನು ಮಾಡಲಾಗುತ್ತದೆ.

ಅವುಗಳೆಂದರೆ ಹಣ್ಣು ತರುವುದು, ಬಂಕಿ ಊಟ ತರುವುದು , ಕುಪ್ಪಸತೊಡಿಸುವುದು ಹೀಗೆ ಮುಂತಾದ ಆಚರಣೆಗಳನ್ನು ಮಾಡಲಾಗುತ್ತದೆ.

" ಬಂಗಾರ ಬತ್ತಿಯೊತ್ತಿ , ದುಂಡ ಕಂಕಣವೊತ್ತಿ
ಗೊಂಡೇವು ಒತ್ತಿ ಮಲಗ್ಯಾಳ ! ನನ ತಂಗಿ
ದಂಡನಾಳವನ ಬಂಕೀಲಿ !! "[೨೬]

ಬಂಕಿ (ಬಯಕೆ ) ಕಾಡುವ ಹೆಣ್ಣು ಮಗಳು ಯಾವುದರಲ್ಲೂ ಮನಸಿಲ್ಲದೇ ನಿತ್ರಾಣವಾಗಿ ಮಲಗಿರುವುದನ್ನು ಈ ಹಾಡಿನಲ್ಲಿ ನೈಜವಾಗಿ ಬಿಂಬಿಸಲಾಗಿದೆ. ಬಸುರಿ ಹೆಣ್ಣಿನ ಸಹಜ ಬಯಕೆಯನ್ನು ವಿಶೇಷವಾಗಿ ಕಂಡ ನಮ್ಮ ಜನಪದ ಹೆಣ್ಣು ಮಕ್ಕಳು ಅದನ್ನು ವಾಸ್ತವ ನಿಟ್ಟಿನಲ್ಲಿ

ವ್ಯಕ್ತಪಡಿಸಿದ್ದಾರೆ. ಪರಂಪರಾಗತವಾಗಿ ಬೆಳೆದು ಬಂದ ತಾಯ್ತನದ ಮಾರ್ಗವನ್ನು ಮನಸ್ಸಾರೆ ಹಿಗ್ಗಿನಿಂದ ಬರಮಾಡಿಕೊಂಡಿದ್ದಾರೆ. ಇದೆಲ್ಲದಕ್ಕೂ ಮುಖ್ಯ ಕಾರಣ ತಾಯ್ತನದ ಬಯಕೆ ಆ ಬಯಕೆಯ ಹಿನ್ನಲೆಯಲ್ಲಿ ಹೆಣ್ಣಿನ ಪ್ರಾಮುಖ್ಯತೆ ಪಡೆಯುವ ಈ ಹಂತ ಎಲ್ಲ ಹೆಣ್ಣು ಮಕ್ಕಳ ಅಭಿಲಾಶೆಯೇ ಆಗಿದೆ.

ಗರ್ಭಧರಿಸುವ ಒಂದು ರೀತಿಯಲ್ಲಿ ಮನುಕುಲದ ಅಭಿವೃದ್ಧಿಯ ಸಂಕೇತ ಮಾನವನ ಪಳುವುಳಿಕೆ ಮುಂದುವರೆಯುವುದು ತಾಯಿಯ ಗರ್ಭಾಶಯದ ಮೂಲಕವೆ. ಮಾನವ ಜನಾಂಗದ ವಿಕಾಸದ ಹಿನ್ನೆಲೆಯಲ್ಲಿ ನೋಡುವುದಾದಲೆ ಹೆಣ್ಣಿನ ಗರ್ಭಾಶಯ ಬಹು ಮಹತ್ವ ಪಡೆದುಕೊಂಡಿದೆ. ಅಷ್ಟೇ ಅಲ್ಲ ಹೆಣ್ಣು ಗರ್ಭಾವತಿಯಾಗುವುದು ಒಂದು ನೆಲೆಯಲ್ಲಿ ಬಹು ಸಂಕೀರ್ಣಾವಸ್ಥೆ ಎನ್ನಬಹುದು. ಏಕೆಂದರೆ ಈ ಅವಧಿಯಲ್ಲಿ ಆಕೆಯ ದೇಹ ಮತ್ತು ಮನಸ್ಸು ಎರಡೂ ಬದಲಾವಣೆ ಹಂತದಲ್ಲಿರುತ್ತವೆ. ಹೀಗಾಗಿ ಆಕೆಗೆ ಈ ಬಯಕೆಗಳು ತೀರ ಸಹಜ. ಬಸಿರಾಗಿ ಅದು ಬೆಳೆದು ಜನನವಾಗುವವರೆಗೆ ಹೆಣ್ಣು ಅನೇಕ ರೀತಿಯ ಭಾವನಾತ್ಮಕ ವ್ಯಾಕುಲತೆಗೆ ಒಳಗಾಗುತ್ತಾಳೆ. ಇದಕ್ಕೆ ಕಾರಣ ವೈಜ್ಞಾನಿಕ ನೆಲೆಯಲ್ಲಿ ಹೇಳಬೇಕಾದರೆ ಗರ್ಭಧರಿಸಿದ ಹೆಣ್ಣುಮಕ್ಕಳಲ್ಲಿ ದೈಹಿಕ ಬದಲಾವಣೆಗಲಾವುವೆಂದರೆ ತಿಂಗಳ ಮುಟ್ಟು ನಿಲ್ಲುವುದು. ಸ್ತನಗಳ ಬದಲಾವಣೆ, ವಾಕರಿಕೆ, ವಾಂತಿ ಅತಿಮೂತ್ರ, ಮಲಬದ್ಧತೆ, ನಾಲಗೆ ರುಚಿ ಬದಲಾವಣೆ, ಚರ್ಮದ ಬಣ್ಣ ಬದಲಾಗುವುದು ಹೀಗೆ ಅನೇಕ ಬದಲಾವಣೆಗೆ ಗುರಿಯಾಗಬೇಕಾಗುತ್ತದೆ. ಈ ಕಾರಣವಾಗಿ ಬಸುರಿ ಮಹಿಳೆಯ ಬಯಕೆಗಳು ಸಹಜವಾಗಿ ರುತ್ತವೆ. ಅದನ್ನು ಜನಪದ ಹಾಡುಗಳಲ್ಲಿ ನಮ್ಮ ಹೆಣ್ಣು ಮಕ್ಕಳು ಸುಂದರವಾಗಿ ಚಿತ್ರಿಸಿದ್ದಾರೆ.

ಹೆಣ್ಣು ಮಕ್ಕಳು ಬಸುರಿ ಬಯಕೆಯ ಹಂತ ದಾಟಿದ ಮೇಲೆ ಬಾಣತನದ ಹಂತ ತಲುಪುತ್ತಾಳೆ. ಇದು ಹೆಣ್ಣಿನ ಜೀವನದಲ್ಲಿ ಸಂದಿಗ್ಧತೆಯ ಸಮಯ ಬಸಿರಾದ ಹೆಣ್ಣು ಒಂದು ದಿನ ಮಗುವನ್ನು ಹೆರಲೇಬೇಕು. ಪ್ರಸವದ ಸಮಯ ಹೆಣ್ಣಿನ ಜೀವನದ ಸವಾಲಿನ ಸಂದರ್ಭ 'ಹೆತ್ಯೋ ಸತ್ಯೋ ' ಎಂಬುದು ಬಾಣತನದ ದಾರುಣತೆಯ ಉದ್ಗಾರವೇ ಆಗಿದೆ.ಜನಪದ ಗೀತೆಗಳಲ್ಲಿ ಬಾಣತನಕ್ಕೆ ಸಂಬಂಧಿಸಿದಂತೆ ಹಲವು ಗೀತೆಗಳನ್ನು ಕಾಣಬಹುದಾಗಿದೆ.ಏಕೆಂದರೆ ಹೆರುವಾಗಿ ನೋವು ತಿನ್ನುವ ಹೆಣ್ಣು ತಾನು ಹೆತ್ತ ಮಗುವ ಕಂಡು ಇಂಥ ಮುತ್ತುಗಳ ಎಷ್ಟು ಬೇಕಾದರೂ ಹಡೆದೇನು ಎಂದು ಸಂತೋಷ ಪಡುತ್ತಾಳೆ. 'ಹಡಿತು ಮರಿತು' ಎನ್ನುವ ನಾನ್ನುಡಿಯೇ ಇದಕ್ಕೆ ಸಾಕ್ಷೀ. " ಜನಪದ ಗರತಿಯರ ಬಸಿರು ಬಾಣಂತಿತನ, ಮಕ್ಕಳ ಪೋಷಣೆ, ವಾತ್ಸಲ್ಯ ವಿಶ್ವಾಸ ಮುಂತಾದ ಪ್ರಸಂಗಗಳನ್ನು ಕುರಿತು ನೂರಾರು ಮುಕ್ತಕಗಳು ಪ್ರಕಟವಾಗಿವೆ. ಇವುಗಳ ಮುಖಾಂತರ ಜನಪದ ತಾಯಿಯ ಭೂಕೈಲಾಸವನ್ನು ಕಾಣಬಹುದು. ತಮ್ಮ ಮಕ್ಕಳು ಜಗತ್ತಿನ ಯಾರಿಗೂ ಕಡಿಮೆಯಿಲ್ಲ. ಎಂಬ ಅವರ ಅಪಾರ ಹೆಮ್ಮೆ ಅಭಿಮಾನಗಳನ್ನು ಗುರುತಿಸಬಹುದು. ಒಂದೊಂದು ಉತ್ತಮ ತ್ರಿಪದಿಯೂ ಜನಪದ ಭಾವಗೀತೆಯಾಗಿರುವುದು ಇನ್ನೊಂದು ವೈಶಿಷ್ಟೇ. ಇಂಥ ಗೀತೆಗಳನ್ನು ಸೂಕ್ತ ಜಾನಪದೀಯ ಆವರಣ ಹಾಗೂ ಜನಪದ ಜೀವನದ ಘಟನೆಗಳ ಹಿನ್ನಲೆಯಲ್ಲಿಟ್ಟು ಪರ್ಯಾಲೋಚಿಸಿದರೆ , ನಮ್ಮ ಜಾನಪದರ ಸಂಸ್ಕೃತಿ ಜಗತ್ತಿನ ಇಣುಕು ನೋಟವನ್ನು ಕಂಡುಕೊಳ್ಳಬಹುದು" ೨೭

ಅದಕ್ಕಾಗಿ ಬಸುರಿ ಬಾಣತನಕ್ಕೆ ಸಂಬಂಧಿಸಿದ ಗೀತೆಗಳು ಸ್ತ್ರೀ ಮನದಾಳದ ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನದ ಚಿತ್ರಣವನ್ನು ಗ್ರಹಿಸಬಹುದಾಗಿದೆ . ಬಾಣತನದ ಕುರಿತು ಹೆಣ್ಣಿನ ಸ್ಥಿತಿ ಮೌಲ್ಯವು ಸುಂದರವಾಗಿ ಮೂಡಿ ಬಂದಿವೆ.

"ಕಂದ ಹುಟ್ಟುವಾಗ ಕುಂದ್ಯಾವಕ್ಕನ ಮಾರಿ
ಕಂದ ಚಂಡಾಡಿ ಬರುವಾಗ ! ಆ ಮಾರಿ
ಕುಂದಲ್ಲರಳಾಗಿ ಹೊಳದಾವ "[೨೮]

ಹೀಗೆ ಹೆಣ್ಣು ಮಕ್ಕಳು ಮಕ್ಕಳನ್ನು ಹೆರುವಾಗಿನ ನೋವು - ಯಾತನೆಯನ್ನು ಮಗುವನ್ನು ಕಂಡು ಮರೆತುಬಿಡುತ್ತಾಳೆ. ಬಾಡಿದ ಮುಖ ಕುಂದಲದ ಹರಳಾದ ಹೊಳೆಯುವುದಾಗಿ ತಿಳಿಸುತ್ತಾಳೆ. ಇಲ್ಲಿ ಆಕೆಯ ತಾಯ್ತನ ಭಾವ ಹೊರಹೊಮ್ಮಿದೆ. ಇದೇ ಭಾವವನ್ನು ಇನ್ನೊಂದು ಕಡೆ ಹೀಗೆ ವ್ಯಕ್ತಪಡಿಸುತ್ತಾಳೆ.

"ಬ್ಯಾನೀಯ ತಿನುವಾಗ - ಬ್ಯಾಡವ್ವ ಮಕ್ಕಳು
ಬಾಗಿ ಬಚ್ಚಲ ಹೊಗುವಾಗ ! ಬಯಸ್ಯಾರ
ನೂರೊಂದು ಫಲವ ಕುಡುಶಿವನೆ ! "[೨೯]

ಮಕ್ಕಳ ಹೆರುವಾಗಿನ ನೋವು ನಂತರದಲ್ಲಿ ಮಾಯವಾಗುವುದು ಸಹಜ ನೋವುಂಡು ನೂರೊಂದು ಫಲಬೇಡುವ ಬಯಕೆ ಆಕೆಯದು ಆಕೆಯದು. ಇದನ್ನೆ! 'ಪ್ರಸವವೈರಾಗ್ಯ'ಎಂದು ಕರೆಯುವುದುಂಟು. ಬಾಣತನದ ಸಂಧರ್ಭವನ್ನೇ ಹಾಡಾಗಿ ಹೊರಹೊಮ್ಮಿಸಿದ್ದಾರೆ ಹೆಣ್ಣು ಮಕ್ಕಳು. ಅದೆಂದರೆ ಮಲ್ಲಿಗೆ ದಂಡೆಯಲ್ಲಿ ಮೂಡಿಬಂದ ' ಬೇನೆ ತಿನ್ನುವ ಹಾಡು'.

ಹುಟ್ಟಿದಂದೀಗ ಮೊದಲ ಹೊಟ್ಟಿಬ್ಯಾನೆಂಬೂದರಿಯ
ಹೊಟ್ಟ ಕುಟ್ಟಂದಾವಲ್ಲ
ಎದ್ದಾವೇಳವ್ವಾ ಬ್ಯಾನಿ ತಾಳಲಾರೇನ ಬ್ಯಾನಿ
ನಡ ಟೊಂಕ ಕೊಡಲೀಲಿ ಕಡದಂತ ತಡಬ್ಯಾನಿ !
ಬದಿಲಿ ಕುಂತವ್ವ ಗಳಿರ್ಯಾ ಹಡಿ ಹಡೀ ಅಂದಾರಲ್ಲ !
ಎದ್ದಾವೇ.........
ಹೊತ್ತ ಹೊತ್ತೀನ ಬ್ಯಾನಿ ಕತ್ತೀಲಿ ಕಡದಂಗ !
ಹೆತ್ತವ್ವ ಬಾರ ಬದಿಯಲ್ಲಿ !
ಎದ್ದಾವೇ........
ಅಡಗೀಯ ಮನಿಯಾಗ ಕಡಗ ಕಾಲೀನ ಮಂಚ !
ಬದಲಿ ಕುಂತವ್ವಗಳಿರ್ಯಾ ಹಡಿ ಹಡೀ ಅಂದಾದಲ್ಲ !
ಎದ್ದಾವೇ.......
ಥರ ಥರ ನಡುಗ್ಯಾತ ತೊಡಿಗೋಳು ಅದರೂತ !

ತುರುಬಿನ ಕೂದಲ ಬಾಯೊಳಗಿಡವ್ವೂತ !

ಎದ್ದಾವೇ.........

ಒಡಗಾಯಿ ಹಿಡಿಗಾಯಿ ಒಡೆದು ತೆಂಗಿನಕಾಯಿ !

ಒಡೆಯ ಪರವ್ವೂತಮಲ್ಲ ಕಡಿದಾದರು ಮಾಡ್ಯಾನಲ್ಲ !

ಎದ್ದಾವೇ.........

ಹೆಣ್ಣಿನ ಜೀವನದಲ್ಲಿ ಬರುವ ಬಾಣತನದ ಘಟ್ಟ ಬಹುಸಂಕೀರ್ಣಮಯವಾದುದು. ತಾಯಿಯಾವುದೆಂದರೆ ಪುನರ್‌ಜನ್ಮ ಪಡೆದಂತೆ ಎನ್ನುವುದು ಹಲವರ ಅಭಿಪ್ರಾಯ. ಬಾಣತನದ ನೋವಿನ ದಾರುಣತೆ ಈ ಮೇಲಿನ ಜನಪದ ಹಾಡು ನೈಜವಾಗಿ ಚಿತ್ರಿಸಿದೆ. ಹೆಣ್ಣಿನ ನೋವನ್ನು ಒಬ್ಬ ಹೆಣ್ಣು ಮಗಳೇ ಅರ್ಥೈಸಿಕೊಳ್ಳಲು ಸಾಧ್ಯ. ಅದರಲ್ಲಿ ತಾಯಿಯಾದವಳು ಮಾತ್ರ ತಾಯಿಯಾಗುವ ಯಾತನೆ ತಿಳಿದುಕೊಳ್ಳಬಹುದು 'ಬಂಜೆ ಬೆನೆ ಅರಿವಳೆ' ಎನ್ನುವ ನಾಣ್ನುಡಿ ಹುಟ್ಟಿರುವುದು ಈ ಹಿನ್ನೆಲೆಯಲ್ಲಿಯೇ.

ನಮ್ಮ ಸಮಾಜದಲ್ಲಿ ಹೆಣ್ಣಿಗೆ ಪ್ರಾಮುಖ್ಯತೆ ಇಲ್ಲ. ಆಕೆ ಮಾನ್ಯಳಾಗುವುದು. ತಾಯಿಯಾಗುವ ಹಂತದಲ್ಲಿ ಹೆಣ್ಣು ಎಂದರೆ ಗರ್ಭಾಶಯ ಅದಕ್ಕೆ ಹೋರತುಪಡಿಸಿ ಆಕೆಗೆ ಬೆಲೆಯಿಲ್ಲ. ಅಷ್ಟೇ ಅಲ್ಲ ಆಕೆ ಒಬ್ಬಳು ಮನುಷ್ಯಳು ಎಂಬ ಗ್ರಹಿಕೆ ಕೂಡ ನಮ್ಮ ಸಮಾಜಕ್ಕಿಲ್ಲ ಆಕೆಯ ಬದುಕಿನ ಹಲವು ಹಂತಗಳಲ್ಲಿ ಬಂಧನಕ್ಕೊಳಪಡುತ್ತಾಳೆ. ತಾಯಿಯಾಗುವ ಪೂರ್ವದಲ್ಲಿ ತಾಯಿ ನಂತರವೂ ಆಕೆಗೆ ನೆಮ್ಮದಿ ಇಲ್ಲ , ಕುಟುಂಬದಲ್ಲಿ ಸಮಾಜದಲ್ಲಿ ಹಲವು ಕಾರಣಗಳಿಂದಾಗಿ ನಿರ್ಲಕ್ಷಕ್ಕೆ ಒಳಗಾಗಿದ್ದಾಳೆ. ಸ್ತ್ರೀ ವಾದಿಗಳು ಹೇಳುವಂತೆ ಹೆಣ್ಣು ಗರ್ಭಾಶಯವನ್ನೇ ಕೇಂದ್ರವಾಗಿ ಗ್ರಹಿಸಿರುವುದು ಪಿತ್ರಪ್ರಧಾನ ಸಮಾಜದಲ್ಲಿ ಒಂದು ಬಹುದೊಡ್ಡ ವಿಡಂಬನೆಯೇ ಸರಿ. ಮಾನವ ಸಂಪನ್ಮೂಲದ ಮುಖ್ಯ ಶಕ್ತಿ ಕೇಂದ್ರವಾದವಳು ಸ್ತ್ರೀ ಆಕೆಗೆ ಸ್ಥಾನ ಮಾನವನ್ನು ನಿರ್ಧರಿಸುವುದು ಮಾತ್ರ ಪುರುಷ ಸಮಾಜ. ಒಂದು ಕಡೆ ಹೆಣ್ಣಿನ ಗರ್ಭಾಶಯ ಆಕೆಗೆ ಹಲವು ಸಮಸ್ಯೆಗೆ ಕಾರಣವೂ ಆಗಿದೆ.

ಸಮಾಜದಲ್ಲಿ ಮಕ್ಕಳ ಪೂರೈಕೆಯ ಸಾಧನವಾಗಿ ಹೆಣ್ಣನ್ನು ಬಳಸಿಕೊಳ್ಳಲಾಗಿದೆ. ಅದರ ಹೊರತಾಗಿ ಆಕೆಗೆ ಯುವ ವ್ಯಕ್ತಿತ್ವವೂ ಇಲ್ಲ. ಆದರೂ ಪರಂಪರಾಗತವಾಗಿ ಬಂದ ನಮ್ಮ ಹೆಣ್ಣು ಮಕ್ಕಳ ಬದುಕು-ಬವಣೆಗಳೆಲ್ಲ ಜನಪದ ಗೀತೆಗಳಲ್ಲಿ ಭಾವನಾತ್ಮಕವಾಗಿಯೇ ಮೂಡಿವೆ. ಹಿಂದಿನಿಂದಲೂ ಮೂಡಿಬಂದ ಸಿದ್ಧ ಮಾದರಿಯ ವಿಚಾರಗಳನ್ನು ಅದರಲ್ಲಿ ತಾಯ್ತನಕ್ಕೆ ಸಂಬಂಧಿಸಿದ ವಿಷಯಗಳನ್ನು ಎಲ್ಲವೂ ನುಂಗಿಕೊಂಡು ತಾನು ಇದ್ದ ವಾಸ್ತವ ಬದುಕಿನ ದಾರಣತೆಯನ್ನು ತೋರಗೊಡದೆ ನಿರಾಳವಾದ ಸುಂದರವಾದ ಭಾವನಾತ್ಮಕ ನೆಲೆಯಲ್ಲಿ ತಾಯ್ತನಕ್ಕೆ ಸಂಬಮಧಿಸಿದ ಬಸಿರು - ಬಯಕೆ - ಬಾಣತನದಂಥ ಬಹುಮುಖ್ಯ ಘಟ್ಟಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾಳೆ.

**4. ವಾತ್ಸಲ್ಯ**

ಜನಪದ ಗೀತ ಸಾಹಿತ್ಯದಲ್ಲಿ ಸಾಮಾಜಿಕ ಜೀವನದ ಪ್ರತಿ ಹಂತದ ಚಿತ್ರಣವನ್ನು ಕಾಣಬಹುದಾಗಿದೆ. ಜೀವನ ಪ್ರಯಾಣದ ಒಂದೊಂದು ಹೆಜ್ಜೆ ಗೀತ ಸಾಹಿತ್ಯದಲ್ಲಿ ಮೂಡಿಬಂದಿದೆ. ತಾಯಿಯಾದ ಹೆಣ್ಣು

ಮಗಳು ತನ್ನ ಮಗುವಿನ ನಗು-ಅಳು, ಆಟ - ಪಾಠಗಳನ್ನು ನೋಡಿ ಮನದಣಿಯದೆ ಹಾಡಿ ಆನಂದ ಪಟ್ಟಿದ್ದಾಳೆ . ತಾಯ್ತನವೆಂಬ ಮೌಲ್ಯವನ್ನು ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದಿದ್ದಾಳೆ. ತನ್ನ ಹೊಟ್ಟೆಯಲ್ಲಿ ಮಗು ಮೂಡಿದ ದಿನದಿಂದಲೂ ಹೊಸ ಹೊಸ ಅನುಭವ ಪಡೆಯುತ್ತ ಹೆತ್ತ ಮಗು-ಕಂಡು ಅದರ ಚಲನ - ವಲನಗಳನ್ನು ಹಾಡಾಗಿ ಹೊರಹೊಮ್ಮಿಸಿದ್ದಾಳೆ.

ಕುಟುಂಬದ ಆಸರಿಕೆ ಬೇಸರಿಕೆಗಳೆಲ್ಲ ತನ್ನ ಮಗುವಿನ ಮುಖ ನೋಡಿ ಮರೆತ್ತಿದ್ದಾಳೆ. ತನ್ನ ಮಕ್ಕಳ ಮೂಲಕ ಸಮಾಜದಲ್ಲಿ ಮಾನ್ಯತೆ ಪಡೆದು ಪುರುಷ ಸಮಾಜದಿಂದ ಸೈ ಎನಿಸಿಕೊಂಡು ಉಲ್ಲಾಸದಿಂದ ವಾತ್ಸಲ್ಯ ಗೀತೆಗಳನ್ನು ಸಹಜ ಸೌಂದರ್ಯದಿಂದ ಅಭಿವ್ಯಕ್ತಿಸಿದ್ದಾಳೆ. ಜನಪದ ಗೀತ ಸಾಹಿತ್ಯದಲ್ಲಿ ವಾತ್ಸಲ್ಯಭಾವದ ಹಾಡುಗಳು ಮೇಲುಗೈ ಸಾಧಿಸಿವೆ. ನೂರಾರು ಹಾಡು ಸಂಖ್ಯೆಯಿಂದ ಅಷ್ಟೇ ಅಲ್ಲ ಸೌಂದರ್ಯಾಭಿವ್ಯಕ್ತಿಯಿಂದಲೂ ಮಹತ್ವದ್ದಾಗಿವೆ. ತನ್ನ ಮಗುವಿನ ನಗುವ ಕಂಡು ಹಿಗ್ಗು ಹಿಡಿಯಲಾರದೆ ಅಳುಕಂಡು ತಡೆದುಕೊಳ್ಳಲಾರದೆ, 'ಹೆತ್ತವ್ವಳಿಗೆ ಹೆಗ್ಗಣ ಮುದ್ದು' ಎಂಬಂತೆ ಮಗುವಿನ ಸಹಜ ಸೌಂದರ್ಯ ಕಂಡು ಸುಮ್ಮನಿರಲಾರದೆ ತನ್ನ ಮಗುವಿನ ಬಾಲಲೀಲೆಗಳನ್ನು ಹಾಡಾಗಿ ಹೊಮ್ಮಿಸಿದ್ದಾಳೆ. ಮಕ್ಕಳ ಬಿಟ್ಟು ತನಗೆ ಇನ್ನೇನು ಬೇಕಿಲ್ಲ ಬಡತನದಂಥ ಬೇಗೆ ಇದ್ದರೂ ಇರಲಿ ಆದರೆ ಮನೆ ತುಂಬ ಮಕ್ಕಳಿರಲಿ ಎಂದು ಅಪೇಕ್ಷಿಸಿದ್ದಾಳೆ. ತಾಯ್ತನದ ಭಾವ ವಾತ್ಸಲ್ಯ ಗೀತೆಗಳಲ್ಲಿ ಸುಂದರವಾಗಿ ಮೂಡಿ ಬಂದಿವೆ. ತನ್ನ ಕರುಳ - ಬಳ್ಳಿಯಾದ ಕಂದನನ್ನು ವರ್ಣಿಸುವ ರೀತಿ ವಿಸ್ಮಯವಾದುದ್ದು .

ತಾಯಿಯ ಭಾವವನ್ನು ಅಡಗಿದ ಪ್ರೀತಿ-ಮಮತೆ-ಅಕ್ಕರೆ-ವಾತ್ಸಲ್ಯವೆಲ್ಲವು ಬೆಲ್ಲದ ಮಡುವಾಗಿ ನಿಂತಿವೆ. ಮದುವೆಯಾಗಿ ತಾಯಿಯಾಗುವ ಬಯಕೆ ಮನದಲ್ಲಿ ಮೂಡಿ ಬಂಜೆ ಎಂಬ ಸಾಮಾಜಿಕ ಕೌರ್ಯದಿಂದ ಪಾರಾಗಿ ತಾಯ್ತನ ಪಡೆದು ತನ್ನ ಭಾಗ್ಯತನವನ್ನು ಹಾಡುಗಳಲ್ಲಿ ವ್ಯಕ್ತಪಡಿಸಿದ್ದಾಳೆ.ತವರವರು ಕೊಟ್ಟ ತೊಟ್ಟಿಲು ಹೊತ್ಕೊಂಡು ಕಂದನನ್ನು ಮಡಿಲಲ್ಲಿ ಹೊತ್ತು ಗಂಡನ ಮನೆಗೆ ಹೆಮ್ಮೆಯಿಂದ ಬಂದು ತನ್ನ ಅಧಿಕಾರವನ್ನು ಸ್ಥಾಪಿಸಿಕೊಳ್ಳುತ್ತಾಳೆ ತೊಟ್ಟಿಲು ತೂಗುವ ಕೈ ಲೋಕವೇ ತೂಗುತ್ತದೆ ' ಎಂಬಂತೆ ಆಕೆಗೆ ಇಡೀ ಜಗತ್ತೇ ತನ್ನ ಅಂಗೈಯಲ್ಲಿ ಎಂದು ಭಾಸವಾಗುತ್ತದೆ. .ಜನಪದ ಗೀತ ಸಾಹಿತ್ಯದಲ್ಲಿ ವಾತ್ಸಲ್ಯ ಗೀತೆಗಳು ಸುಂದರವಾಗಿ ಉಪಮೆ ರೂಪಕಲಂಕಾರಗಳಿಂದ ಕೂಡಿವೆ.

ಮಗುವಿಗೆ ಹಾಲುಣಿಸುವಾಗ, ಮಲಗಿಸುವಾಗ, ತೊಟ್ಟಿಲು ತೂಗುವಾಗ, ಆಡಿಸುವಾಗ ಸಹಜ ಸ್ಫೂರ್ತಿಯಿಂದ ಹೊರಹೊಮ್ಮಿವೆ. ಜನಪದ ಹೆಣ್ಣು ಮಗಳ ಕಾವ್ಯ ಪ್ರತಿಭೆ ಶಿಷ್ಟ ಕವಿಗಳಿಗೆ ಮೀರಿಸುವಷ್ಟು ಕೇಳುಗರ ಮನಸ್ಸನ್ನು ನಾಟುತ್ತವೆ. ಮಕ್ಕಳನ್ನು ಹೆತ್ತು - ಹೊತ್ತು ಸಾಕಿ - ಸಲುಹಿ ತನ್ನ ಬದುಕನ್ನೇ ಮಕ್ಕಳಿಗಾಗಿ ಮುಡಿಪಾಗಿಟ್ಟ ತಾಯಂದಿರ ಅನುಭವದ ಈ ಅಣಿ ಮುತ್ತುಗಳು ಬಹು ಸುಂದರ. ವಾತ್ಸಲ್ಯಗೀತೆ, ಲಾಲಿಪದ, ಜೋಗುಳ ಪದ, ತೊಟ್ಟಿಲ ಪದ ಮುಂತಾದ ಹೆಸರುಗಳನ್ನು ಇವು ಪಡೆದುಕೊಂಡಿವೆ . ಈ ಹಾಡುಗಳ ಮುಖ್ಯ ವಿಷಯವಸ್ತುವೆಂದರೆ ತನ್ನ ಕರುಳಿನ

ಕಂದನೇ ಆಗಿದ್ದಾನೆ. ಅದರ ಹಾವ - ಭಾವ ಗುಣವರ್ಣನೆಗಳನ್ನು ಈ ವಾತ್ಸಲ್ಯ ಗೀತೆಗಳಲ್ಲಿ ಜನಪದ ಹೆಣ್ಣು ಮಗಳು ಮನದಣಿಯದೆ ಹಾಡಿದ್ದಾಳೆ. ಅವುಗಳನ್ನು ಮುಂದಿನಂತೆ ನೋಡಬಹುದು.

ತಾಯಿಗೆ ತನ್ನ ಮಗು ಎಲ್ಲರಿಗಿಂತ ಮಿಗಿಲಾಗಿ ಕಾಣುತ್ತಾನೆ. ತನ್ನ ಕರುಳು ಕುಡಿ ಹುಟ್ಟಿದೊಡನೆ ಬಣ್ಣ ಬಣ್ಣದ ವಸ್ತ್ರ, ಕಪ್ಪ ಕಾಡಿಗೆ ತೊಟ್ಟಿಲುಗಳಂಥ ವಸ್ತುಗಳನ್ನು ಕೊಂಡುಕೊಳ್ಳಲು ಉತ್ಸುಕಳಾಗಿರುತ್ತಾಳೆ. ಆಕೆಯ ಸಂಭ್ರಮ ಹೇಳತೀರದು ಅದನ್ನು ಈ ಗೀತೆಯಲ್ಲಿ ಕಾಣಬಹುದಾಗಿದೆ.

"ಮುಂಜಾನೆದ್ದು ಗೋಪಿ
ಅಯ್ಯಂಗಳ ಮನಿಗ್ಹೋಗಿ
ಕೂಡಗೋಪೆವು ನಿಂದ್ರಗೋಪವ್ವಾ
ಕೂಡಲಾಕ ಬಂದಿಲ್ಲ ನಿಂದ್ರಲಾಕ ಬಂದಿಲ್ಲಾ
ಹೀಂಗಾಬಾಲನಾ ಅಂಗವ ಹೇಳಲುಬಂದಿನಿ "೩೦

ಎಂದು ತನ್ನ ಮಗುವಿಗಾಗಿ ವಿವಿಧ ವಸ್ತುಗಳನ್ನು ಪಡೆಯುವ ತಾಯಿಯ ಸಂಭ್ರಮ ಗಮನಿಸಬಹುದು. ಸಿಂಪಿಗೆರ ಮನಿಗ್ಹೋಗಿ ತನ್ನ ಬಾಲನಿಗಾಗಿ ಅಂಗಿ ಅಕ್ಕಸಾಲಿಗನಲ್ಲಿ ಹೋಗಿ ಅರಳೇಲಿ, ಬಡಗ್ಯಾನ ಮನೆಯಿಂದ ತೊಟ್ಟಿಲುಗಳನ್ನು ತರುವಲ್ಲಿ ತನ್ನ ವಾತ್ಸಲ್ಯ ಮತ್ತು ಸಂಭ್ರಮವನ್ನು ವ್ಯಕ್ತಪಡಿಸಿದ್ದಾಳೆ.

ತಾಯಿ ತನ್ನ ಮಕ್ಕಳಿಗೆ ಎಷ್ಟು ಬಗೆಯಾಗಿ ಹಾಡಿ ಹೋಗಳುತ್ತಾಳೆ ಎಂಬುದನ್ನು ತಿಳಿಯಲು ಜನಪದ ಸಾಹಿತ್ಯದಲ್ಲಿ ಬರುವ ವಾತ್ಸಲ್ಯ ಗೀತೆಗಳನ್ನು ನೋಡಬೇಕು. 'ಹೆತ್ತ ತಾಯಿಗೆ ಹೆಗ್ಗಣ ಮುದ್ದು' ಎಂಬಂತೆ ಮಗುವಿನ ಚಲುವಿಕೆ, ಅದರ ಲವಲವಿಕೆ , ಆಟ - ಪಾಠಗಳನ್ನು ಕಂಡು ಆಯಾಸವಿಲ್ಲದೆ ಹೋಗಳಿರುವುದಕ್ಕೆ ಜನಪದ ಗೀತೆಯಲ್ಲಿ ಕಂಡುಬರುವ ವಾತ್ಸಲ್ಯ ಗೀತೆಗಳೇ ಸಾಕ್ಷಿಯಾಗಿವೆ. ತಾಯಿ ಹೃದಯದಲ್ಲಿ ಅಡಗಿರುವ ತನ್ನ ಕಂದನ ಕುರಿತ ಪ್ರೀತಿ - ಅಕ್ಕರತೆಗೆ ಇವು ಹೆಸರಾಗಿವೆ.

"ಅಳುವ ಕಂದನ ತುಟಿಯು ಹವಳದ ಕುಡಿಯಂಗ
ಕುಡಿಹುಬ್ಬು ಬೇವಿನೆಸಳಂಗ ಕಣ್ನೋಟ
ಶಿವನ ಕೈಯಲುಂಗುರ ಹೊಳೆದಂಗ

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು
ಮಾವಿನ ಹೋಳು ನಿನಕಣ್ಣು ! ಕಂದಯ್ಯ
ಮಾವ ಬಣ್ಣೀಸಿ ಕರದಾನ "೩೦

ಈ ಹಾಡಿನ ತಾಯಿ ತನ್ನ ಮಗುವಿನ ತುಟಿ, ಕುಡಿಹುಬ್ಬು, ಕಣ್ಣುಗಳ ಕುರಿತು ವರ್ಣಿಸಿದ್ದಾಳೆ. "ಇಲ್ಲಿ ಬಳಸಿದ ಉಪಮಾನಗಳು ತಾಯಿಯ ಅಕ್ಕರತೆಯ ಕುರುಹು ಆಗಿವೆ. ಮಗುವಿನ ಕುಡಿಹುಬ್ಬು ಬೇವಿನ ಎಸಳಂಗ ಎನ್ನುವ ಮಾತು ಯಾವ ಶಿಷ್ಟ ಕವಿಯು ಬಣ್ಣಿಸದಂತಹದಲ್ಲ. ಅಳುವ ಕಂದನ ತುಟಿ ಹವಳದ ಕುಡಿಯನ್ನು ಮೀರಿಸುವಂತಹವು. ಅವನ ಕಣ್ನೋಟ ಶಿವನ ಕೈಯಲ್ಲಿಯ ಅಲಗಿನಂತೆ.

ಅದು ಹೇಗಿರುತ್ತದೆಂಬುದನ್ನು ಊಹೆಯಿಂದ ಮಾತ್ರ ತಿಳಿದುಕೊಳ್ಳಬೇಕಾದುದು. ಹೀಗೆ ಮಗುವನ್ನು ಬಣ್ಣಿಸಿ ಕರೆವಲ್ಲಿ ಆಕೆಗೆ ತೃಪ್ತಿಯಿಲ್ಲ. "[೩೨] ತೊಟ್ಟಿಲಲ್ಲಿ ಆಡುವ ಮಗುವನೆತ್ತಿ ಎಣ್ಣೆ ಹಚ್ಚಿ ಅಭ್ಯಂಗ ಸ್ನಾನಮಾಡಿಸಿ ತಿಂಡಿ ಕಾಡಿಗೆ ಕಪ್ಪದ ಹಚ್ಚಿ ಹಾಲುಣಿಸಿ ಜೋಗುಳ ಹಾಡಿ ಮಲಗಿಸುವ ತಾಯಿ ವ್ಯಾತ್ಸಲ್ಯಕ್ಕೆ ಸರಿಸಾಟಿಯಾರಿಲ್ಲ.

"ಆಡಿ ಬಾ ಎನಕಂದಾ ಅಂಗಾಲ ತೊಳದೇನ

ತೆಂಗಿನಕಾಯಿ ತಿಳಿನೀರ ! ತಕ್ಕೊಂಡು

ಬಂಗಾರ ಮಾರಿ ತೊಳೆದೇನ !!

ಆವೂರ ಈವೂರ ಜೋಗಿ ಜಂಗಮನೂರ
ನೀರಿಲ್ಲದೂರ ನರಗುಂದ ! ಕಂದಗ
ಹಾಲೀಲೆ ಮಾರಿ ತೊಳೆದೇನ "[೩೩] !!

ಇಲ್ಲಿ ತಾಯಿ ತನ್ನ ಮಗುವಿನ ಅಂಗಾಲು, ಬಂಗಾರದ ಮೋರೆ ತೊಳೆಯಲು ತಿಳಿಯಾದ ತೆಂಗಿನ ನೀರು ಹಾಗೂ ಹಾಲು ಬಳಸುವುದಾಗಿ ಹೇಳಿದ್ದಾಳ ತನ್ನ ಮಗುವಿನ ಪರವಾಗಿ ತನಗಿದ್ದ ಕಾಳಜಿ ಮಮತೆ ಇಲ್ಲಿ ಉಕ್ಕಿ ಹರಿದಿದೆ.

"ಕೂಸು ಇದ್ದ ಮನಿಗೆ ಬೀಸಣಿಕೆ ಯಾತಕ

ಕೂಸು ಕಂದಯ್ಯ ಒಳಹೊರಗ ಆಡಿದರ

ಬೀಸಣಿಕೆ ಗಾಳಿ ಸುಳಿದಾವ "[೩೪]

ತನ್ನ ಕಂದಯ್ಯನ ಓಡಾಟದಲ್ಲಿ ಸುಖವಿದೆ ಎಂಬುದನ್ನು ಬಹು ಸುಂದರ ದುಷ್ಟಾಂತಗಳ ಮೂಲಕ ಹೇಳಿದ್ದಾಳೆ.

ಇದು ಕೇವಲ ಹೊಗಳಿಕೆಯ ಮಾತಲ್ಲ ತಾಯಿಗೆ ವಾಸ್ತವ ಸಂಗತಿ.

"ತವರೂರಿಗ್ಹೋದಾಗ ನವಿಲಬಣ್ಣದ ಪಕ್ಷಿ

ತಲಿಬ್ಯಾನಿಯೆದ್ದು ಅಳುತಿತ್ತ ! ಕಂದನ

ಛಲುವಿಕಿ ನೋಡಿ ನಗತಿತ್ತ "[೩೫]

ನವಿಲು ಸಹ ತನ್ನ ಕಂದನ ಚಲುವನ್ನು ನೋಡಿ ತನ್ನ ತಲೆ ಬೇನೆ ಮರೆತು ನಗುತಿತ್ತು ಎಂದು ಹೇಳಿದ್ದಾಳೆ. ಇಲ್ಲಿ ಉತ್ಪ್ರೇಕ್ಷಲಂಕಾರದ ಮೂಲಕ ತನ್ನ ಕಂದನ ಚಲುವನ್ನು ವರ್ಣಿಸಿದ್ದಾಳೆ.

"ನಡೆದು ಬಾ ಕಮದಯ್ಯ ನಡಗೀನ ನೋಡೆನೆ

ಪದುಮದ ಪಾದ ಬರಗಾಲ ! ಕಂದಯ್ಯ

ಕಿರಿಗೆಜ್ಜೆ ಇಡಿಸಿ ನೋಡೇನ !!

ನಡೆದಾಡು ಕಂದನ ನಡೆಗೀಯ ನೋಡೀನ
ಸಡಗರದಿಂದ ತೊಡಸೀನ ! ಕಂದಯ್ಯಗ
ಆಯಿ ಮಾಡಿಸಿಕೊಟ್ಟ ಕಿರುಗೆಜ್ಜಿ.

ಮಂದಿ ಮಕ್ಕಳೊಳಗ ಚಂದ ನನ್ನ ಕಂದಯ್ಯ
ಸಂದಿಗೊಂದಿ ತಿರುಗಿ ಅಡ್ಯಾನ ! ಕಂದಯ್ಯಗ
ಕಂಡವರು ಕೈಮಾಡಿ ಕರೆದಾರ "[೩೭] !!

ಈ ಗೀತೆಗಳನ್ನು ತಾಯಿ ತನ್ನ ಮಗು ಪುಟ್ಟ ಹೆಜ್ಜೆಗಳನಿಟ್ಟು ನಡೆಯುವಾಗಿನ ಚಲುವಿನ ಸಂಭ್ರಮವನ್ನು ಹೇಳೆದ್ದಾಳೆ. ಮಗು ಮೊದಲ ಹೆಜ್ಜೆಯನಿಟ್ಟು ನಡೆಯಲು ಕಲಿಯುವಾಗ ತಾಯಿಗೆ ಎಲ್ಲಿಲ್ಲದ ಸಂತೋಷ ಅವುಗಳಿಗೆ ಕಿರುಗೆಜ್ಜೆಯನ್ನಿಟ್ಟು ಸಂಭ್ರಮ ಪಡುತ್ತಾಳೆ. ಆ ಕಿರಿ ಗೆಜ್ಜೆಯನಿಟ್ಟು ಓಣಿಯಲ್ಲ ತಿರುಗುವಾಗ ನೋಡಿದವರೆಲ್ಲ ಮಗುವಿಗೆ ಎತ್ತಾಡಿಸುತ್ತಾರೆ. ಅದನ್ನು ಕಂಡು ತಾಯಿ ಈ ಹಾಡಿನಲ್ಲಿ ವ್ಯಕ್ತಪಡಿಸಿದ್ದಾಳೆ.

ಜನಪದ ಹೆಣ್ಣು ಮಕ್ಕಳಿಗೆ ತನ್ನ ಮಗುವೇ ಸರ್ವಸ್ವ . ತನ್ನ ಮಗು ಕಣ್ಣ ಮುಂದೆ ಇದ್ದರೆ ಯಾರ ಹಂಗು ಬೇಡ, ತನ್ನ ಹೆತ್ತ ತಾಯಿ, ಕೈ ಹಿಡಿದ ಗಂಡನನ್ನು ಮರೆಯುವುದಾಗಿ ಹೇಳುತ್ತಾಳೆ. ಇಲ್ಲಿ ಕಂದನ ಬಗ್ಗೆ ಆಕೆಗೆ ಎಲ್ಲಿಲ್ಲದ ಅಭಿಮಾನ.

"ತೊಳುದ್ದ ತಲೆದಿಂಬು ಘಾರುದ್ದ ಹಾಸೀಗಿ
ಮಾಣಿಕದಂಥ ಮಗ ಮುಂದ !
ಮಲಗಿದರ ಮಾರಾಯ್ರಗೊಡವೆ ನನಗೇನ.

ತಾಯಿದ್ರ ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು !
ಸಾವಿರಕ ಹೆಚ್ಚು ಪತಿ ಪುರುಷ !
ಹೊಟ್ಟೀಯ ಮಾಣಿಕದ ಹರಳು ಮಗ ಹೆಚ್ಚು "[೩೭]

ಎನ್ನುತ್ತಾಳೆ. ತನ್ನ ಮಗುವಿನ ಮುಂದೆ ಯಾರು ಸಮಾನರಿಲ್ಲ ಎಂಬುದು ಆಕೆಯ ಅಭಿಮತ.

"ಗಂಡ ಹೆಂಡತಿ ಜೋಡು ದುಂಡು ಮುತ್ತಿನ ಜೋಡು
ಗಂಡೆರಳಿ ಜೋಡು ಅಡವ್ಯಾಗ ! ನನ ಬಾಲಾ
ನೀ ಜೋಡೊ ನನಗೆ ಮನಿಯಾಗ ! "[೩೮]

ತನ್ನ ಮತ್ತು ತನ್ನ ಗಂಡನ ಜೋಡಿ ದುಂಡು ಮುತ್ತಿನ ಜೋಡು ಎಂದು ಹೇಳುತ್ತಲೇ ಅದಕ್ಕಿಂತಲೂ ಮುಖ್ಯವಾಗಿ ಮನೆಯಲ್ಲಿ ತನ್ನ ಮಗನೇ ತನಗೆ ನಿಜವಾದ ಜೊತೆಗಾರ ಎನ್ನುತ್ತಾಳೆ. ಇಲ್ಲಿ ಮಗನ ಆಕೆಗೆ ಅಪಾರ ಅಭಿಮಾನ ಇರುವುದು ಕಂಡು ಬರುತ್ತದೆ.

"ಗಾಳಿದೇವರ ಗೂಡ ಘೂಳಿದೇವರ ಬಂದಾ
ಆಕಳ ಹಿಂದ ಕರ ಬಂದಾ ! ನನ ಮನಿಯ
ಮಾರಾಯರ ಹಿಂದ ಮಗಾಬಂದಾ "[೩೯]

ತನ್ನ ಮನೆಯ ಯಜಮಾನನಾದ ಪತಿಪುರುಷನ ಹಿಂದೆ ತನ್ನ ಕರಳಿನ ಕುಡಿ ಬರುವಾಗ ತಾಯಿಗೆ ಎಲ್ಲಿಲ್ಲದ ಹಿಗ್ಗು. ವಂಶದ ಕುಡಿ ಮುಂಬರುವ ದಿನಕ್ಕೆ ಯಜಮಾನನೆಂದು ಅಭಿಮಾನ ಪಡುತ್ತಾಳೆ.

ತನ್ನ ಮಗು ಹೇಗಿದ್ದರು ತಾಯಿಯ ಹೃದಯದಿಂದ ಹಾರೈಕೆಗಳೆ ಹೊರಹೊಮ್ಮುತ್ತವೆ. ತನ್ನ ಕರುಳಿನ ಕುಡಿಗೆ ಎಂದೂ ಶಪಿಸುವುದಿಲ್ಲ. ಶಾಪವಿತ್ತರೂ ಅದು ಹಾರೈಕೆಯಾಗಿ, ಆಶಿರ್ವಾದವಾಗಿ ಮಾರ್ಪಡುತ್ತದೆ ಎಂಬುದು ಜನಪದ ಬಂಬುಗೆ. ತನ್ನ ಮಗ ಎಲ್ಲೇ ಇರಲಿ ಗಟ್ಟಿಮುಟ್ಟಾಗಿ ಸಾವಿರ ವರುಷ ಹಾಯಾಗಿ ಬದುಕಲಿ ಎಂಬುದು ಆಕೆಯ ಹಾರೈಕೆ. ಜನಪದ ಗೀತೆಗಳಲ್ಲಿ ತಾಯಿಯ ವಾತ್ಸಲ್ಯದ ಪ್ರತೀಕವಾದ ಈ ಹಾರೈಕೆ ಹಾಡುಗಳು ಮನಮುಟ್ಟುತ್ತವೆ. ಒಬ್ಬ ತಾಯಿ ತನ್ನ ನಾಲ್ಕಾರು ಮಕ್ಕಳನ್ನು ಯಾವುದೇ ಕೊರತೆಗಳಿಲ್ಲದೇ ಶಕ್ತಿ ಮೀರಿ ಸಲಹಲು ಪ್ರಯತ್ನಿಸುತ್ತಾಳೆ. ಆದರೆ ಅದೇ ನಾಲ್ಕಾರು ಮಕ್ಕಳು ಒಬ್ಬ ತಾಯಿಯನ್ನು ಸಲುಹಲು ಹಿಂದು - ಮುಂದು ನೋಡುತ್ತಾರೆ. ಇದೊಂದು ವಿಪರ್ಯಾಸವೇ ಸರಿ. ತಾಯಿಯಾದವಳು ತನ್ನ ಮಗ ತನ್ನನ್ನು ಮುಂದೆ ನೋಡಿಕೊಳ್ಳುತ್ತಾನೆ ಎಂಬ ಭ್ರಮೆಯಿಂದ ಎಂದೂ ಹಾರೈಕೆ ಮಾಡುವುದಿಲ್ಲ . ಬದಲಾಗಿ ನಿಷ್ಕಾಮವಾಗಿ ಹರಸಿ ಸಲಹುತ್ತಾಳೆ. ಆಕೆಯ ಹಾರೈಕೆಗೆ ಈ ಜನಪದ ಗೀತೆಗಳೆ ಸಾಕ್ಷಿ.

"ಎಲ್ಲಾರ ಇರೆಲೆವ್ವಾ ಹು.ಲ್ಲಾಗಿ ಬೆಳೆಯಲಿ
ನೆಲ್ಲಿ ಬಂಡ್ಯಾಗಿ ಚಿಗಿಯಲಿ ! ಕಂದಯ್ಯ
ಜಯವಂತನಾಗಿ ಬೆಳೆಯಲಿ !!

ಹುಟ್ಟೀದ ಕಂದನಿಗೆ ಅಕ್ಷಯವಾಗಲಿ
ಕೊಟ್ಟಂಥ ಸ್ವಾಮಿ ಮರೆವನೆ ! ಕಂದಯ್ಯ
ಬೊಟ್ಟು ಬೆಟ್ಟಾಗಿ ಬೆಳೆಯಲಿ "[೪೦]

ತನ್ನ ಮಗ ತನ್ನ ಯೋಗಕ್ಷೆಮ ನೋಡಿಕೊಳ್ಳುತ್ತ ತನ್ನ ಎದುರಲ್ಲೇ ಇರಬೇಕು ಎಂದು ಆಕೆ ಎಂದೂ ಆಸೆ ಪಡುವುದಿಲ್ಲ ಬದಲಾಗಿ ಜನತ್ತಿನ ಯಾವ ಮೂಲೆಯಲ್ಲಾದರೂ ಇರಲಿ ಆತ ನೆಲ್ಲಿ ಬಂಡ್ಯಾಗಿ ಚಿಗಿಯಲಿ ತನ್ನ ಕಂದನಿಗೆ ಅಕ್ಷಯವಾಗಲಿ ಎಂದು ಹಾರೈಸುತ್ತಾಳೆ.

ಎಷ್ಟೋ ಸಲ ಮಕ್ಕಳ ಕಿರಿಕಿರಿ, ರಂಪಾಟ, ಹಟಮಾರಿತನ ಅಳುವಿಕೆ ತಾಯಿಗೆ ಸಾಕಾಗಿ ಹೋಗುವುದುಂಟು ಆದರೂ ಆಕೆ ಎಂದೂ ಸಹ ತನಗೆ ಈ ಮಕ್ಕಳು ಬೇಡ ಎಂದು ಹೇಳಲಾರಳು ಮಕ್ಕಳ ಅಳುವಿಗೆ ತನ್ನ ಪ್ರೀತಿ, ಮಮತೆ, ವಾತ್ಸಲ್ಯ, ಅಕ್ಕರತೆಯಿಂದ ಸಮಾಧಾನ ಪಡಿಸುವಳು.

ಸಮಾಧಾನ ಪಡಿಸುವ ಸಂದರ್ಭದಲ್ಲಿ ಹಲವಾರು ಗೀತೆಗಳನ್ನು ಕಟ್ಟಿ ಹಾಡಿದ್ದಾರೆ. ಮಕ್ಕಳ ರಂಪಾಟದಿಂದ ಕೂಡಿದ ಅಳುವನ್ನು ಸಮಾಧಾನ ಪಡಿಸುವ ಸಲುವಾಗಿ ಹಲವು ಹಾಡುಗಳನ್ನು ಸೃಷ್ಟಿಸಿ ಆ ಹಾಡಿನಲ್ಲಿ ಮೈ ಮರೆತು ಮಲಗುವಂತೆ ಮಾಡುವ ಚಮತ್ಕಾರಿಕೆ ಈ ತಾಯಂದಿರಲ್ಲಿದೆ. ಹೇಗೆಂದರೆ.

"ಕಂಡದ್ದು ಕನಸಾಗಿ ಉಂಡದ್ದು ಸವಿಯಾಗಿ
ಕಂದ ನೀ ಕಾಡಬೇಡೆಂದು! ಬೇಡುವೆ
ಕಂದಯ್ಯ ಮಾಡೊ ನಿದ್ದೀಯ"[೪೧]!!

ಮಕ್ಕಳನ್ನು ರಮಿಸಿ ತೊಟ್ಟಿಲ ಜಿಕುವಿಕೆಯ ಲಯದಿಂದಲೇ ಹಾಡುತ್ತ ಮಗುವನ್ನು ಮಲಗಿಸುತ್ತಾಳೆ. ತಾಯಿ ಹಾಡುವ ಜೋಗುಳಕ್ಕೆ ಕಿವಿ ಗುಡದ ಕಂದಮ್ಮಗಳಿಲ್ಲ. ಜೋಗುಳ ಹಾಡುಗಳೆಂದರೆ ಮಕ್ಕಳಿಗೂ ಬಲು ಇಷ್ಟ ಎಂಬುದು ತಾಯಂದಿರಿಗೆ ಗೊತ್ತು.

"ಜೋಗೂಳ ಹಾಡಿದರ ಆಗಳೇ ಕೇಳ್ಯಾನ
ಹಾಲ ಹಂಬಲ ಮರತಾನ ! ಕಂದೈಗ
ಜೋಗೂಳದಾಗ ಅತಿ ಮುದ್ದ !!

ಲಾಲೀಯ ಹಾಡಿದರ ಲಾಲೀಸಿಕೇಳ್ಯಾನ
ತಾಯಿ ಹಂಬಲ ಮರೆತಾನ ಕಂದಯ್ಯ !
ತೋಳ ಬೇಡ್ಯಾನ ತಲೆದಿಂಬ " [೪೩] !!

ಎಂಬ ಜೋಗುಳದ ಹಾಡುಗಳನ್ನು ಹಾಡುತ್ತಾಳೆ. ಜೋಗುಳ ಹಾಡುಗಳಿಗೆ ಅದರದ್ದೆ ಆದ ಮಹತ್ವವಿದೆ. ಜೋಗುಳ ಹಾಡದ ತಾಯಂದಿರಾಗಲಿ ಕೇಳದೆ ಕಂದಮ್ಮಗಳಾಗಲಿ ನಮ್ಮೀ ನೆಲದಲ್ಲಿ ಸಿಗಲಿಕ್ಕಿಲ್ಲ. ಈ ಹಾಡುಗಳೆಂದರೆ ನಮ್ಮ ತಾಯಂದಿರಿಗೆ ಎಲ್ಲಿಲ್ಲದ ಹಿಗ್ಗು.

"ತೂಗು ತೊಟ್ಟಿಲಿಗೊಂದು ಪಾಗು ಪಟ್ಟಿಯ ಹಾಸಿ !
ಮಾಗಾಯಿ ಮಗನ ಮಲಗೀಸಿ ! ಅವರಮ್ಮ
ಜೋಗುಳ ಹಾಡಿ ಹಿಗ್ಯಾಳ !!

ಮುರುಕ ತೊಟ್ಟಿಲಿಗೊಂದು ಹರಕು ಚಾಪಿಯ ಹಾಸಿ
ಅರಚು ಪಾಪನ ಮಲಗೀಸಿ ! ಅವರಕ್ಕ
ಕಲಕೇತ ಹಾಡಿ ಹಿಗ್ಯಾಳ " [೪೪] !!

ಹೀಗೆ ನಮ್ಮ ತಾಯಂದಿರು ಜೋಗುಳದ ಕುರಿತು ಜೋಗುಳದ ಹಾಡುಗಳನ್ನು ಸೃಷ್ಟಿಸಿದ್ದಾರೆ. ಇಂಥ ಜೋಗುಳದ ಹಾಡು ಕೇಳಿದಾಗಲು ಕೆಲವು ಮಕ್ಕಳು ಅಳು ನಿಲ್ಲಿಸಲಾರವು, ಹಟ ಬಿಡಲಾರವು ಒಂದೇ ಸಮನೇ ಕಿರಿಕಿರಿ ಮಾಡುತ್ತ ಅಮ್ಮಂದಿರನ್ನು ಕಾಡಿಸುವುದು ಸಹಜ. ಆ ಕಾಡುವಿಕೆಯನ್ನೆ ಹಾಡಾಗಿಸಿಕೊಂಡು ಆನಂದ ಪಡುತ್ತಾರೆ ನಮ್ಮ ತಾಯಂದಿರು, ಚಿಕ್ಕ ಮಕ್ಕಳ ಹಟದ ಮುಂದೆ ಯಾರ ದರಬಾರವೂ ನಡೆಯದು. ಅದಕ್ಕಾಗಿಯೇ ಕವಿ ಚನ್ನವೀರ ಕಣವಿಯವರು 'ದೀಪದಾರಿ' ಕವನದಲ್ಲಿ ಚಿಕ್ಕ ಮಕ್ಕಳ ಹಟವನ್ನು ಹೀಗೆ ಹೇಳಿದ್ದಾರೆ. ಪದವಿಟ್ಟುದೆ ಭಂಗಿ, ನಡೆದುದ್ದೇ ದಾರಿ ಕಣ್ಣು ತಪ್ಪಿದರಿವನು

ವಿಶ್ವ ಸಂಚಾರಿ ಹಿಡಿದಿದ್ದೆ ಹಟ, ಇವನು ನುಡಿದದ್ದೆ ವೇದ, ತಳಕಿತ್ತು ಒಡುವುವು ಎಲ್ಲ ವಾಗ್ವಾದ, ಮಕ್ಕಳ ಸ್ವಭಾವವನ್ನು ಸುಂದರವಾಗಿ ಚಿತ್ರಿಸಿದ್ದಾರೆ . " ಚಿಕ್ಕ ಮಕ್ಕಳ ಹಟಮಾರಿತನ ವಿಚಿತ್ರವಾಗಿದೆ. ಅವರ ಬೇಡಿಕೆಗಳನ್ನು, ಬಯಕೆಗಳನ್ನು ನೆರವೇರಿಸಲು, ಈಡೇರಿಸಲು ಹರಿಹರ ಬ್ರಹ್ಮಾದಿಗಳವಲ್ಲ! ಕಂದನ ಕಿರಿಕಿರಿಯನ್ನು ಪರಿಚಯಿಸುವ ಬಗೆ ಇಲ್ಲಿದೆ.

ಕಂದನ ಕಿರಿಕಿರಿ ಇಂದೇನು ಹೇಳಲಿ
ಬಿಂದೀಗಿ ಹಾಲು ಸುರುವಂದ
ಥೆಂಜಿಯ! ಚಂದ್ರಮನ ತಂದು ನಿಲಿಸೆಂದ!!

ಮಗುವಿಗೆ ಒಮ್ಮೊಮ್ಮೆ ನಾನಾ ಬಗೆಯ ಆಟಿಕೆಗಳು ಇದ್ದರೂ ಅವು ಬೇಡವಾಗುತ್ತವೆ. ಇರುಳು ಆಕಾಶದಲ್ಲಿ ಚಲಿಸುವ ಚಂದಾ ಮಾಮನೇ ಆಟಿಕೆಯಾಗಬೇಕೆಂದು ಹಟ. ಎಂಥ ಅಪೂರ್ವ ಬೇಡಿಕೆ! ರಾಜಕುಮಾರನಾದರೇನು ? ಮಗುವಲ್ಲವೇ ? ಎಲ್ಲ ಕುಮಾರರ ಬೇಡಿಕೆಯೂ ಅಸಾಮಾನ್ಯ ಹಾಗೂ ಸಹಜ. ಮಕ್ಕಳ ಹಂಬಲ ಈಡೇರದಿದ್ದರೆ, ಅವು ಅಳುವಿನ ಮಾರಕಾಸ್ತ್ರ ವನ್ನೇ ಪ್ರಯೋಗಿಸುತ್ತವೆ "[೪೪] ಮಕ್ಕಳ ಸಹಜ ರೀತಿಯ ಬೇಡಿಕೆಗಳನ್ನು ಸಹ ವಿಶೇಷ ರೀತಿಯಲ್ಲಿ ವರ್ಣಿಸುವ ಪ್ರತಿಭೆ ತಾಯಿಗಿದೆ. ಹಾಗೆ ಅಸಹಜ ಬೇಡಿಕೆಗಳ ಕುರಿತು ಸಹ ಆಕೆಗೆ ಹೇಳಿಕೊಳ್ಳಕ್ಕಾಗದ ಭಾವನೆ ಇದೆ.

"ಹಾಲ ಬೇಡ್ಯತ್ತಾನ ಕೋಲ ಬೇಡಿ ಕುಣಿದಾನ
ಮೋಸರ ಬೇಡಿ ಕೆಸರು ತುಳಿದಾನ
ಕುಸಲದ ಗೆಜ್ಜೆ ಕೆಸರಾಯ್ತು !!

ಯಾತಕಳುತಾನೆಂದು ಎಲ್ಲರು ಕೇಳ್ಯಾರ
ಕಾಯದ ಹಾಲು ಕೆನೆ ಬೇಡಿ
ಕಂದಯ್ಯ ಕಾಡಿ ಕೈಬಿಟ್ಟು ಇಳಿಯಾನ " [೪೫]

ಹಾಲು, ಕೋಲು, ಮೋಸರು ಬೇಡಿ ಅತ್ತರೆ ತಂದುಕೊಡಬಹುದು. ಆದರೆ ಕಾಯದ ಹಾಲಿನ ಕೆನೆ ಎಲ್ಲಿಂದ ತರುವುದು. ಇಂಥ ಹಲವು ಬೇಡಿಕೆಗಳ ಕುರಿತು ತಾಯಿಗೆ ಯಾವುದೋ ಅನುಭವದ ಆನಂದ ತನ್ನ ಮಗನ ಈ ಅಸಹಜ ಬೇಡಿಕೆಗಳ ಕುರಿತು ಎಲ್ಲರಿಗೂ ಹೇಳಿ ಆನಂದ ಪಡುವಳು ಕೆಲವೊಮ್ಮೆ ಚಿಂತೆಯಿಂದ ಮರಗುವಳು.

"ಓಣ್ಯಾಗ ಅವಚಾರಿ ಮನಿಯಾಗ ರಿಪಿಗೇಡಿ
ಆಡಹ್ವಾದಲ್ಲಿ ಕಿಡಿಗೇಡಿ! ಬಾಲನ
ಹ್ಯಾಂಗ ಸಂಬಸಲೆ ಹಡೆದವ್ವ"[೪೬] !!

ಕಂದನನ್ನು ಹಿಡಿಯಲಾಗುತ್ತಿಲ್ಲ ಕಾಲು ಬಂದಾಗಿನಿಂದ ಯಾರ ಕೈಗೂ ಸಿಗನು ಅವನನ್ನು ಹಿಡಿಯುವುದೆಂದರೆ ಹುಲಿಯ ಹೆಜ್ಜೆ ಎಣಿಸಿದಂತೆ ಸಾಹಸಮಯ ಎನ್ನುತ್ತಾಳೆ. ಓಣಿಯಲ್ಲಿ, ಮನೆಯಲ್ಲಿ , ಹೋದಲ್ಲಿ ಬಂದಲ್ಲಿ ತುಂಟತನದಿಂದ ತಾಯಿಗೆ ಸಂಭಾಳಿಸಲು ಆಗುತ್ತಿಲ್ಲ. ಇಂಥ ಭಾವವನ್ನು ಸಹ ಸುಂದರನಾಗಿ ವಣಿಸಿರುವುದನ್ನು ಕಾಣಬಹುದು. ಕಂದಮ್ಮಗಳ ಎಷ್ಟು ಕಾಡಿದರೂ ತಾಯಿಗೆ ಎಳ್ಳಷ್ಟು ಬೇಸರವಿಲ್ಲ. ಕಂದನನ್ನು ಬಿಟ್ಟು ಇರಲಾರಳು. ಮನೆ ತುಂಬ ಮಕ್ಕಳಿದ್ದರೂ ಆಕೆಗೆ ಬೇಸರಿಕೆಯಾಗಲಿ ದಣಿವಾಗಲಿ ಇಲ್ಲ .

"ಅತ್ತರೆ ಅಳಲೆವ್ವ ಈ ಕೂಸು ನನಗಿರಲಿ
ಕೆಟ್ಟರ ಕೆಡಲಿ ಮನಿಗೆಲಸ! ಕಂದನಂಥ
ಮಕ್ಕಳಿರಲೆವ್ವ ಮನಿ ತುಂಬ!!" [೪೭]
ಎಂದು ಮನಬಿಚ್ಚಿ ಹಾಡುತ್ತಾಳೆ.
"ಕಂದಯ್ಯ ಅತ್ತರ ಕಣಗೀಲ ಕಾತಾವ
ಒಣಗಿದ್ದ ಬಾಳಿ ಚಿಗತಾವ! ಬಾಲನ
ಬರಡಾಕಳೆಲ್ಲ ಹೈನಾಗೆ
ಆಸರಕೆ ಬ್ಯಾಸರಕಿ ಯಾರಿಂದ ಕಳೆಯಲೆ
ಕೂಸ ಶರಣಯ್ಯ ತೊಡಿಮ್ಯಾಲ! ಆಡಿದರ
ಬಂದ ಬ್ಯಾಸರಕಿ ಬಯಲಾಗಿ!!" [೪೮]

ಹೀಗೆ ಕಂದನ ಅಳು ಹೂವಿನ ಪರಿಮಳವಾಗಿ, ಚಿಗಿದ ಬಾಳೆಗೊನಿಯಾಗಿ, ಹೈನವನ್ನು ಕೊಡುವ ಆಕಳಾಗಿ ಹೆತ್ತಮ್ಮನಿಗೆ ಕಂಡು ಬಂದಿದೆ. ತನ್ನ ಬದುಕಿನಲ್ಲಿ ಬಂದ ಆಸರಿಕೆ - ಬ್ಯಾಸರಿಕೆಗಳೆಲ್ಲ ತನ್ನ ಮಗುವಿನ ಆಟನೋಡಿ ಮರೆಯುತ್ತಾಳೆ. ಹಟ ಮಾಡುವ ಮಕ್ಕಳಿಂದಾಗಲಿ ಅತ್ತು ಬೇಸರ ತರುವ ಮಕ್ಕಳಿಂದಾಗಲಿ ತಾಯಂದಿರು ಎದೆಗುಂದದೆ ಸಂಯಮದಿಂದ, ಪ್ರೀತಿ ಅಕ್ಕರೆಯಿಂದ ಮಕ್ಕಳನ್ನು ಸಂಭಾಳಿಸುವರು. ಕಿರಿಕಿರಿ ಮಾಡಿ ಅಳುವ ಮಕ್ಕಳ ಬಾಯಿಯಿಂದ ಹೂ ಉದುರುತ್ತವೆ. ಜೊಲ್ಲು ಸುರಿಯುತ್ತವೆ ಎಂದು ವರ್ಣಿಸಿ ಹಾಡುತ್ತಾಳೆ.

ತನ್ನ ಕಂದನ ಮೇಲೆ ಜೀವವನ್ನೆ ಇಟ್ಟುಕೊಂಡ ತಾಯಿ ಸಮಾಜದ ಕೆಟ್ಟ ದೃಷ್ಟಿಯಿಂದ ರಕ್ಷಿಸಲು ಪ್ರಯತ್ನಿಸುತ್ತಾಳೆ. ಯಾವುದಾದರೂ ದೃಷ್ಟಿತಾಗಿ ಎಲ್ಲಿ ತನ್ನ ಮಗು ಅಪಾಯಕ್ಕೆ ತುತ್ತಾಗುತ್ತದೋ ಎಂಬ ಆತಂಕ ಆಕೆಗಿದೆ. ದೃಷ್ಟಿ ತೆಗೆದು ತನ್ನ ಕಂದನನ್ನು ತಾನು ಕಾಪಾಡಿಕೊಂಡೆ ಎಂಬ ಧನ್ಯತೆಯೂ ಆಕೆಯ ಭಾವದಲ್ಲಿದೆ. ಇಲ್ಲಿ ನಂಬಿಕೆ ಮೂಢನಂಬಿಕೆ ಪ್ರಶ್ನೆ ಮುಖ್ಯವಾಗಿ ಕಂಡು ಬರುವ ವಿಷಯವೆಂದರೆ ತಾಯಿಯ ವಾತ್ಸಲ್ಯ ಹಾಗೂ ಆಕೆಯ ಆರೈಕೆ. ಕೆಲವು ಸಲ ತನ್ನ ದೃಷ್ಟಿಯೇ ತಾಗಬಹುದು ಎಂಬ ಅನುಮಾನವೂ ಆಕೆಗಿದೆ. ತಾಯಿಯ ದೃಷ್ಟಿ ಮಗುವಿಗೆ ಬೇಗ ತಾಗುತ್ತದೆ ಎಂಬ ನಂಬಿಕೆ ನಮ್ಮ ಜನಪದರಲ್ಲಿದೆ.

"ತೊಟ್ಟಿಲದಾಗೊಂದು ತೊಳದ ಮುತ್ತಿನ ಕಂಡೆ
ಹೊಟ್ಟೆ ಮ್ಯಾಲಾಗಿ ಮಲಗ್ಯಾನ ! ಕಂದ್ಯೆಗ
ಮುತ್ತಿನ ದೃಷ್ಟಿ ತೆಗವೇನ !!

ತೊಟ್ಲಾನ ಕೂಸೀಗಿ ದಿಟ್ಟಿಯಾದಾವಂದ
ಕಟ್ಟೀದ ನವಿಲ ಗರಿಗೋಳ ! ಬಾಳಾಗ
ಕರಿಬೇವಿನ ದೃಷ್ಟಿ ತೆಗೆದೇನ !!

ಕೂಸೆಲ್ಲ ಕುಂದಣ ನತ್ತೆಲ್ಲ ಜಾವ್ರೂಳ
ಕಟ್ಟಿ ಕೆಳಗಾಡಿ ಬೆವತಾನ ! ನನ ಬಾಳ
ಹೊಸ ಮುತ್ತಿನ ದೃಷ್ಟಿ ತೆಗೆದೇನ " [೪೯]

ದೃಷ್ಠಿ ತಾಗಿದ ತನ್ನ ಮಗುವಿಗೆ ಮುತ್ತಿನ ದೃಷ್ಠಿ, ಕರಿಬೇವಿನ ದ್ರಷ್ಠಿ ತೆಗೆಯುವುದಾಗಿ ಹೇಳಿದ್ದಾಳೆ. ಇಲ್ಲಿ ತಾಯಿಯ ಭಾವ ಪ್ರಧಾನತೆ ಎದ್ದು ಕಾಣುತ್ತದೆ.

- **ಸಮಾನತೆಯ ಗ್ರಹಿಕೆಗಳು**

ಗಂಡು ಮಗು ಸಮಾಜದ ದೃಷ್ಠಿಯಲ್ಲಿ ನಿಜವಾದ ವಂಶೋದ್ಧಾರಕ ಹೆಣ್ಣು ಮಗುವಿಗಿಂತಲೂ ಗಂಡು ಮಗನೇ ಮೋಕ್ಷಕ್ಕೆ ದಾರಿಯಾಗುವನು, ಎನ್ನುವ ಪಿತೃಪ್ರಧಾನ ಗ್ರಹಿಕೆಗಳು ನಮ್ಮ ತಾಯಂದಿರಲಿ ಮನೆ ಮಾಡಿವೆ. ಹೆಣ್ಣು ಹೆತ್ತು ಗಂಡು ಮಗನ ಹೆರದೆ ಹೋದವಳು ಬಂಜೆಗೆ ಸಮ, ದೀಪಕ್ಕೆ ದಿಕ್ಕಿಲ್ಲದವಳು ಎಂದು ಹೀಯಾಳಿಸುವರು. ಆದರೂ ತಾಯಿ ಹೃದಯ ಮಕ್ಕಳ ಮೇಲೆ ಸಮಾನವಾದ ವಾತ್ಸಲ್ಯ ತೋರುತ್ತದೆ. ಗಂಡು ಸಂತಾನ ಮಹತ್ವದ ಕುರಿತು ಅನೇಕ ಜನಪದ ಗೀತೆಗಳು ಕಂಡು ಬಂದರೂ ಅದರೊಂದಿಗೆ ಹೆಣ್ಣು ಸಂತಾನಕ್ಕಾಗಿ ಹಾತೊರೆಯುವ ತಾಯಂದಿರನ್ನೂ ಕಾಣಬಹುದು. ಹೆಣ್ಣು ಹುಟ್ಟಿದ ಮನೆ ಹೆಗ್ಗಣ ಹೆತ್ತಿದ ಹಾಗೆ ಗಂಡು ಮಗ ಹುಟ್ಟಿದರೆ ಮನೆಯ ಚಿಲಕ ಚಿತ್ತಾರ ನಗುತ್ತವೆ ಎಂದು ಹೇಳುವ ನಮ್ಮ ತಾಯಂದಿರು ಹೆಣ್ಣು ಹುಟ್ಟಿದಾಗ ಸಂಭ್ರಮವೂ ಪಡುತ್ತಾರೆ. ಗಂಡು - ಹೆಣ್ಣು ಸಮಾನ ಹಾಗೂ ಹೆಣ್ಣು ಮಗು ಪಡೆದ ತಾನು ಧನ್ಯ ಎಂಬ ಭಾವವೂ ಗೀತೆಗಳಲ್ಲಿ ಮೂಡಿ ಬಂದಿದೆ. ತನಗೆ ಹೆಣ್ಣು ಹುಟ್ಟಿದರ ಕುರಿತು ಸಂತೋಷ ಇದೆ ಆದರೆ ತನ್ನ ಗಂಡನ ಮನೆಯಲ್ಲಿರುವರಿಗೆ ಈ ವಿಷಯ ಹೇಗೆ ಗ್ರಹಿಸುವರು ಎಂಬ ಭಯವಿದೆ. ಪುರುಷ ಗ್ರಹಿಕೆ ಸಮಾಜಕ್ಕಾಗಿ ಹೆಣ್ಣು ಮಕ್ಕಳು ಗಂಡು ಸಂತಾನಕ್ಕಾಗಿ ಹಾತೋರೆಯುತ್ತಾರೆ ವಿನ: ಮೂಲತ: ತಮಗೆ ಹೆಣ್ಣು ಮಗು ಸಾಕ್ಷಾತ ರವಿಚಿನ್ನ ಅಂದರೆ ತನ್ನ ಜನಿಸಿದ ಸುದ್ಧಿತಿಳಿದು ಎಲ್ಲಿ ತನ್ನ ಗಂಡನ ಮನೆಯವರು ಹೆದರುವರೋ ಎನ್ನುವ ಅನುಮಾನ ಆಕೆಗೆ ಇದೆ.

ಗಂಡು - ಹೆಣ್ಣು ಯಾವುದಾದರೊಂದು ಹೆತ್ತು ಸಂಭ್ರಮಿಸುವ ಭಾವ ನಮ್ಮ ಸಮಾಜದಲ್ಲ. ಹೆತ್ತ ಮಗು ಗಂಡಾಗಿದ್ದರೆ ಎಲ್ಲರಿಗೂ ಆನಂದವೋ ಆನಂದ, ಅದೇ ಹೆಣ್ಣು ಹುಟ್ಟಿದರೆ ಅಯ್ಯೋ............ ಎಂದು ಉದ್ಗಾರ ತೆಗೆಯುತ್ತಾರೆ. ಮುಖ ಗಂಟಿಕ್ಕುತ್ತಾರೆ. ಇದು ನಮ್ಮ ಪರಂಪರೆಯಲ್ಲಿ ನೆಲೆಯೂರಿದ ಗ್ರಹಕೆಯೇ ಆಗಿದೆ ಇಂಥಹ ಪೂರ್ವಾಗ್ರಹಿತ ಪರಿಸರದಲ್ಲಿ ಹೆಣ್ಣು ಹುಟ್ಟಿದರೆ ಸಹಜವಾಗಿ ತಾಯಿಗೆ ಆತಂಕ ಉಂಟಾಗುವುದು ಸಹಜವೇ ಆದರೆ ಮೂಲತ: ಹೆಣ್ಣಿನ ಜನನ ತಾಯಂದಿರಿಗೆ ಸಂತೋಷಕೊಡುವ ವಿಷಯ ಎಂಬುದನ್ನು ಹೀಗೆ ಹೇಳುತ್ತಾರೆ. ಹತ್ತು ಗಂಡಾದರೂ ಮತ್ತೆ ಬಂಜೆ ಎಂದು ಕರೆಯುವರು ದಟ್ಟೀಯ ಉಡುವ ಹೆಣ್ಣು ಹಡೆದರೆ ಮಕ್ಕಳ ತಾಯೆಂದು ಕರೆಯುತ್ತಾರೆ ಎಂದು ಜನಪದರಲ್ಲಿ ನಂಬಿಕೆ ಇದೆ.

ದನಿಯಾಳ ಹಡದರ
ಮಕ್ಕಳ ತಾಯಿಯೆಂದ ಕರದಾರ

"ಹೆಣ್ಣು ಹುಟ್ಯಾದಂತ ಹೇಳಿ ಖಳುವಲಿ ಬ್ಯಾಡ

ಹೆಣ್ಣಿಂದವರು ಹೆದರ್‍ಯಾರ! ಕಂದವ್ವ

ಹೆಣ್ಣಿಲ್ಲ ನಮಗ ರವಿಚಿನ್ನ !!"[೩೦]

ಎಂದು ತನ್ನ ಹೆಣ್ಣು ಮಗಳ ಯಾವ ಗಂಡಿಗೂ ಕಡಿಮೆ ಏನಿಲ್ಲ ತನ್ನ ಪಾಲಿಗೆ ಆಕೆ ರವಿಚಿನ್ನ ಎನ್ನುತ್ತಾಳೆ.

ಗಂಡು ಮಕ್ಕಳನ್ನು ಎಷ್ಟು ಹೆತ್ತುಕೊಟ್ಟರೂ ಬಂಜೆಂದು ಕರೆಯರು ಒಂದು ಹೆಣ್ಣು ಹೆತ್ತರೆ ಬಂಜೆತನ ನೀಗಿ ತಾಯಿಯೆಂದು ಕರೆಯುವರು ಎಂದು ಹೇಳುತ್ತಾರೆ. ಹೆಣ್ಣು ಹೆತ್ತಾಗ ಮಾತ್ರ ಹೆಣ್ಣಿನ ಜನ್ಮ ಸಾರ್ಥಕ ಎಂದು ನಂಬುವವರಿಗೂ ನಮ್ಮ ಸಮಾಜದಲ್ಲಿ ಕೊರತೆ ಇಲ್ಲ.

ಹೆಣ್ಣು ಹೆತ್ತು ಇನ್ನೊಬ್ಬರಿಗೆ ಕೊಡಬೇಕಾಗಿ ಬರುವದೆಂದು ಅಂದುಕೊಂಡರೂ ಅದಕ್ಕೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುತ್ತಾಳೆ ಹೇಗೆಂದರೆ,

"ಕುಂತಾಡು ಮಗಳೀಗಿ ಕೂದಲ ಬಿಟ್ಟೀನ

ನಗರದ ಚೌರಿ ತರಸೇನ ! ಮನಿಯಾನ

ತಮ್ಮಗ ಧಾರಿ ಎರೆದೇನ !! "[೩೧]

ಹೆಣ್ಣು ಹುಟ್ಟಿದರೆ ತನ್ನ ತವರುಮನೆ ಸಮೀಪವಾಗುವುದು ಎಂಬ ಆಸೆ ಆಕೆಯದು. ತನ್ನ ತಮ್ಮನಿಗೆ ಮಗಳನ್ನು ಧಾರೆಯರದು ತವರಿನಲ್ಲೂ ತನ್ನ ಭಾಂಧವ್ಯ ಚಿರವಾಗಿ ಇಟ್ಟುಕೊಳ್ಳಬೇಕು ಎಂಬ ಅಭಿಲಾಷೆ ಇಲ್ಲಿ ಕಾಣಬಹುದು. ನಮ್ಮ ತಾಯಂದಿರು ಪರಂಪರಾಗತವಾಗಿ ಬಂದ ಪುರುಷ ಮೌಲ್ಯವನ್ನು ಕೆಲಸಲ ಮೀರಿರುವುದುಂಟು. ಹೆಣ್ಣು ಹುಟ್ಟಿದಾಗ ತಿರಸ್ಕಾರ ಭಾವದಿಂದ ಮಾತನಾಡುವವರಿಗೆ ಸಂಚಿಹೊನ್ನಮ್ಮ ಚಾಟಿಯೇಟನ್ನು ಕೊಡುತ್ತಾಳೆ.

ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತರೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು

ಜನಪದ ಗೀತೆಗಳಲ್ಲಿ ಕಂಡುಬರುವ ತಾಯ್ತನದ ಹಾಡುಗಳು ಪುರುಷಪರ ಧೋರಣೆಯಿಂದ ಕೂಡಿದವು ಆಗಿವೆ. ಆದರೂ ಸಹ ಈ ಮಧ್ಯ 'ಸಣ್ಣಕ್ಕಿ ನನ ಸೊಸಿ' ಎಂಬ ಹಾಡು ಸ್ತ್ರೀ ಪರ ಧೋರಣೆ ಹೊಂದಿರುವುದು ಮಾತೃತ್ವ ಸಂಸ್ಕೃತಿಯ ಮುಂದುವರಿದ ಪಳುವಳಿಕೆ ಎಂದೆ ಭಾವಿಸಬಹುದು.

ಸಣ್ಣಕ್ಕಿ ನನ ಸೊಸಿ ಗುಣದಲಿ ದೊಡ್ಡಕ್ಕಿ
ಹೆಣ್ಣ ಕೂಸಿಗಿ ಜನ್ಮ ಕೊಟ್ಟಾಳ ಆಕೆಯ ಜೋ ಜೋ

ಹೆಣ್ಣ ಹುಟ್ಟ್ಯಾವಂತ ಹೊನ್ನುಂಗುರ ಮಾಡಿಸಿ
ಬಿಂದಗಿಲಿ ಮುತ್ತ ಬಡಸೀನಿ ಕೂಸಿಗಿ ಜೋ ಜೋ

ಬಿಂದಗಿಲಿ ಮುತ್ತ ಬಡಸೀನ ಕೂಸಿಗಿ
ಅರಳಲಿ ಮಾಡಿ ಇಟ್ಟನಿ ಮಾನಿಯಾಗ ಜೋ ಜೋ

ಏಸೆಅಂಗಿ ಹೊಲದೀನಿ ಏಸ ಟೊಪ್ಪಿಗಿ ಹೊಲಸಿನಿ
ಕುಂಚ ಕುಲಾಯಿ ಹೊಲದಿಟ್ಟನಿ ಮನಿಯಾಗ ಜೋ ಜೋ

ಹೆಣ್ಣ ಹುಟ್ಯಾ್ಯದಂತ ಹಿಗ್ಯಾದ ನನಜೀವ
ಹಿಗ್ಗಿಲಿ ಹುಗ್ಗಿಯ ಮಾಡೀನಿ ಮನಿಯಾಗ ಜೋ ಜೋ

ಹಿಗ್ಗಿಯ ಹುಗ್ಗಿಯ ಮಾಡೀನಿ ಮನಯಾಗ
ಆಡಮಕ್ಕಳ ಕರೆದ ಊಟಕ ಹಾಕೀನಿ ಜೋ ಜೋ

ಹೀಗೆ ಹೆಣ್ಣು ಹುಟ್ಟಿದ್ದಕ್ಕಾಗಿ ಸಂಭ್ರಮಪಡುವ ಜನರನ್ನು ಈ ಹಾಡು ಪ್ರತಿನಿಧಿಸುತ್ತದೆ. ಗಂಡು ಮಗು ಸಮಾಜದ ದೃಷ್ಟಿಯಲ್ಲಿ ನಿಜವಾದ ವಂಶೋದ್ಧಾರಕ ಹೆಣ್ಣು ಮಗುವಿಗಿಂತಲೂ ಗಂಡು ಮಗನೇ ಮೋಕ್ಷಕ್ಕೆ ದಾರಿಯಾಗುವನು ಎನ್ನುವ ಪಿತೃಪ್ರಧಾನ ಗ್ರಹಿಕೆಗಳು ನಮ್ಮ ತಾಯಂದಿರಲ್ಲಿ ಮನೆ ಮಾಡಿವೆ. ಹೆಣ್ಣು ಹೆತ್ತು ಗಂಡು ಮಗನ ಹೆರದೆ ಹೋದವಳು ಬಂಜೆಗೆ ಸಮ, ದೀಪಕ್ಕೆ ದಿಕ್ಕಿಲ್ಲದವಳು ಎಂದು ಹೀಯಾಳಿಸುವರು. ಆದರೂ ತಾಯಿ ಹೃದಯ ಮಕ್ಕಳ ಮೇಲೆ ಸಮಾನವಾದ ವಾತ್ಸಲ್ಯ ತೋರುತ್ತದೆ.

ಗಂಡು ಸಂತಾನ ಮಹತ್ವದ ಕುರಿತು ಅನೇಕ ಜನಪದ ಗೀತೆಗಳು ಕಂಡು ಬಂದರೂ ಅದರೊಂದಿಗೆ ಹೆಣ್ಣು ಸಂತಾನಕ್ಕಾಗಿ ಹಾತೊರೆಯುವ ತಾಯಂದಿರನ್ನೂ ಕಾಣಬಹುದು. ' ಸಣ್ಣಕ್ಕಿ ನನ ಸೊಸಿ 'ಗಳಂತಹ ಹಾಡುಗಳು ಈ ಮಾತಿಗೆ ಸಾಕ್ಷಿಯಾಗಿವೆ. 'ಹೆಣ್ಣಲ್ಲ ನಮಗ ರವಿಚಿನ್ನ' ' ಬಂಡಿಯ ಮುಂದ ಕಳಸಕ್ಕ ಒಪ್ಪವಂತ ಒಬ್ಬ ಹೆಣ್ಣು ಮಗಳ ಕೊಡದೇವ' ಎಂದು ಹೆಣ್ಣನ್ನು ಪಡೆದು ಸಂತೋಷಪಟ್ಟು ಗಂಡು ಹೆಣ್ಣು ಎಂದು ಭೇದ ಮಾಡದೆ ಸಮಾನವಾಗಿ ಕಂಡಿದನ್ನು ಗಮನಿಸಸಹುದು.

ಮಗನಾದವನು ಮನೆತನದ ದೀಪ ಬೆಳಗಿಸುವ ಎನ್ನುವ 'ಅಪುತ್ರಸ್ಯಗತಿರ್ನಾಸ್ತಿ' ಎಂಬ ವೈದಿಕ ಪರಂಪರೆಯ ಬಲವಾದ ನಂಬಿಕೆಗಳು ಗಂಡು ಮಗುವಿನ ಪ್ರಾಮುಖ್ಯತೆಯನ್ನು ಎತ್ತಿಹಿಡಿಯುತ್ತದೆ. ಆದರೆ ಮಾತ್ರ ಪ್ರಧಾನತೆಯ ಸಮಾಜದಲ್ಲಿ ಹೆಣ್ಣಿನ ಜನನಕ್ಕೆ ಪ್ರಾಮುಖ್ಯತೆ ಇದೆ. ಮಾತೃಮಾಲಿಯ ಸಮಾಜದಲ್ಲಿ ತಾಯಂದಿರು ಹೆಣ್ಣು ಸಂತಾನಕ್ಕಾಗಿ ಹರಕೆಗಳನ್ನು ಹೊತ್ತುಕೊಂಡು ದೇವರಲ್ಲಿ ಮೊರೆಯಿಡುತ್ತಾರೆ.

"ಗಂಡು ಮಕ್ಕಳು ಒಂಬತ್ತು ಕೊಡು ಸ್ವಾಮಿ
ಬಂಡೀಯ ಮುಂದ ಕಳಸಕ್ಕೆ ! ಒಪ್ಪುವಂಥ
ಒಬ್ಬ ಹೆಣ್ಣು ಮಗಳ ಕೊಡುದೇವ!! " [53]

ಎಂದು ಕೇಳಿಕೊಳ್ಳುವ ತಾಯಂದಿರನ್ನು ನೋಡಬಹುದು. ಹೆಣ್ಣು ಮಕ್ಕಳಾದರೆ ತನಗೆ ಆಸೆಯಾಗಬಹುದೆಂದು ತನಗೆ ಅರ್ಥ ಮಾಡಿಕೊಳ್ಳಬಹುದೆಂದು, ಕೆಲವುಸಲ ಹೆಣ್ಣಿಲ್ಲದವಳು ಎಂಬ ನಿಂದನೆಗೆ ಕಾರಣಳಾಗಬಹುದೆಂದು ಹೆಣ್ಣು ಮಗುವೂ ಇರಬೇಕು ಎಂದು ಅಪೇಕ್ಷಿಸುತ್ತಾಳೆ. ಆದರೆ ಈ ಅಪೇಕ್ಷೆ ಗಂಡು ಮಗುವಿನಷ್ಟು ತೀವ್ರವಾಗಿರುವುದಿಲ್ಲ ಎಂಬುದು ಸತ್ಯ.

ತಾಯ್ತನವೆಂಬ ಮೌಲ್ಯ ಶಾಶ್ವತವಾಗಿ ನೆಲೆನಿಂತಿರುವುದು ಆಕೆಯ ವಾತ್ಸಲ್ಯದಿಂದಲೇ ಜನಪದ ಗೀತೆಯಲ್ಲಿ ಕಾಣಬಹುದಾದ ವಾತ್ಸಲ್ಯಪ್ರಧಾನವಾದ ಈ ಹಾಡುಗಳನ್ನು ಹಾಡುವುದೆಂದರೆ ನಮ್ಮ ತಾಯಂದಿರಿಗೆ ಬಹು ಆನಂದ, ಆಕೆಯ ಸೌಂದರ್ಯ ಪ್ರಜ್ಞೆ, ತ್ಯಾಗ, ಪ್ರೀತಿ, ಸಂಯಮ, ಮಾತೃತ್ವ ಹೀಗೆ ಹತ್ತು ಹಲವುನವಿರು ಭಾವಗಳು ಇಲ್ಲಿ ದರ್ಶನಕೊಡುತ್ತವೆ. ಒಂದೊಂದು ಹಾಡು ಒಂದೊಂದು ಅನುಭವದ ಆಗರವೇ ಆಗಿದೆ. ಲಾಲಿ ಹಾಡಿ ತನ್ನ ತೋಳುಗಳನ್ನೆ ತಲೆದಿಂಬಾಗಿ ಕೊಡುವ ತಾಯಿಯ ಕಾರ್ಯವೈಖರಿಗೆ ಸೋಲದವರ್ಯಾರು?

ಟಿಪ್ಪಣಿಗಳು

1. 'ಮಹಿಳಾ ಜಾನಪದ' ಸಂ-ಡಾ.ಕೆ ಸಂಧ್ಯಾರಡ್ಡಿ ಪು.೧೮೯
2. 'ಗರತಿಯ ಹಾಡು'ಸಂ-ಹಲಸಂಗಿ ಗೆಳೆಯರು ಪು.೫೫
3. 'ಗರತಿಯ ಹಾಡು'ಸಂ-ಹಲಸಂಗಿ ಗೆಳೆಯರು ಪು.೫೫
4. 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ 'ಸಂ-ಬರಗೂರ ರಾಮಚಂದ್ರಪ್ಪ ಪು.೨೦೬
5. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೬೩
6. 'ಹೈ-ಕ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ 'ಲೇ-ಡಾ.ಚಂದ್ರಕಲಾ ಬಿದರಿ ಪು.೨೯೧
7. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೮
8. 'ಜಾನಪದ ಆನ್ವಯಿಕತೆ 'ಸಂ-ಡಾ.ಜಿ.ಆರ್ ತಿಪ್ಪೇಸ್ವಾಮಿ ಡಾ. ರಂಗಾರೆಡ್ಡಿಕೋಡಿರಾಂಪುರ ಪು.೧೪೪
9. 'ಅವ್ವ ಕಾಡಾದಿ ಗೌರವ್ವ ಹಾಡಿದ ಹಾಡು 'ಸಂ-ಡಾ.ನಿಲಾಂಬಿಕಾ ಪೋಲೀಸ್ ಪಾಟೀಲ ಪು.೨೨೬
10. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೪
11. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೨
12. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೬
13. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೪
14. 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ 'ಸಂ-ಬರಗೂರ ರಾಮಚಂದ್ರಪ್ಪ ಪು.೨೦೨
15. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೩೨
16. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೩೩
17. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೫೬
18. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೫
19. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೫
20. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೬ - ಪು.೮೫
21. 'ಜನಪದ ಸಾಹಿತ್ಯ 'ಸಂ-ಪ್ರೋ.ಪಿ.ಕೆ.ಖಂಡೋಬಾ ಪು.೪೧
22. 'ಜನಪದ ಸಾಹಿತ್ಯ 'ಸಂ-ಪ್ರೋ.ಪಿ.ಕೆ.ಖಂಡೋಬಾ ಪು.೪೧
23. 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ 'ಸಂ-ಬರಗೂರ ರಾಮಚಂದ್ರಪ್ಪ ಪು.೫೫
24. 'ಮಲ್ಲಿಗೆ ದಂಡೆ 'ಸಂ-ಕಾಪಸೆ ದೇವಪ್ಪನವರು ಪು.೧೧೫
25. 'ನನ್ನೊಡಲ ಹಾಡು ಪಾಡು 'ಲೇ-ಶಾಂತಾಮಠ ಪು.೮೦
26. 'ಜನಪದ ಸಾಹಿತ್ಯ 'ಸಂ-ಪ್ರೋ.ಪಿ.ಕೆ.ಖಂಡೋಬಾ ಪು.೪೧

27. 'ಕನ್ನಡ ಜನಪದ ಗೀತೆಗಳ ಸಾಂಸ್ಕೃತೀಕ ಅಧ್ಯಯನ 'ಲೇ-ಡಾ.ನ ತಪಸ್ವಿಕುಮಾರ ಪು.೮೬

28. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೬

29. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೬

30. 'ಅವ್ವ ಕಾಡಾದಿ ಗೌರವ್ವ ಹಾಡಿದ ಹಾಡು 'ಸಂ-ಡಾ.ನಿಲಾಂಬಿಕಾ ಪೋಲೀಸ್ ಪಾಟೀಲ ಪು.೨೧೩

31 . 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೭

32. 'ಕನ್ನಡ ಕಾವ್ಯದಲ್ಲಿ ವಾತ್ಸಲ್ಯ ಗೀತೆಗಳು 'ಲೇ-ಪ್ರೋ.ಎಸ್.ಬಾಣದ ಪು.೧೮

33. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೮- ಪು.೯೬

34. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦

35. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೬

36. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೬,೯೭,೯೮

37. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೯

38. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೯

39. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೯

40. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦-ಪು.೯೪

41. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೪

42. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೮೭-ಪು.೯[illegible]

43. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೪

44. 'ಕನ್ನಡ ಕಾವ್ಯದಲ್ಲಿ ವಾತ್ಸಲ್ಯ ಗೀತೆಗಳು 'ಲೇ-ಪ್ರೋ.ಎಸ್.ಬಾಣದ ಪು.೨೦

45. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೧ - ಪು . ೮೭

46. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೯೨

47. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೮೮

48. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೯೬,೯೭

49. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೮೮

50. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೮೮

51. 'ಗರತಿಯ ಹಾಡು 'ಸಂ-ಹಲಸಂಗಿ ಗೆಳೆಯರು ಪು.೯೦ - ಪು . ೯೩

52. 'ಜನಪದ ಸಾಹಿತ್ಯದಲ್ಲಿ . ಸ್ತ್ರೀ ಪರಿಕಲ್ಪನೆಗಳು 'ಸಂ-ಸಿ.ಡಿ ವೆಂಕಟೇಶ ಪು.೧೩೯

## ಅಧ್ಯಾಯ:-4 ಕಥನ ಗೀತೆಗಳಲ್ಲಿ ತಾಯ್ತನದ ಗ್ರಹಿಕೆಗಳು

- ಕ್ರೌರ್ಯವಾಗಿ ಬಂಜೆತನ
- ಗರ್ಭಿಣಿಯ ಹಿಂಸೆ.
- ತಾಯ್ತನದ ತ್ಯಾಗ
- ತಾಯ್ತನದ ಬಲಿದಾನ.

## ಅಧ್ಯಾಯ - 4

## ಕಥನಗೀತೆಗಳಲ್ಲಿ ತಾಯ್ತನದ ಗ್ರಹಿಕೆಗಳು

ಜನಪದ ಕಥನ ಗೀತೆಗಳು ಸಾಮಾನ್ಯ ಜನರ ಅನುಭವದ ಪ್ರತೀಕವಾಗಿವೆ. ಈ ಸಾಹಿತ್ಯದ ಯಾವುದೇ ಪ್ರಕಾರ ತೆಗೆದುಕೊಂಡರು ಅದು ಮನುಷ್ಯನ ಸುತ್ತಲಿನ ಸಂಬಂಧಗಳ ಬೆಸುಗೆಯಾಗಿ ಕಾಣುತ್ತದೆ.ಜನಪದ ಗೀತೆಗಳು ಮಹಿಳೆಯ ಎಲ್ಲ ಭಾವಗಳನ್ನು ತೆರೆದು ತೋರಿಸುವ ಬೀಗದ ಕೈಗಳಾಗಿವೆ. ಜನಪದ ಗೀತೆಗಳು ಸಾಹಿತ್ಯದಲ್ಲಿ ಪ್ರಮುಖವಾಗಿ ಕಂಡು ಬರುವ ಕಾವ್ಯ ಪ್ರಕಾರಗಳಲ್ಲಿ ಜನಪದ ಕಥನ ಗೀತೆಗಳಲ್ಲಿ ನಮ್ಮ ಜೀವನದ ಪ್ರತಿಬಿಂಬವನ್ನು ಕಾಣಬಹುದಾಗಿದೆ. ನಾವು ನಡೆದು ಬಂದ ರೀತಿ - ನೀತಿ, ಇಟ್ಟಹೆಜ್ಜೆಗಳು ತೊಟ್ಟ ರೂಪಗಳನ್ನು ಇಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಇಲ್ಲಿನ ಆಶಯಗಳು ಸಾಮಾಜಿಕ ಮೌಲ್ಯವನ್ನು ಹೊತ್ತು ನಿಂತವುಗಳು ಇಲ್ಲಿನ ಸಾಮಾನ್ಯ ಜನರ ಬದುಕಿನಲ್ಲಿನ ಏಳು - ಬೀಳಿನ ಘಟನೆಗಳು, ಏರು- ಪೇರುಗಳು. ಗುರುತಿಸುವುದು ಮುಖ್ಯವಾಗಿದೆ ಅಷ್ಟೇ ಅಲ್ಲ ಅವುಗಳಿಂದ ಪಾಠ ಕಲಿತು ಮುಂದಿನ ದಾರಿಯನ್ನು ಸುಂದರಗೊಳಿಸಿಕೊಳ್ಳಬೇಕಾಗಿದೆ.

ಇವು ಹೆಚ್ಚಾಗಿ ಸ್ತ್ರೀ ಕೇಂದ್ರಿತ ರಚನೆಗಳೇ ಆಗಿವೆ. ಮೇಲ್ನೋಟಕ್ಕೆ ಸುಂದರವಾಗಿ, ರೋಚಕತೆಯಿಂದ ಕೂಡಿದ ಇಲ್ಲಿನ ಕಥೆಗಳು ಪುರುಷ ಸಮಾಜ ವ್ಯವಸ್ಥಿತ ಕ್ರೌರ್ಯವೇ ಇಲ್ಲಿ ಅಡಗಿದೆ ಎಂಬುದು ಎದೆ ಬಗೆದು ನೋಡಿದಾಗ ಗಮನಕ್ಕೆ ಬರುತ್ತದೆ. ನಮ್ಮ ಸಮಾಜ ಮಹಿಳೆಯರನ್ನು ಯಾವ ಯಾವ ನೆಲೆಗಳಲ್ಲಿ ಶೋಷಣೆಗೆ ಈಡು ಮಾಡಿದೆ ಎಂಬುದು ಈ ಕಥನಗೀತೆಗಳಿಂದ ತಿಳಿದುಕೊಳ್ಳಬಹುದಾಗಿದೆ. ತ್ಯಾಗ-ಬಲಿದಾನಕ್ಕೆ ಸಾಕ್ಷಿಯಾದ ಕಥನಗೀತೆಗಳು ಪುರುಷ ಪಾತ್ರಗಳಿಗಿಂತಲೂ ಸ್ತ್ರೀ ಪಾತ್ರಗಳು ಹೆಚ್ಚು ಮನ ಮುಟ್ಟುತ್ತವೆ. ಜನಪದ ಕಥನಗೀತೆಗಳನ್ನು ಗಮನಿಸಿದಾಗ ಇಲ್ಲಿ ಹೆಚ್ಚಾಗಿ ಸ್ತ್ರೀ ಕುರಿತ ವೈವಿಧ್ಯಮಯವಾದ ವ್ಯಕ್ತಿತ್ವ ಪರಿಚಯ ನಮಗಾಗುತ್ತದೆ. ಹೆಣ್ಣಾದವಳು ಅಕ್ಕ-ತಂಗಿ, ತಾಯಿ-ಮಗಳು, ಅಜ್ಜಿ-ಮೊಮ್ಮಗ, ಪತ್ನಿ-ಸೊಸೆ ಇವುಗಳನ್ನು ನಿಭಾಯಿಸುತ್ತ, ಪುರುಷ ಕಲ್ಪಿತ ಲೋಕದಲ್ಲಿ ಬಲಿಪಶುವಾದ ವಿಷಯವನ್ನು ಮಾರ್ಮಿಕವಾಗಿ ಕಥನಗೀತೆಗಳು ಚಿತ್ರಿಸುತ್ತವೆ.

ಪ್ರಾಚೀನ ಕಾಲದಿಂದಲೂ ಕೌಟುಂಬಿಕ ಹಿಂಸೆಗೆ ಬಲಿಯಾಗುತ್ತಿರುವ ಹೆಣ್ಣಿನ ಸ್ಥಿತಿ ಚಿಂತಾಜನಕವಾಗಿದೆ.ಒಂದುಕಡೆ ವಂಶದ ಕುಡಿ ಕೊಟ್ಟರೆ ಮಾತ್ರ ಮನ್ನಣೆ ಎಂಬ ಆತಂಕ, ಇನ್ನೊಂದೆಡೆ ಗರ್ಭಧರಿಸಿದ ಹೆಣ್ಣನ್ನು ಹೊಟ್ಟೆಕಿಚ್ಚು, ಮಾತ್ಸರ್ಯಗಳಿಂದ ಅವಳನ್ನು ಹಿಂಸೆಗೆ ಒಳಪಡಿಸುವುದು. ಎರಡೂ ಸಂದರ್ಭದಲ್ಲೂ ಹೆಣ್ಣಿಗೆ ಶೋಷಣೆ ತಪ್ಪಿದ್ದಲ್ಲ. ಇದು ನಮ್ಮ ಸಮಾಜದ ಪುರುಷ ಪರ ಗ್ರಹಿಕೆಯ ಪರಿಣಾಮವೆಂದೆ ಹೇಳಬಹುದು. ಏಕೆಂದರೆ ಹೆಣ್ಣಿಗೆ ತಾಯಿ ಆಗಬೇಕೆಂಬ ಅನಿವಾರ್ಯತೆಯನ್ನು ಸೃಷ್ಟಿಸಿ ಹೆಣ್ಣು - ಹೆಣ್ಣಿಗೆ ಶತ್ರು ಎಂಬ ಕಲ್ಪನೆಯನ್ನು ಪ್ರತಿಬಿಂಬಿಸಲಾಗಿದೆ.

ಹೀಗಾಗಲೂ ಎಲ್ಲೋ ಒಂದು ಕಡೆ ಪುರುಷಪ್ರಧಾನ ಆಲೋಚನೆಗಳೆ ಕಾರಣವಾಗಿವೆ. ತಾಯ್ತನದ ಹಂಬಲ, ವಂಶ ಉದ್ಧರಿಸಲೇಬೇಕು ಎಂಬ ಸಾಮಾಜಿಕ ಒತ್ತಡಗಳು ಗರ್ಭಿಣಿ ಮಹಿಳೆಯನ್ನು ದೈಹಿಕವಾಗಿ ಮಾನಸಿಕವಾಗಿ ಹಿಂಸೆಗೆ ಗುರಿಮಾಡುತ್ತವೆ.

ಕಥನಪ್ರಧಾನವಾದ ಕಥನಗೀತೆಗಳು ಭಾವನಾತ್ಮಕವಾಗಿ ಮೂಡಿಬಂದಿದೆ. ಹೆಣ್ಣಿನ ತ್ಯಾಗ ಬಲಿದಾನವೇ ಇದರ ವಿಷಯ ವಸ್ತು. ಜನಸಾಮಾನ್ಯರ ಜೀವನದಲ್ಲಿ ನಡೆದ ಒಂದು ಘಟನೆಯೇ ಇದರ ಮುಖ್ಯ ವಸ್ತು. ಹೆಣ್ಣಿನ ಬದುಕಿನ ಅನುಭವವನ್ನು ಈ ಕಥನಗೀತೆಗಳ ಮೂಲಕ ಹೇಳಲ್ಪಟ್ಟಿದೆ. ಅದಕ್ಕಾಗಿ ಜನಪದ ಕಥನಗೀತೆಗಳ ಅಧ್ಯಯನವೆಂದರೆ ಹೆಣ್ಣಿನ ಸಾಂಸ್ಕೃತಿಕ ಬದುಕಿನ ಅಧ್ಯಯನವೇ ಆಗಿದೆ ಎನ್ನಬಹುದು.ಕಥನಗೀತೆಗಳಲ್ಲಿ ಹೆಣ್ಣಿನ ಸುತ್ತ ಹೆಣೆದಿರುವ ಆಕೆಯ ಒಟ್ಟು ಬದುಕನ್ನು ಎಳೆ -ಎಳೆಯಾಗಿ ನೋಡಿದಾಗ ಅಲ್ಲಿ ಬಂಜೆತನದ ಕ್ರೌರ್ಯ, ತಾಯ್ತನದ ತಲ್ಲಣಗಳನ್ನು ಗರ್ಭಿಣಿಯರಿಗಾಗಿ ನಡೆಸುವ ಸಂಭ್ರಮ, ಹಿಂಸಾತ್ಮಕ ಕೃತ್ಯ; ತಾಯಿಯ ಪಾತಿವ್ರತ್ಯದಸುರಿತು ಇವರು ಅನುಮಾನ ತಾಯ್ತನದ ತ್ಯಾಗ - ಬಲಿದಾನವನ್ನು ತಾಯ್ತನದ ನೆಲೆಯಲ್ಲಿ ನಿಂತು ನೋಡಿದರೆ ಹೆಣ್ಣಿನ ಬದುಕು ಪರಿಪೂರ್ಣ ಚಿತ್ರಣ ದೊರೆತಂತಾಗುತ್ತದೆ.

ತಾಯ್ತನದ ಅಧ್ಯಯನದ ಮಿತಿಗಾಗಿ ಆಯ್ಕೆ ಮಾಡಿಕೊಂಡ ಕಥನ ಗೀತೆಗಳೆಂದರೆ, ಬಂಜೆ ಹೊನ್ನಮ್ಮ (ಜನಪದ ಕಾವ್ಯ ಕಥೆಗಳು-ಜೀಶಂಪ), ನೀಲಕಂಠರಾಜನ ಹಾಡು (ಬೀದರ ಜಿಲ್ಲೆಯ ಬುಲಾಯಿ ಹಾಡುಗಳು-ಡಾ.ಜಗನ್ನಾಥ ಹೆಬ್ಬಾಳೆ), ಎಲ್ಲಮ್ಮನ ಹಾಡು (ನನ್ನೋಡಲ ಹಾಡು-ಪಾಡು-ಶಾಂತಾಮಠ),ಕಾಡ ಸಿದ್ದಮ್ಮ (ಕತ್ತಲ ದಾರಿ ದೂರ-ಕೃಷ್ಣಮೂರ್ತಿ ಹನೂರ), ಕಾಶೀಬಾಯಿ ಕಥಾನಕ (ಕನ್ನಡ ಜಾನಪದ ಪ್ರಜ್ಞೆ-ಡಾ. ವೀರಣ್ಣ ದಂಡೆ), ಚಂಗಾಳ್ವೆಯ ಹಾಡು (ಆಯ್ದ ಜನಪದ ಕಥಾನಕಗಳು - ಶಾರದಾದೇವಿ ಎಸ್. ಜಾಧವ), ಕಲಿಯುಗದ ಬಾಲೆ (ಕನ್ನಡ ಜಾನಪದ ಪ್ರಜ್ಞೆ - ಡಾ. ವೀರಣ್ಣ ದಂಡೆ ), ಸೌಂಸೌತೇರು ಕಥಾನಕ (ಕನ್ನಡ ಜಾನಪದ ಪ್ರಜ್ಞೆ - ಡಾ. ವೀರಣ್ಣ ದಂಡೆ ),ಅಸಗರಲಿ ಕಥಾನಕ (ಕನ್ನಡ ಜಾನಪದ ಪ್ರಜ್ಞೆ - ಡಾ. ವೀರಣ್ಣ ದಂಡೆ ) ,ಹುಳಿಯಾರ ಕೆಂಜಮ್ಮ (ಜನಪದ ಖಂಡ ಕಾವ್ಯ - ಜೀಶಂಪ), ಒಡ್ಡರ ಬೋಯಿ (ಜನಪದ ಕಥನ ಗೀತೆ-ಕೃಷ್ಣಸ್ವಾಮಿ ಕ.ರಾ), ಮದಗದ ಕೆಂಚವ್ವ ( ಕತ್ತಲ ದಾರಿ ದೂರ - ಕೃಷ್ಣಮೂರ್ತಿ ಹನೂರ ), ಮಲ್ಲಿಗೆ ಮಾದೇವಿ (ಜನಪದ ಕಥನ ಕಾವ್ಯಗಳು-ಡಿ. ಲಿಂಗಯ್ಯ), ನಾಗರ ಹಾವಿನ ಹಾಡು, ಮಲರಡ್ಡಿ ಸಾಹುಕಾರನ ಹಾಡು, ಸಂಗಮ್ಮನ ಹಾಡು , ನಾರದನ ಹಾಡು (ಬೀದರ ಜಿಲ್ಲೆಯ ಬುಲಾಯಿ ಹಾಡುಗಳು-ಜಗನ್ನಾಥ ಹೆಬ್ಬಾಳೆ), ಅಕ್ಕ-ತಂಗಿ ಯರ ಮನ ಎರಡಾಗುತಾವ (ಆಯ್ದ ಜನಪದ ಕಥಾನಕಗಳು - ಶಾರದಾದೇವಿ ಎಸ್. ಜಾಧವ), ಸೊಸೆಯ ಸತ್ವಪರೀಕ್ಷೆ (ಅವ್ವ ಕಾಡಾದಿ ಗೌರವ್ವ ಹಾಡಿನ ಹಾಡು - ನೀಲಾಂಬಿಕಾ ಪೋಲೀಸ ಪಾಟೀಲ), ಗರತಿ ಗೋಪೆವ್ವ , ಕುಸಬಿ ಬರ (ಗಿರಿಕೋಗಿಲೆ - ನೀಲಾಂಬಿಕಾ ಪೋಲೀಸ ಪಾಟೀಲ). ಈ ಕಥನ ಗೀತೆಗಳ ಸಂಕ್ಷಿಪ್ತ ವಿವರಣೆ ಹೀಗಿದೆ.

## ಬಂಜೆ ಹೊನ್ನಮ್ಮ

ಬಂಜೆಯ ದಾರುಣ ಸ್ಥಿತಿಯನ್ನು ತೆರೆದು ತೋರಿಸುವ ಈ ಕಥನಗೀತೆ ಹೆಣ್ಣಿನ ಬದುಕು ಹೇಗೆ ದುಸ್ಥಿತಿಗೆ ತಲುಪಿದೆ ಎಂಬುದನ್ನು ಇಲ್ಲಿ ಗಮನಿಸಬಹುದು .ಹೊನ್ನಮ್ಮಳ ಮೂಲಕ ನಮ್ಮ

ಸಮಾಜದಲ್ಲಿ ಬೇರು ಬಿಟ್ಟ ಬಂಜೆತನದ ಕುರಿತಾದ ಗ್ರಹಿಕೆಯ ಎಳೆ ಎಳೆಯನ್ನು ಬಿಚ್ಚಿಡುತ್ತದೆ. ಹೊನ್ನಮ್ಮಳ ಬದುಕು ಬಂಜೆತನಕ್ಕಾಗಿ ಹಂಬಲಿಸುವ ಹೆಣ್ಣಿನ ವಾಸ್ತವ ಚಿತ್ರಣವನ್ನು ಇಲ್ಲಿ ಗ್ರಹಿಸಬಹುದು ಎಳು ಜನ ಅಕ್ಕ ತಂಗಿಯರಲ್ಲಿ ಕೊನೆಯವಳಾದ ಹೊನ್ನಮ್ಮ ತನ್ನ ಅಕ್ಕಂದಿರಂತೆ ಮಕ್ಕಳನ್ನು ಪಡೆಯುವುದಿಲ್ಲ. ತನಗೆ ಮಕ್ಕಳಾಗದೆ ಹೋದರು ತನ್ನ ಅಕ್ಕಂದಿರ ಮಕ್ಕಳನ್ನೆ ತನ್ನ ಮಕ್ಕಳೆಂದು ಪ್ರೀತಿ ತೋರಿಸುತ್ತಾಳೆ. ಆದರೂ ಮಕ್ಕಳನ್ನು ಪಡೆಯಬೇಕು ಎಂಬ ಹಂಬಲ ಹೋಗುವುದಿಲ್ಲ. ಅನೇಕ ವ್ರತಾಚಾರಣೆ , ಸಾರ್ವಜನಿಕ ಕಾರ್ಯ ಮಾಡುವುದರ ಮೂಲಕ ಮಕ್ಕಳನ್ನು ಪಡೆಯಲೇಬೇಕು ಎಂದು ಹಪಹಪಿಸುತ್ತಾಳೆ. ಹೊನ್ನಮ್ಮ ಬೆಳೆಸಿದ ಧಾನ್ಯಗಳಾಗಲಿ ಹಣ್ಣುಗಳಾಗಲಿ , ಇಕೆ ಕಟ್ಟಿಸಿದ ಬಾವಿಯ ನೀರಾಗಲಿ ಯಾವುದೇ ಹಕ್ಕಿಗಳು ಸಹ ಮುಟ್ಟುವುದಿಲ್ಲ. ಬಂಜೆಯ ಕೈಯಿಂದ ಸ್ವೀಕರಿಸಿದ ಯಾವುದೇ ಪದಾರ್ಥ ತಮ್ಮನ್ನು ಬಂಜೆಯಾಗಿಸುತ್ತದೆ. ಎಂಬ ಗೊಳ್ಳು ನಂಬಿಕೆಯನ್ನು ಈ ಕಥಾನಕದಲ್ಲಿ ಚಿತ್ರಿಸಲಾಗಿದೆ. ಹೆಜ್ಜೆ-ಹೆಜ್ಜೆಗೂ ಬಂಜೆ ಎಂಬ ಶಬ್ದ ಕೇಳಿ ರೋಷಿ ಸಾಯಲು ಮುಂದಾಗುತ್ತಾಳೆ. ಆಗ ದೇವರು ಬಂದು ಗಂಡು ಮಗನ ವರ ಕೊಟ್ಟು ಮುಂದೆ ಹನ್ನೆರಡು ವರ್ಷನಾದ ಮಗನನ್ನು ಕಡಿದು ಅಡಿಗೆ ಮಾಡಿ ಊಟಕ್ಕೆ ಬಡಿಸಬೇಕು ಎಂದು ಹೇಳಿದಾಗ ಹೇಗಾದರೂ ತನ್ನ ಬಂಜೆತನ ನೀಗಿ ಹೋಗಲಿ ಎಂದು ಒಪ್ಪಿಕೊಳ್ಳುತ್ತಾಳೆ. ದೇವರ ಅಪ್ಪಣೆಯಂತೆ ಮಗು ಪಡೆದು ಹನ್ನೆರಡು ವರ್ಷದ ನಂತರ ತನ್ನ ಮಗನ ಬಲಿಕೊಟ್ಟು ದೇವರನ್ನು ಮೆಚ್ಚಿಸಿ ತನ್ನ ಮಗುವನ್ನು ಪುನ: ಪಡೆದುಕೊಳ್ಳುವ ಕಥೆ ಇಲ್ಲಿದೆ.

## ನೀಲಕಂಠರಾಜನ ಹಾಡು

ನೀಲಕಂಠರಾಜನು ತನ್ನ ರಾಜ್ಯ ನೋಡಿಕೊಳ್ಳಲು ಹನ್ನೆರಡು ವರ್ಷದ ವರೆಗೆ ತಾನು ಬರುವುದಿಲ್ಲ ಎಂದು ದೇಶಾಂತರ ಹೋಗುತ್ತಾನೆ . ಅರಣ್ಯದಲ್ಲಿ ವಿಶ್ರಾಂತಿ ತೆಗೆದುಕೊಳ್ಳುವಾಗ 'ಈರಾಜ ಮನಿದೊಳಗೆ ಇದ್ದರೆ ರತ್ನ ಸಿಂಗ ಮ ಟ್ಟುತ್ತಿದ್ದ ' ಎಂದು ಶಕುನ ನುಡಿಯುತ್ತವೆ. ಈ ಮಾತು ಕೇಳಿದ ನೀಲಕಂಠರಾಜ ಗುಪ್ತವಾಗಿ ಹೆಂಡತಿ ನೀಲಮ್ಮಳ ಬಳಿ ಬಂದು ರಾತ್ರಿ ಕಳೆಯುತ್ತಾನೆ ಹೋಗುವಾಗ ಆತನ ಹೆಂಡತಿ ನಿಮ್ಮ ತಾಯಿ ತಂದೆ ಕೇಳಿದರೆ ಏನು ಹೇಳಲಿ ಎಂದಾಗ, ಉಂಗುರ ಮತ್ತು ಧವತಿ ಸಂಕೇತವಾಗಿ ಕೊಟ್ಟು ಹೋಗುತ್ತಾನೆ. ಮುಂದೆ ನೀಲಮ್ಮ ಗರ್ಭಿಣಿಯಾಗುತ್ತಾಳೆ. ಈ ಕುರಿತಂತೆ ಹಾಡೊಂದು ಹೀಗಿದೆ.

ಸತ್ಯದವರು ನೀಲಕಂಟ ರಾಜ್ಯ ತಾನೆ ತಟ್ಟಿಯ
ತೇರುದವು ಮೇಲೆ ಸಮಾಯಿ ಉರಿಯುತ್ತವೆ ಕೊಲಣ್ಣ ಕೋಲೆ
ಆಗ ನೋಡೆ ನೀಲಕಂಟ ರಾಜ್ಯಗ ನೀಲಮ್ಮ ಕೈಯ
ಹಿಡಿದು ಕರೆದಕೊಂಡು ಓಯದು ಕೋಲೆಣ್ಣ ಕೋಲೆ

ಮನೆಗಾರ ಹೋಗಿದ್ದಾರೆ ಮಂಚ್ಚವ ಹಾಕಿದರೆ ಮಂಚ್ಚದ

ಮೇಲೆ ಕುಂತಿ ಎಲೆ ಅಡ್ಡಕಿ ತಿಂದಿದ್ದಾರೆ ಕೋಲೆಣ್ಣ ಕೋಲೆ

ಮಾತು ಕಥೆಯ ಆಗಿದ್ದಾರೆ ಕೋಲೆಣ್ಣ ಕೋಲೆ

ನಿದ್ರಿಯ ಹತ್ತಿ ಮಲಗಿದ್ದರೆ ಕೊಲೆಣ್ಣ ಕೋಲೆ

ಜೇಟ್ಟಂತ ಎದ್ದಿದ್ದಾರೆ ಜೆಳಕರ ಮಾಡಿದ್ದಾರೆ ಶಿವುಪೂಜೆ ಮಾಡಿದ್ದಾರೆ ಕೊಲೆಣ್ಣ ಕೋಲೆ

ನಿವಾರ ಬಂದಿರಿ ನಿವಾರ ನಡದಿರಿ ನಿಮ್ಮ ತಾಯಿ

ಏನು ಅನ್ನುತ್ತಾಳ ಕೋಲೆಣ್ಣ ಕೋಲೆ

ಕೈಯಲಿ ಉಂಗರ ಕೊಡುತ್ತಾ ನಮ್ಮ ತಾಯಿ ಏನ್ನು

ಅಂಬಳು ಕೊಲೆಣ್ಣ ಕೋಲೆ

ಈಗೆ ಬಂದಿರಿ ಈಗೆ ನಡೆದಿರಿ ನಿಮ್ಮ ತಂದೆಯವರು ಏನು

ಅನುತ್ತಾರೆ. ಕೊಲೆಣ್ಣ ಕೋಲೆ

ಕೈಯಗಿನ ದಸತಿಯ ಕೊಡುತಿನಿ ಖುನ ಹಿಡಿಯಲಾಕ

ಕೊಲೆಣ್ಣ ಕೋಲೆ

ಅಷ್ಟ ಮಾತು ಹೇಳಿದ್ದಾರೆ ಅಷ್ಟು ಮಾತು ಕೇಳಿದ್ದಾರೆ

ನಡುದಾರೆ ನೀಲಕಂಟ ರಾಜ್ಯ ಕೊಲೆಣ್ಣಾ ಕೋಲೆ

---------------------------------

ಅವರ ಹೋಗಿನ ಮೂರು ದಿವಸಕಾಲ ನೀಲಮ್ಮನ

ಅತ್ತಿ ನೀಲಮ್ಮಗರ ನೀರಹೋತ್ತಾಳೆ ಕೊಲೆಣ್ಣ ಕೋಲೆ

ಯಾಕೆ ನೀಲಮ್ಮ ಬಣ್ಣ ಬೀಳಿ ಕೊಲೆಣ್ಣ ಕೋಲೆ

ಯಾಕೆ ನೀಲಮ್ಮ ಬಣ್ಣ ಹಚ್ಚುಗ ಕೊಲೆಣ್ಣ ಕೋಲೆ

ಕಂಚಗರಿಗಿ ಗರ್ಭಿಣಿ ಆದಿಯಾನೆ ನೀಲಮ್ಮ ಕೊಲೆಣ್ಣ ಕೋಲೆ

ಹಾದಿಗರಗೆ ಗರ್ಭಿಣಿ ಆದಿಯಾನೆ ನೀಲಮ್ಮ ಕೋಲೆಣ್ಣ ಕೋಲೆ

(ಬೀದರ ಜಿಲ್ಲೆಯ ಬುಲಾಂ೯ ಹಾಡುಗಳು-ಹೆಬ್ಬಾಳೆ ಜಗನ್ನಾಥ ಪು.೮೩))

ಆಗ ಅತ್ತೆ - ಮಾವ ಅನುಮಾನ ಪಡುತ್ತಾರೆ. ಪ್ರಶ್ನೆ ಮಾಡುತ್ತಾರೆ. ಗಂಡ ಕೊಟ್ಟು ಹೋದ ಸಂಕೇತ ತೋರಿಸಿದರೂ ನಂಬಿದೆ ತವರಿಗೆ ಅಟ್ಟುತ್ತಾರೆ. ನಾನಾ ರೀತಿಯ ಹಿಂಸೆಯ ಪರೀಕ್ಷೆ ಮಾಡುತ್ತಾರೆ. ತವರಿನಲ್ಲೂ ಆಕೆಗೆ ಆಶ್ರಯ ದೊರೆಯುವುದಿಲ್ಲ. ಬದಲಿಗೆ ಆಕೆಯ ಅಣ್ಣ ಗರ್ಭಿಣಿ ಎಂಬುದನ್ನೂ ಲೆಕ್ಕಿಸದೆ ಅಟ್ಟ ಅರಣ್ಯದಲ್ಲಿ ಕೊಲೆ ಮಾಡಲು ಕರೆದುಕೊಂಡು ಹೋಗುತ್ತಾನೆ. ಆದರೆ ಕೊಲೆ ಮಾಡಲು ಮನಸ್ಸಾಗದೇ ಅಲ್ಲೆ ಬಿಟ್ಟು ಹೋಗುತ್ತಾನೆ. ಆಕೆ ಪತಿವ್ರತೆ ಇದ್ದುದ್ದಕಾಗಿ ಹುಲಿ,

ಕರಡಿಗಳು ಆಕೆಗೆ ಹಾನಿ ಮಾಡುವುದಿಲ್ಲ. ಹಳ್ಳಿಯೊಂದರ ಸಣ್ಣ ಬಸಪ್ಪನ ಗುಡಿಯಲ್ಲಿ ಆಶ್ರಯ ಪಡೆದು ಗಂಡು ಮಗುವಿಗೆ ಜನ್ಮ ಕೊಡುತ್ತಾಳೆ. ಆಕಡೆ ನೀಲಕಂಠ ಮನೆಗೆ ಹಿಂದಿರುಗಿ ತನ್ನ ಹೆಂಡತಿಗೆ ವಿಚಾರಿಸಿದಾಗ ವಿಷಯ ತಿಳಿದು ಅರಣ್ಯಕ್ಕೆ ಬಂದಾಗ ನೀಲಮ್ಮ ಮತ್ತು ತನ್ನ ಮಗುವನ್ನು ಹುಡುಕುತ್ತಾನೆ. ಕೊನೆಗೆ ನೀಲಮ್ಮ ಎಲ್ಲ ವಿಷಯ ತಿಳಿಸುತ್ತಾಳೆ. ಹೆಂಡತಿ - ಮಗುವಿಗೆ ಮನೆಗೆ ಕರೆದುತಂದು ತೊಟ್ಟಿಲಟ್ಟು ಸಂಭ್ರಮಿಸುತ್ತಾರೆ.

## ಎಲ್ಲಮ್ಮನ ಹಾಡು

ಎಲ್ಲಮ್ಮನ ಹಾಡು ಕರ್ನಾಟಕದಾದ್ಯಂತ ಕಂಡು ಬರುತ್ತದೆ. ಇದನ್ನು ವೃತ್ತಿ ಗಾಯಕರು ಹಾಡುತ್ತಾರೆ. ಎಲ್ಲಮ್ಮ ಸ್ತುತಿ ಮಾಡುವ ಈ ಹಾಡು. ಆಕೆಯ ಚರಿತ್ರೆಯನ್ನು ಹೇಳುತ್ತದೆ. ಜೋಗ ಬೇಡಲು ಹೊಗಲು ಎಲ್ಲಮ್ಮ ಹಸಿರು, ಕೆಂಪು, ಬಿಳಿ ಬಣ್ಣದ ಉಡುಗೆಗಳಿಂದ ಸಿಂಗರಿಸಿಕೊಳ್ಳುತ್ತಾಳೆ. ತನಗೆ ಮಕ್ಕಳಿಲ್ಲ ಎಂಬ ಕೊರಗು ಆಕೆಯ ಮನದಲ್ಲಿ ಕಾಡುತ್ತಿರುತ್ತದೆ. ಬಡಬಗ್ಗರಿಗೆ ಮಕ್ಕಳ ಫಲ ಕೊಟ್ಟ ದೇವರು ತನಗೆ ಏಕೆ ಮಕ್ಕಳ ಭಾಗ್ಯ ಕೊಡಲಿಲ್ಲ ಎಂದು ನೊಂದುಕೊಳ್ಳುತ್ತಾಳೆ. ಹಾದಿ- ಬೀದಿಯಲ್ಲಿ ಬರುವಾಗ ಜನರು 'ಬಂಜಿ' ಹೊಂಟಾಳೆಂದು ಹಿಯ್ಯಾಳಿಸುತ್ತಾರೆ. 'ಬಂಜಿ' ಎಂಬ ಶಬ್ದ ಕೇಳಿ ದು:ಖ ಮಾಡಿಕೊಳ್ಳುತ್ತಾಳೆ. ಗೆಳೆತಿಯರು ಸಹ ಆಕೆಯ ಮನ ನೋಯಿಸುತ್ತಾರೆ. ಸಪ್ತ ಸಮುದ್ರ ದಾಟಿ ಶಿವನ ಬಾಗಿಲಿಗೆ ಹೋಗಿ ಹಕ್ಕಿ - ಪಕ್ಕಿಗಳಿಗೆ, ಕ್ರಿಮಿ - ಕೀಟಗಳಿಗೆ ಮಕ್ಕಳ ಫಲ ಕೊಟ್ಟಿರುವೆ, ನನಗೂ ಮಕ್ಕಳನ್ನು ಕೊಡು ಎಂದು ಕೇಳುತ್ತಾಳೆ. ಹುಟ್ಟಿದ ಮಗ ನಿನಗೆ ದಕ್ಕಲ್ಲ ಎಂದು ಶಿವ ಹೇಳಿದಾಗ' ಸಂಜೀಗಿ ಹುಟ್ಟಲಿ ಮುಂಜೀಲಿ ಸಾಯಲಿ ಬಂಜಿಯೆಂಬ ಶಬುದ ಅಳಿಯ ಎಂದು ಬೇಡಿಕೊಳ್ಳುತ್ತಾಳೆ. ನನ್ನ ಹೊಟ್ಟಿಯಲ್ಲಿ ಹುಟ್ಟಿ ನನ್ನ ಕೊರಳು ಕೊಯ್ದರು ಚಿಂತೆಯಿಲ್ಲ ಮಕ್ಕಳನ್ನು ಕೊಡು ಎನ್ನುತ್ತಾಳೆ. ಮುಂದೆ ಎಲ್ಲಮ್ಮ ತಾಯಿಯಾಗುತ್ತಾಳೆ.

## ಕಾಡ ಸಿದ್ದಮ್ಮನ ಹಾಡು

ವಿಸ್ತಾರವಾಗಿ ಕಂಡು ಬರುವ ಕಾಡ ಸಿದ್ದಮ್ಮನ ಕಥಾನಕ ರೋಚಕತೆಯಿಂದ ಕೂಡಿದೆ. ಚದುರಂಗರಾಯನೆಂಬ ಅರಸ ಐದು ಜನ ಹೆಂಡತಿಯರನ್ನು ಪಡೆದರೂ ಮಕ್ಕಳಾಗುವುದಿಲ್ಲ .ಆಗ ಪ್ರಧಾನಿಯರು ರಾಜನಿಗೆ ಮಕ್ಕಳಿಲ್ಲ ವೆಂದು ಹಿಯಾಳಿಸಿ ನುಡಿಯುದನ್ನು ಕೇಳಿ ಇನ್ನೊಂದು ಹೆಣ್ಣನ್ನು ಮದುವೆಯಾಗಲು ಕಾಡಿಗೆ ಹೊರಡುತ್ತಾನೆ. ಕಾಡಿನಲ್ಲಿ ಅನಾಥೆಯಾದ ಸಿದ್ದಮ್ಮನನ್ನು ಕಾಡುಸಿದ್ದೇಶ್ವರ (ದೇವರು ) ಕಾಪಾಡಿ ಬೆಳೆಸಿ ಮುಂದೆ ಚದುರಂಗ ರಾಯನೊಂದಿಗೆ ಮದುವೆ ಮಾಡುತ್ತಾನೆ. ಕಾಡು ಸಿದ್ದಮ್ಮಳನ್ನು ಅರಮನೆಗೆ ಕರೆದುಕೊಂಡು ಬಂದ ಚದುರಂಗರಾಯ ಹೆಂಡತಿಯನು ಚನ್ನಾಗಿ ನೋಡಿಕೊಳ್ಳುತ್ತಾನೆ. ಮುಂದೆ ಕಾಡು ಸಿದ್ದಮ್ಮ ಗರ್ಭಿಣಿಯಾಗುತ್ತಾಳೆ. ಇದನ್ನು ಐದು ಜನ ಸವತಿಯ ರು ಸಹಿಸಿಕೊಳ್ಳದೇ, ಹೆರಿಗೆ ಸಂದರ್ಭದಲ್ಲಿ ನಾನಾ ರೀತಿಯ ತೊಂದರೆ ಕೊಡುತ್ತಾರೆ. ಈ ತೊಂದರೆ ಹಿಂಸೆಗೆ ತಿರುಗಿ ಕ್ರೂರವಾಗಿ ವರ್ತಿಸುತ್ತಾರೆ. ಗಂಡು ಮಗುವನ್ನು

ಜನ್ಮ ಕೊಟ್ಟ ಸಿದ್ದಮ್ಮನಿಗೆ ಮಗುವಿನ ಬದಲಿಗೆ ಪೊರಕೆ, ಒನಕೆ, ಗುಂಡು ಹುಟ್ಟಿದೆ ಎಂದು ಸುಳ್ಳು ಹೇಳುತ್ತಾರೆ. ಇತರ ಹೆಂಡತಿಯರ ಮಾತು ಕೇಳಿದ ಚದುರಂಗ ರಾಜ ಕಾಡ ಸಿದ್ದಮ್ಮಳನ್ನು ಕೊಲ್ಲಲು ಪ್ರಧಾನಿಗೆ ಆಜ್ಞೆ ಕೊಡುತ್ತಾನೆ. ಆದರೆ ಪ್ರಧಾನಿ ಆಕೆಯನ್ನು ಕೊಲ್ಲದೆ ಗುಹೆಯೊಂದಲ್ಲಿ ಬಿಟ್ಟು ಬಂಡೆಗಲ್ಲು ಹಚ್ಚಿ ಹೋರಟು ಹೋಗುತ್ತಾನೆ. ಈ ಕಡೆ ಸಿದ್ದಮ್ಮಳಿಗೆ ಹುಟ್ಟಿದ ಮಕ್ಕಳನ್ನು ಸವತಿಯಲ್ಲು ಕೊಲೆ ಮಾಡಿ ಬಿಸಾಡುತ್ತಾರೆ. ಆದರೆ ಕಾಡು ಸಿದ್ದೇಶ್ವರನ ಕೃಪೆಯಿಂದ ಮಕ್ಕಳು ಬದುಕಿ ತನ್ನ ತಾಯಿಯನ್ನು ಸೇರುವ ಕಥೆ ಮುಂದೆ ರೋಚಕತೆಯಿಂದ ಕೂಡಿದೆ. ಸುಖಾಂತದಿಂದ ಕೂಡಿದ ಈ ಕಥೆ ಮನುಷ್ಯನ ಜೀವನದಲ್ಲಿ ಮಕ್ಕಳ ಬಯಕೆ ಹಾಗೂ ಅದಕ್ಕಾಗಿ ನಡೆಸುವ ಸಂಘರ್ಷದ ಗ್ರಹಿಕೆ ಇಲ್ಲಿ ಕಾಣಬಹುದು.

## ಕಾಶೀಬಾಯಿ ಕಥಾನಕ

ತನ್ನ ಚೊಚ್ಚಲ ಬಾಣತನಕ್ಕಾಗಿ ತವರಿಗೆ ಬಂದ ಕಾಶೀಬಾಯಿ ಸಣ್ಣ ಹಸುಳೆಯ ತಾಯಿಯಾಗಿರುತ್ತಾಳೆ. ಆಕೆಯ ಗಂಡ ಕರೆಯಲು ಬಂದಾಗ ತವರವರು ಮಗು ಇನ್ನೂ ಚಿಕ್ಕದು ಬ್ಯಾಸಗಿ ದಿವಸ ಬೇರೆ ಎಂದು ಖಳಿಸದಿದ್ದಾಗೆ ಕೋಪಗೊಂಡು ಹಿಂತಿರುಗುತ್ತಾನೆ. ಕಾಶಿಬಾಯಿ ದಿಗಿಲುಗೊಂಡು ಎಳೆಗೂಸನ್ನು ಎತ್ತಿಕೊಂಡು ಗಂಡನ ಮನೆಗೆ ಹೋಗಲು ಸ್ಟೇಷನ್ನಿಗೆ ಬರುತ್ತಾಳೆ. ಅಲ್ಲಿ ಸ್ಟೇಷನ್ನ ಮಾಸ್ತರ ಇತನ ರೂಪ ನೋಡಿ ಮೋಹಿಸಿ ವಂಚಿ ಸಿ ತನ್ನ ಕೋಣೆಗೆ ಕರೆದುಕೊಂಡು ಹೋಗುತ್ತಾನೆ. ಅವನ ನೀಚ ಬುದ್ಧಿ ತಿಳಿದ ಕಾಶಿಬಾಯಿ ಅವನಿಂದ ಪಾರಾಗಲು ಹವಣಿಸುತ್ತಾಳೆ. ತನ್ನ 'ಪತಿವ್ರತ' ಕ್ಕೆ ಉರುಲು ಬಂದಿತು ಎನ್ನುತ್ತಾಳೆ. ತನ್ನ ಹಸುಗೂಸನ್ನು ಕೋಣೆಯಲ್ಲಿ ಬಿಟ್ಟು ಹೊರಬಂದು ಚಿಲಕ ಹಾಕುತ್ತಾಳೆ. ಹೂವಿನಂಥ ಕೂಸು ರಾಕ್ಷಸನ ಕೈಗೆ ಸಿಗುತ್ತದೆ. ನಾನು ಹೇಳಿದಂತೆ ಕೇಳದೆ ಹೋದರೆ ಮಗುವನ್ನು ಕೊಲ್ಲುವುದಾಗಿ ಹೇಳುತ್ತಾನೆ. ಆಗ ಕಾಶಿಬಾಯಿ ತನ್ನ ಮತ್ತೈದಿತನ ಗಟ್ಟಿ ಇದ್ದರೆ ಇಂಥ ಎಷ್ಟು ಮಕ್ಕಳನ್ನು ಬೇಕಾದರೂ ಹಡೆಯುತ್ತೇನೆ ಎಂದು ಪ್ರತ್ತ್ಯುತ್ತರ ಕೊಡುತ್ತಾಳೆ. ಸ್ಟೇಷನ ಮಾಸ್ತರನ ತಡ ಮಾಡದೆ ಮಗುವಿನ ದೇಹವನ್ನು ತುಂಡು ತುಂಡಾಗಿ ಕತ್ತರಿಸುತ್ತಾನೆ. ಈ ಕಥನ ಗೀತೆಯಲ್ಲಿ ಕಾಶಿಬಾಯಿ ತನ್ನ ಶೀಲ ರಕ್ಷಣೆಗಾಗಿ ತನ್ನ ತಾಯ್ತನವನ್ನೆ ಬಲಿ ಕೊಟ್ಟಿರುವುದು ಕಾಣಬಹುದು.

## <u>ಚೆಂಗಾಳ್ಳೆಯ ಹಾಡು</u>

ಈ ಕಥನ ಗೀತೆ ಚಂಗಾಳ್ವೆ ಎಂಬ ಒಬ್ಬ ಭಕ್ತಳ ಕಥೆಯನ್ನು ಒಳಗೊಂಡಿದೆ. ಭಕ್ತಿಯ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದು. ಸೋಮವಾರದ ದಿನದಂದು ಒಬ್ಬ ಗುರು ಸ್ವಾಮಿ ಭೀಕ್ಷಕ್ಕೆ ಬರುತ್ತಾನೆ. ಆಗ ಚಂಗಾಳ್ವೆ ದೇವರ ಮನೆಗ್ಹೋಗಿ ಮುತ್ತನ್ನು ತಂದು ನೀಡಲು ಬರುತ್ತಾಳೆ. ಅದನ್ನು ಕಂಡ ಸ್ವಾಮಿ ನನಗೆ ಈ ಮುತ್ತು ರತ್ನದ ಆಸೆ ಇಲ್ಲ. ಊಟ ನೀಡು ಎಂದು ಕೇಳುತ್ತಾನೆ.

ಗುರುಸ್ವಾಮಿಯ ಊಟಕ್ಕಾಗಿ ಚಂಗಾಳ್ವೆ ಸಿದ್ಧತೆ ಮಾಡುತ್ತಾಳೆ. ಹೋಳಿಗೆ ಅನ್ನ ನೀಡಲು ಬಂದಾಗಿ ತಾನು ಈ ಊಟ ಮಾಡುವುದಿಲ್ಲ ನನಗೆ ನಿನ್ನ ಮಗುವನ್ನು ಕೊಯ್ದು ಅಡಿಗೆ ಮಾಡಿ ಬಡಿಸಿದಾಗ ಊಟ ಮಾಡುವುದಾಗಿ ಹೇಳುತ್ತಾನೆ. ಸ್ವಾಮಿಯ ಮಾತನ್ನು ಮೀರದೆ ಭಕ್ತಳಾದ ಚಂಗಾಳ್ವೆ ಶಾಲೆಗೆ ಹೋದ ಮಗನನ್ನು ಕರೆದು ವಿಷಯ ತಿಳಿಸಿದಾಗ, ಆಕೆಯ ಮಗ ಕೂಡ ಅದಕ್ಕೆ ಒಪ್ಪಿ ತನನ್ನು ಕೊಯ್ದು ಅಡಿಗೆ ಮಾಡಲು ತಿಳಿಸುತ್ತಾನೆ. ಮಗನ ಕುತ್ತಿಗೆ ಕೊಯ್ದು ನೆಲುವಿನ ಮೇಲೆ ಇಟ್ಟು ದೇಹದಿಂದ ಅಡಿಗೆ ತಯಾರಿಸುತ್ತಾಳೆ. ಗುರು ಸ್ವಾಮಿಗೆ ಎಡೆಮಾಡುತ್ತಾಳೆ. ಊಟ ಪ್ರಾರಂಭಿಸುವಾಗ ಸ್ವಾಮಿ ಮಗನನ್ನು ಕರೆಯಲು ಹೇಳುತ್ತಾನೆ. ಆಗ ಚಂಗಾಳ್ವೆ ಇರುವ ಮಗನೊಬ್ಬನನ್ನು ಕೊಯ್ದು ಅಡಿಗೆ ಮಾಡಿದ್ದೇನೆ. ಈಗ ಮಗ ಎಲ್ಲಿಂದ ಬರುವನು ಎಂದಾಗ ಮಾಳಿಗೆ ಏರಿ ಕೂಗು ಎನ್ನುತ್ತಾನೆ. ಚಂಗಾಳ್ವೆ ಹಾಗೆ ಮಾಡುವಳು. ಆಗ ಕೂಡಲೆ ಮಗ ಬರುತ್ತಾನೆ. ಈಕೆಯ ಭಕ್ತಿಗೆ ಮೆಚ್ಚಿ ದೇವರು ಸತ್ತ ಮಗನನ್ನು ಬದುಕಿಸಿಕೊಡುತ್ತಾನೆ.

### ಕಲಿಯುಗದ ಬಾಲೆ

ಈ ಕಥಾನಕದಲ್ಲಿ ಹೆಣ್ಣೊಬ್ಬಳು ತನ್ನ ವ್ಯಭಿಚಾರದ ಗುಣದಿಂದ ತಾನು ಹೆತ್ತ ಮಕ್ಕಳನ್ನೇ ಬಲಿಕೊಟ್ಟ ದಾರುಣ ಚಿತ್ರಣವಿದೆ. ದಂಡಿಗೆ ಹೋದ ಪತಿಯನ್ನು ವಂಚಿಸಿ ಅನೈತಿಕ ಸಂಬಂಧ ಹೊಂದಿ ಅದು ಮಕ್ಕಳಿಗೆ ತಿಳಿದಾಗ ತಾನು ಹೆತ್ತ ಮಕ್ಕಳು ಎಂದು ಲೆಕ್ಕಿಸದೆ ಕೊಂದು ಹಾಕುತ್ತಾಳೆ. ತನ್ನ ಅನಾಚಾರದ ವಿಷಯ ಮಕ್ಕಳು ಎಲ್ಲಿ ತನ್ನ ತಂದೆ ತಿಳಿಸುತ್ತಾರೋ ಎಂಬ ಆತಂಕ ಹೊಂದಿ ತನ್ನ ಮಕ್ಕಳನ್ನು ಹಿಂಸಿಸಿ ಸಾಯಿಸುತ್ತಾಳೆ.ಆ ಕಡೆ ಕೆಟ್ಟ ಕನಸು ಕಂಡ ಮಕ್ಕಳ ತಂದೆ ಧಾವಿಸಿ ಮನೆಗೆ ಬರುತ್ತಾನೆ. ಬಂದ ಕೂಡಲೇ ಮಕ್ಕಳನ್ನು ಕೇಳಿದಾಗ ನಾನಾ ಕಾರಣಗಳನ್ನು ಹೇಳುತ್ತಾಳೆ . ಊಟದಲ್ಲಿ ವಿಷ ಬೆರೆಸಿ ಗಂಡನಿಗೆ ನೀಡುತ್ತಾಳೆ. ಚಳಿ ಜ್ವರ ಬಂದ ಗಂಡನನ್ನು ಮಕ್ಕಳ ಹೆಣ ಮುಚ್ಚಿಟ್ಟ ಕೊಟ್ಟಿಗೆಗೆ ಕರೆದುಕೊಂಡು ಹೋಗಿ ಹೊರಗಿನಿಂದ ಬೀಗ ಹಾಕಿ ಮುಚ್ಚುತ್ತಾಳೆ. ಆದರೆ ಕೊನೆಯಲ್ಲಿ ಶಿವ - ಪಾರ್ವತಿಯರು ಪ್ರತ್ಯೇಕ್ಷರಾಗಿ ಸತ್ತ ಮಕ್ಕಳನ್ನು ಗಂಡನನ್ನು ಬದುಕಿಸಿ ತಾಯಿಯನ್ನು ಶಿಕ್ಷಿ ಸುತ್ತಾರೆ. ಇಲ್ಲಿ ಒಬ್ಬ ತಾಯಿ ತನ್ನ ಕಾಮದಾಸೆಗೆ ಮಕ್ಕಳನ್ನ ಬಲಿಕೊಟ್ಟು ತಾಯ್ತನಕ್ಕೆ ಕಪ್ಪುಚುಕ್ಕೆಯಾಗಿ ಕಂಡು ಬರುತ್ತಾಳೆ. ತಾಯಿಯ ಕುರಿತಂತೆ ಈ ಕಥಾನಕದಲ್ಲಿ ವಿಶಿಷ್ಟವಾದ ಗ್ರಹಿಕೆಯನ್ನು ಗಮನಿಸಬಹುದು.

### ಸೌಂಸೌತೇರು ಕಥಾನಕ

ಈ ಕಥಾನಕದಲ್ಲಿ ಸವತಿ ಮಾತ್ಸರ್ಯಕ್ಕೆ ಮಗು ಬಲಿಯಾಗುವುವ ದೃಶ್ಯವಿದೆ. ಮಕ್ಕಳಾಗದೆ ಇರುವ ಒಬ್ಬ ಸಾಹುಕಾರ ಎರಡನೇ ಮದುವೆ ಆಗಿರುತ್ತಾನೆ. ಬಹಳ ದಿನಕ್ಕೆ ಹಿರಿಯ ಹೆಂಡತಿಗೆ ಗಂಡು ಮಗು ಜನಿಸುತ್ತದೆ. ಸಾಹುಕಾರ ವ್ಯಾಪಾರಕ್ಕೆಂದು ಹೋಗುತ್ತಾನೆ. ಅಕ್ಕ-ತಂಗಿಯರಂತೆ ಇದ್ದ

ಇಬ್ಬರು ಸವತಿಯರಲ್ಲಿ ಕಿರಿಯುವಳ ಮನಸ್ಸಿನಲ್ಲಿ ಹೊಟ್ಟೆಕಿಚ್ಚು ತುಂಬಿಕೊಳ್ಳುತ್ತದೆ. ಕೂಸಿನ ತಾಯಿ ನೀರಿಗೆ ಹೋದಾಗ ಒಲೆಯ ಮೇಲೆ ಔಡಲ ಗಡಗಿ ಇಟ್ಟು ಕುದಿಸುತ್ತಾಳೆ. ಆ ಕುದಿಯುವ ಎಣ್ಣೆಯಲ್ಲಿ ಹಸುಗೂಸನ್ನು ಎಸೆಯುತ್ತಾಳೆ. ತನ್ನ ಮಗು ಸತ್ತ ವಿಷಯ ತಿಳಿದು ಸವತಿಯನ್ನು ಜರಿದು ಗೋಳಿಡುತ್ತಾಳೆ. ತನ್ನ ಕರುಳಕುಡಿ ಸತ್ತ ವಿಷಯ ತಿಳಿದ ಸಾಹುಕಾರ ಕೂಡ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ನಂತರ ಊರ ಹಿರಿಯರು ಪೋಲಿಸರಿಗೆ ಕರೆಯಿಸಿ ಸವತಿಗೆ ಗಲ್ಲುಶಿಕ್ಷೆ ಕೊಡುತ್ತಾರೆ.

## ಅಸಗರಲಿಕಥಾನಕ

ಹುಸೇನರ ಹೆಂಡತಿ ಬಾನೊ ಎಂಬ ಹೆಣ್ಣು ಮಗಳು ತನ್ನ ಆರು ತಿಂಗಳ ಮಗು ಅಸಗರನನ್ನು ಕರೆದುಕೊಂಡು ರಣರಂಗಕ್ಕೆ ಹೋದಾಗ ಶತ್ರುವಿನ ಬಾಣ ಬಂದು ಮಗ ಅಸಗರನ ಎದೆಗೆ ಬಂದು ಚುಚ್ಚಿ ಮರಣ ಹೊಂದುತ್ತಾನೆ. ಆ ಸಂಧರ್ಭದಲ್ಲಿ ತಾಯಿ ಬಾನೊ ಮಾಡುವ ಪ್ರಲಾಪ ಈ ಕಥಾನಕದಲ್ಲಿ ಚಿತ್ರಿತಗೊಂಡಿದೆ. ಇಲ್ಲಿ ತಾಯಿಯೊಬ್ಬಳ ಗೋಳಾಟ ಮುಗಿಲು ಮುಟ್ಟಿದೆ. ಹೇಗೆಂದರೆ

ಹೊತ್ತ ಹ್ಯಾಂಗ ಗಳಿಯಲಿ ಕೂಸ ಇಲ್ಲದ
ವ್ಯರ್ಥ ಸಾಯಿತೀನಿ ಮಗ ಎದಿವಡದ

ನೋಡೊ ಅಸಗರ ತುಸು ಕಣ್ಣ ತೆರದ
ನಾ ಏನು ಅಂದಿದ ಮನನಿಡಿ ಮುಣದ
ಭಾಳ ಹೊತ್ತ ಆಯ್ತೊ ಮಲಿ ಕುಡಿವಲ್ಲದ
ಲಗು ಏಳೋ ಏಳೋ ಏಳೋ ಏಳೋ ಏಳೋ ಕಂದ
ಕಣ್ಣ ಮುಚ್ಚಿ ಮಲಗೀದಿ ಕುದಿ ಇಲ್ಲದ
ವ್ಯರ್ಥ ನಾಸಾಯುತೀನಿ ಮಗ ಎದಿ ವಡದ

ಆರು ತಿಂಗಳ ಉಮ್ಮರಂದ
ರೂಪ ನೋಡಿದರೆ ಹಾ ಏನ ಚಂದ
ಹಲಬುತ ನಿಂತಿ ನಾ ಬಂದ
ಮಾತ ಆಡೊ ಆಡೊ ಆಡೊ ಕಂದ
ಎತ್ತಿಕೊಂಡು ಉಡಿದೊಳು ಎಚ್ಚರಲಿಂದ
ನಿನ್ನ ಸಣ್ಣ ತುಟಿಗಿ ಕುಡುವೇನು ಮುದ್ದ
(ಜನಪದ ಸಾಹಿತ್ಯ ಸಂ-ಪ್ರೊ.ಪಿ.ಕೆ.ಖಂಡೊಬಾ ಪು.೭೦)

ಈ ಕಥನಗೀತೆ ಕೇಳುಗರ ಕರುಳನ್ನು ಹಿಂಡುತ್ತದೆ. ತನ್ನ ಕರುಳ ಬಳಿಯನ್ನು ಕಳೆದುಕೊಂಡಾಗ ತಾಯೊಬ್ಬಳ ಆಕ್ರಂದನ ಹೇಗೆ ಮುಗಿಲು ಮುಟ್ಟುತ್ತದೆ ಎಂಬುದು ಇಲ್ಲಿ ಚಿತ್ರಣಗೊಂಡಿದೆ.

**ಹುಳಿಯಾರ ಕೆಂಚಮ್ಮ**

ಹುಳಿಯೂರಿನಲ್ಲಿ ಒಂದು ಕೆರೆಕಟ್ಟಿಸಿರುತ್ತಾರೆ. ಈ ಕೆರೆಯ ಏರಿಯ ಕಟ್ಟ ನಿಲ್ಲದೇ ಕುಸಿದು ಬೀಳುತ್ತದೆ. ಆಗ ಹುಳಿಯಾರ ಕೆಂಚವ್ವ ಹಸಿ ಬಾಣಂತಿ ಎಂಬುದನ್ನು ಲೆಕ್ಕಿಸದೆ, ಹಸಿಗೂಸಿನ ತಾಯಿ ಎಂದು ಕರುಣೆ ತೋರದೆ ಕೆರೆಗೆ ಬಲಿಕೊಡುತ್ತಾರೆ. ಊರಿಗಾಗಿ ತನ್ನ ಜನರಿಗಾಗಿ ಬಲಿಯಾದ ಹಲವು ಹೆಣ್ಣು ಮಕ್ಕಳು ತನ್ನ ತಾಯ್ತನವನ್ನು ಲೆಕ್ಕಿಸದೆ ಮಗು ಸಮೇತ ಬಲಿಯಾಗಿರುವುದು ವಿಪರ್ಯಾಸ.

**ಒಡ್ಡರ ಬೋಯಿ**

ಹುಳಿಯಾರು ಕೆಂಚಮ್ಮನಗಿಂತ ಭಿನ್ನವಾಗಿ ಕಾಣುವ ಒಡ್ಡರಬೋಯಿ ಕಥಾನಕದಲ್ಲಿ ಪ್ರತಿಭಟನೆ ಇದೆ. ಕೆರೆಗೆ ಬಲಿಯಾಗಲು ಆಕೆಗೆ ಇಷ್ಟವಿಲ್ಲ ತವರಿನಲ್ಲಿ ತನ್ನ ಅಳಲನ್ನು ಹೇಳಿಕೊಂಡರೂ ಪ್ರಯೋಜನವಾಗಲಿಲ್ಲ ಕೊನೆಗೆ ತನ್ನ ಎಳೆಕೂಸಿನೊಂದಿಗೆ ಕೆರೆಯ ಹತ್ತಿರ ಬಂದಾಗ ಮಾವನು ಇಬ್ಬರಿಗೂ ಕೆರೆಗೆ ನೂಕಿಬಿಡುತ್ತಾನೆ. ಬಲಿಕಾರ್ಯ ನಡೆದು ತಾಯಿ ಮಗು ತಿರಿಕೊಳ್ಳುತ್ತಾರೆ. ಈ ವಿಷಯ ತಿಳಿದ ಗಂಡ ಕೆರೆಯ ಬಳಿ ಬಂದು ತನ್ನ ಹೆಂಡತಿ ಪತಿವ್ರತೆಯಾದರೆ ತನಗೆ ಕಾಣಿಸಲು ಎಂದಾಗ ಒಡ್ಡರ ಬೋಯಿ ಕೆರೆಯಿಂದ ಎದ್ದು ಬರುತ್ತಾಳೆ. ಮಗು ಮಾತ್ರ ಮರಳಿ ಬರುವುದಿಲ್ಲ. ಗಂಡ ಹೆಂಡತಿ ಮರಳಿ ಮನೆಗೆ ಹೋದಾಗ ಎಲ್ಲರೂ ಸಂತೋಷದಿಂದ ಬರಮಾಡಿಕೊಳ್ಳುತ್ತಾರೆ.

**ಮದಗದ ಕೆಂಚವ್ವ**

ಈ ಕಥಾನಕದಲ್ಲಿ ಕೆರೆಗೆ ಬಲಿಕೊಡುವುದಕ್ಕಾಗಿಯೇ ಮದಗದ ಕೆಂಚವ್ವನ ಮದುವೆ ಮಾಡಲಾಗುತ್ತದೆ. ಒಂದು ಕೂಸಿನ ತಾಯಿಯಾದ ಮೇಲೆ ಕೆರೆಗೆ ಹಾರವಾಗಿ ಕೊಡಲಾಗುತ್ತದೆ. ಕೆಂಚವ್ವನ ಗಂಡ ಬಲಿಯಾದ ಹೆಂಡತಿಗಾಗಿ ಬಹುವಾಗಿ ದು:ಖಿಸುತ್ತಾನೆ. ಇತನ ದು:ಖ ಸಹಿಸಲಾರದ ಕೆಂಚವ್ವ ಮತ್ತೆ ಮರಳಿ ಬಂದು ತನ್ನ ತಂಗಿಯ ಜೊತೆ ಗಂಡನ ಮದುವೆ ಮಾಡಿ ಮತ್ತೆ ಕೆರೆಯ ಮಡಿಲು ಸೇರುತ್ತಾಳೆ.

**ಮಲ್ಲಿಗೆ ಮಾದೇವಿ**

ಈ ಕಥಾನಕದಲ್ಲಿ ಕೆರೆಕಟ್ಟುವ ಮೇಸ್ತ್ರಿಯ ಕಿರಿಯ ಸೊಸೆಯಾದ ಮಾದೇವಿಯನ್ನು ಬಲಿಕೊಡುವ ಘಟನೆ ಇದೆ. ಹಲವು ಕಥನಗೀತೆಗಳಲ್ಲಿ ಕುಟುಂಬದ ಸರ್ವಾಧಿಕಾರಿಯಾದ ಮಾವನಿಂದ ಸೊಸೆಯ ಬಲಿಕೊಡುವ ಹುನ್ನಾರ ನಡೆದಿರುತ್ತದೆ. ಆದರೆ ಈ ಕಥಾನಕದಲ್ಲಿ ಮಲ್ಲಿಗೆ ಮಾದೇವಿಯ

ಮಾವನಿಗೆ ತನ್ನ ಸೊಸೆ ಬಲಿಯಾಗುವುದು ಇಷ್ಟ ಇರುವುದಿಲ್ಲ. ತನ್ನ ಸೊಸೆಗಾಗಿ ದು:ಖದಿಂದ ಗೋಳಾಡುತ್ತಾನೆ. ಇಲ್ಲಿ ಮಲ್ಲಿಗೆ ಮಾದೇವಿ ತನ್ನ ಸ್ವಇಚ್ಛೆಯಿಂದ ಮಗುವಿನೊಂದಿಗೆ ಬಲಿಯಾಗುವ ಘಟನೆ ಇದೆ.

**ನಾಗರ ಹಾವಿನ ಹಾಡು**

ಈ ಕಥಾನಕದಲ್ಲಿ ಹಾರುವನ ಮಗಳಾದ ಶ್ರೀಗೌರಿ ನಾಗಣ್ಣನಿಗೆ ಹಾಲೆರೆಯಲು ಹೋದಾಗ ನಾಗಣ್ಣನ್ನು ಭುಶ್ ಎಂದು ಶಬ್ದ ಮಾಡುತ್ತದೆ. ಏಳು ಹೆಡೆಯ ಸರ್ಪ ಕಂಡು ಮನದಲ್ಲಿ ಗರ್ಭಿಣಿಯಾಗುತ್ತಾಳೆ. ತಾನು ಗರ್ಭಿಣಿಯಾದ ಸಂಕೇತಗಳು ಕಾಣುತ್ತಿವೆ ಎಂದು ಅಂದುಕೊಳ್ಳುವಾಗ ಈ ಮಾತು ತಾಯಿ ಕೇಳಿಸಿಕೊಳ್ಳುತ್ತಾಳೆ. ಶ್ರೀಗೌರಿಗೆ ಬೈದು ಹೊಡೆಯಲು ಹೋಗುತ್ತಾಳೆ. ಆಗ ಶ್ರೀ ಗೌರಿ ನನ್ನ ಹೊಡಿಬ್ಯಾಡ ನಾನು ಹಾದರ ಮಾಡಿಲ್ಲ ಎಂದು ತಾಯಿ ಪ್ರಶ್ನಿಸುತ್ತಾಳೆ. ನಾಗಪ್ಪ ಸ್ವಾಮಿಯೇ ಇದಕ್ಕೆ ಕಾರಣ ಅಂದಾಗ ಕಲ್ಲುದೇವರಿಂದ ಹೀಗಾಗಲು ಸಾಧ್ಯವಿಲ್ಲ. ಇದು ಪರಪುರುಷರಿಂದಲೇ ಆಗಿರಬೇಕು ಎಂದು ಸಂಶಯಿಸುತ್ತಾರೆ. ಆಗ ಶ್ರೀಗೌರಿಗೆ ಅರಣ್ಯದಲ್ಲಿ ಬಿಟ್ಟು ಬರಲು ತಾಯಿ ಹೇಳಲು ಬಸುರಿಯಾದ ಶ್ರೀಗೌರಿಗೆ ಅರಣ್ಯದಲ್ಲಿ ಬಿಟ್ಟಾಗ ಹುಲಿ,ಕರಡಿ , ಸಿಂಹಗಳೇ ನನ್ನನ್ನು ತಿಂದು ಹಾಕಿರಿ ಎಂದಾಗ ಪತಿವ್ರತಿಯನ್ನು ತಿನ್ನುವುದಿಲ್ಲ ಬದಲಾಗಿ ನಿನ್ನ ಸೇವೆ ಮಾಡುತ್ತೇವೆ. ಎಂದು ಹೇಳುತ್ತವೆ. ಇಲ್ಲಿಗೆ ಕಥೆಮುಗಿಯುತ್ತದೆ.

**ಮಲರಡ್ಡಿ ಸಾಹುಕಾರ**

ಬೀದರ ಕೋಟೆ ಕಟ್ಟುವಾಗ ಗೋಡೆ ನಿಲ್ಲದೆ ಬೀಳುತ್ತದೆ. ಆಗ ಸಾಹುಕಾರ ಮಲರಡ್ಡಿನನ್ನು ಕರೆಯಿಸಿ ವಿಷಯ ಹೇಳುತ್ತಾರೆ. ಆಗ ತನ್ನ ಹೊಲಮನಿ - ವಸ್ತವಡಿ ಮಾರಿ ಸಂಪತ್ತು ಕೊಡುವುದಾಗಿ ಎಂದು ಹೇಳುತ್ತಾನೆ. ಕೊನೆಗೆ ತನ್ನ ಐದು ಮಂದಿ ಗಂಡು ಮಕ್ಕಳಿಗೂ ಕೊಡುವುದಾಗಿ ಹೇಳುತ್ತಾನೆ. ಆದರೆ ಸಣ್ಣ ಸೊಸಿ ಸಂಗಮ್ಮಳ ಬಲಿ ಕೋಟಿ ಬೆಡೆದೆ ಎಂದು ತಿಳಿಸುತ್ತಾರೆ. ಸಂಗಮ್ಮಳು ಐದು ತಿಂಗಳ ಗರ್ಭಿಣಿಯಾಗಿರುತ್ತಾಳೆ. ಆ ಗರ್ಭಿಣಿಯ ಬಲಿಕೊಟ್ಟಾಗ ಕೀಲೆಯ ಗೋಡೆ ನಿಲ್ಲುವುದಾಗಿ ಹೇಳುತ್ತಾರೆ. ಸಾಹುಕಾರ ಮಲರಡಿ ಬಂದು ಗರ್ಭಿಣಿಸೊಸೆಯನ್ನು ಬಲಿಕೊಡುವ ಕಥೆಯಿಲ್ಲದೆ. ಬಲಿಯಾದ ಮೇಲೆ ಮಾವ ತನ್ನ ಸೊಸೆಗಾಗಿ ಪರಿತಪ್ಪಿಸುವುದು ಇಲ್ಲಿ ವಿಶಿಷ್ಟವಾಗಿದೆ.

**ನಾರದನ ಹಾಡು**

ಈ ಹಾಡು ಬ್ರಹ್ಮ, ವಿಷ್ಣು, ಮಹೇಶ್ವರ ನನ್ನೆ ಮಗುವಾಗಿಸಿ ತಾಯಿಯಾದ ಅನುಸುಯಳ ಪತಿವ್ರತೆಯನ್ನು ಸಾರುವ ಸುಂದರ ಕಥಾನಕ ವಾಗಿದೆ. ದೇವತೆಯರ ಮಾತ್ಸರ್ಯ ಹೊಟ್ಟಿಕಿಚ್ಚು

ತನವನ್ನು ನೋಡಿದ ನಾರದ ಅವರ ಅಂಕಾರ ಅಳಿಸಿಹಾಕಲು ಮಹಾ ಪತಿವ್ರತೆಯಾದ ಅನೂಸುಯಳ ವ್ಯಕ್ತಿತ್ವ ಜಗತ್ತಿಗೆ ಸಾರುವ ಕಥೆ ವಿಶಿಷ್ಟವಾಗಿದೆ.

**ಸೊಸೆಯ ಸತ್ಯಪರೀಕ್ಷೆ**

ರತ್ನಮ್ಮಾ ಗರ್ಭಿಣಿಯಾದಾಗ ಆಕೆಯ ಶೀಲವನ್ನು ಪರೀಕ್ಷಿಸುವ ಕಥಾನಕ ಇದಾಗಿದೆ. ಬಹು ಸಂಭ್ರಮದಿಂದ ನಡೆಯುವ ರತ್ನಾಮ್ಮಳ ಮದುವೆ ನಡೆಯುತ್ತದೆ. ಮದುವೆ ಸಂಧರ್ಭದಲ್ಲಿ ಬಟ್ಟಿ ಅಯ್ಯಾರಿ ಸಮಯದಲ್ಲಿ ಜಗಳ ಬಂದು ಮಾತಿಗೆ ಮಾತು ಬೆಳೆದು ವಧು- ವರರನ್ನು ಬೇರೆ ಮಾಡಲಾಗುತ್ತದೆ. ಹೀಗೆ ಹನ್ನೆರಡು ವರುಷ ರತ್ನಮ್ಮ ಗಂಡನಿಂದ ದೂರ ಇರುತ್ತಾಳೆ. ಒಂದು ದಿನ ಆಕೆ ಶೋಕಿಸುತ್ತಿರುವುದನ್ನು ನೋಡಿದ ಆಕೆಯ ಗಂಡ ಮನೆಗೆ ಬರುತ್ತಾನೆ. ತಂದೆ - ತಾಯಿಯರ ಕಣ್ಣು ತಪ್ಪಿಸಿ ರತ್ನಮ್ಮನಲ್ಲಿಗೆ ಬರುತ್ತಿರುತ್ತಾನೆ ಕೆಲ ದಿನಗಳ ನಂತರ ಆಕೆ ಗರ್ಭಿಣಿಯಾಗುತ್ತಾಳೆ. ಈ ವಿಷಯ ತಿಳಿದು ಅತ್ತೆ ಮಾವ ಕರೆದು ಗರ್ಭದ ಕುರಿತು ಅನುಮಾನದ ಪ್ರಶ್ನೆಗಳನ್ನು ಮಾಡುತ್ತಾರೆ. ನೀನು ಪತಿವ್ರತೆಯಾದರೆ ಕಾದ ಎಣ್ಣೆಯಲ್ಲಿನ ನಾಣ್ಯ ತೆಗೆದುಕೊಡು ಎಂದಾಗ ಕುದಿವ ಎಣ್ಣೆಯಿಂದ ನಾಣ್ಯ ಹೊರ ತೆಗೆಯುತ್ತಾಳೆ ಆಕೆಯ ಬೆರಳು ಸುಡುವುದಿಲ್ಲ. ಕೊನೆಗೆ ಅತ್ತೆ ಮಾವ ಆಕೆಯನ್ನು ಒಪ್ಪಿಕೊಳ್ಳುತ್ತಾರೆ.

**ಅಕ್ಕ ತಂಗೆರ ಮನ ಎರಡಾಗತಾವ**

ಬಂಜೆತನದ ಬವಣೆಯ ತಾರುಣ ಕಥೆ ಇಲ್ಲಿದೆ. ಮದುವೆಯಾಗಿ ಹನ್ನೆರಡು ವರ್ಷವಾದರೂ ಮಕ್ಕಳಾಗದ ಹೊನ್ನಮ್ಮ ತನ್ನ ತಂಗಿ ನೀಲಗಂಗಾಳನ್ನು ಗಂಡನ ಜೊತೆಗೆ ಮದುವೆ ಮಾಡಿಸುತ್ತಾಳೆ. ಅಕ್ಕ - ತಂಗಿಯರು ಸವತಿಯರಾಗುತ್ತಾರೆ.ನೀಲಗಂಗಾ ಗಂಡು ಮಗುವಿಗೆ ಜನ್ಮ ಕೊಡುತ್ತಾಳೆ. ಹೊನ್ನಮ್ಮಳಿಗೆ ಎಲ್ಲಿಲ್ಲದ ಸಂತೋಷವಾಗುತ್ತದೆ. ತನ್ನ ತಂಗಿಯ ಮಗುವೇ ತನ್ನ ಮಗು ಎಂದು ಬಗೆದು ಉಡುಗೊರೆಯೊಂದಿಗೆ ಮಗುವಿಗೆ ನೋಡಲು ಹೋಗುತ್ತಾಳೆ. ಕಾಕತಾಳೀಯವೆಂಬಂತೆ ಮಗು ಅನಾರೋಗ್ಯಗೊಳ್ಳುತ್ತದೆ. ಜನರು ಬಂಜೆಯ ನೆರಳು ಬಡೆದುದ್ದಕ್ಕೆ ಹೀಗಾಗಿದೆ ಎಂದು ಮಾತಾಡಿಕೊಳ್ಳುತ್ತಾರೆ. ಇದನ್ನು ಕೇಳಿದ ಹೊನ್ನಮ್ಮ ಮನೆಗೆ ಬಂದು ನೇಣಿಗೆ ಶರಣಾಗುತ್ತಾಳೆ. ಇದನ್ನು ನೋಡಿ ಗಂಡ ಕೂಡ ನೇಣುಬಿಗಿದು ಪ್ರಾಣಿ ಕಳೆದುಕೊಳ್ಳುತ್ತಾನೆ.

**ಗರತಿ ಗೋಪವ್ವಾನ ಹಾಡು**

ಗೋವಿನ ಹಾಡನ್ನು ಹೋಲುವ ಈ ಕಥಾನಕ ತನ್ನ ಹಸುಗೂಸಿನ ಮೇಲೆ ಇರುವ ಪ್ರೀತಿ, ಮಮತೆ, ವಾತ್ಸಲ್ಯವನ್ನು ಇದು ಚಿತ್ರಿಸುತ್ತದೆ. ಹಚ್ಚ ಹಸುರಿನ ಹುಲ್ಲು ತಿನ್ನಲು ಹೋದ ಗೋಪವ್ವಾ

ಎನ್ನುವ ಹಸುವಿಗೆ ಹುಲಿರಾಜ ಎದುರಾಗುತ್ತಾನೆ. ಮನೆಯಲ್ಲಿರುವ ಕಂದಗೆ ಮಲಿಕುಡಿಸಿ ಬರುವೆ ಎಂದು ಮಾತು ಕೊಟ್ಟು ಹೋದ ಹಸು ನಾನಾ ರೀತಿಯ ಬುದ್ಧಿವಾದವನ್ನು ತನ್ನ ಕರುವಿಗೆ ಹೇಳಿ ಪ್ರೀತಿ ತೋರಿ ಬರುವಾಗ ತಾನೂ ಬರುವೆನೆಂದು ಕರು ಹಿಂದೆ ಹೋಗುತ್ತದೆ. ಮಲಗಿದ ಹುಲಿಯನ್ನು ಎಬ್ಬಿಸಿ ನನ ಕಂದ ನಾನು ಇಬ್ಬರು ಬಂದಿದ್ದೇವೆ ತಿನ್ನು ಎನ್ನುತ್ತವೆ. ಆಗ ಹುಲಿರಾಯ ಹೀಗೆ ಹೇಳಿ ಎಷ್ಟೋ ಜನ ವಂಚನೆ ಮಾಡಿದ್ದಾರೆ ಆದರೆ ನೀನು ಎಂಥ ಪತಿವ್ರತೆ ಕಂದನಾ ತಾಯಿಯಾಗಿ ಬದುಕು ಎಂದು ಹರಸಿ ಕಳುಹಿಸುತ್ತದೆ. ಇಲ್ಲಿ ತಾಯಿಯು ಸತ್ಯಕ್ಕಾಗಿ ಹೆಸರಾಗಿದ್ದಾಳೆ. ತನ್ನ ಮತ್ತು ಕಂದನ ಜೀವ ತ್ಯಾಗ ಮಾಡಲು ಸಿದ್ಧಳಾಗಿದ್ದಾಳೆ.

**ಕುಸಬಿ ಬರ**

ಭೂಮಿ ಮೇಲೆ ಬರ ಬಿದ್ದಾಗ ಅನ್ನ ನೀರು ಇಲ್ಲದೆ ಒದಾಡಿ ಸಾಯುವುದನ್ನು ನೋಡದೆ ತಾಯಿಯೇ ಮಕ್ಕಳಿಗೆ ವಿಷಕೊಟ್ಟು ತಾನೂ ಸತ್ತ ಅನೇಕ ಘಟನೆಗಳನ್ನು ಕಥನ ಗೀತೆಗಳಲ್ಲಿ ನೋಡಬಹುದು ಅಂತಹ ಬರ್ಬರ ಕಥೆ ಕುಸಬಿ ಬರ ಕಥಾನಕ ಒಳಗೊಂಡಿದೆ. ಈ ಕಥನ ಗೀತೆಗಳಲ್ಲಿ ಮೂಡಿಬಂದ ತಾಯ್ತನದ ಗ್ರಹಿಕೆಯನ್ನು ಕೆಳಗೆ ಕೊಟ್ಟ ಅಂಶಗಳ ನೆಲೆಯಿಂದ ಅರಿತುಕೊಳ್ಳಬಹುದಾಗಿದೆ.

1. ಕ್ರೌರ್ಯವಾಗಿ ಬಂಜೆತನ

2. ಗರ್ಭಿಣಿಯ ಹಿಂಸೆ

3. ತಾಯ್ತನದ ತ್ಯಾಗ

4.ತಾಯ್ತನದ ಬಲಿದಾನ

**1. ಕ್ರೌರ್ಯವಾಗಿ ಬಂಜೆತನ :**

ಬಂಜೆತನವೆಂಬುದು ನಮ್ಮ ಸಮಾಜದಲ್ಲಿ ಸಾಮಾಜಿಕ ಪಿಡುಗಾಗಿ ನೆಲೆಯೂರಿದೆ. ಪ್ರಾಚೀನ ಕಾಲದಿಂದಲೂ ಮಕ್ಕಳನ್ನು ಹೆರಲಾರದ ಹೆಣ್ಣನ್ನು ಬಂಜೆಯೆಂದು ಹೀನಾಯವಾಗಿ ನಿಂದಿಸುತ್ತದೆ. ಒಂದು ಹೆಣ್ಣು ಮದುವೆಯಾಗಿ ಮಕ್ಕಳನ್ನು ಪಡೆದು ಅದರಲ್ಲಿಯೂ ಗಂಡು ಮಗುವನ್ನು ಪಡೆದರೆ ಮಾತ್ರ ಆಕೆಗೆ ಸಮಾಜದಲ್ಲಿ ಬೆಲೆ ಇಲ್ಲದಿದ್ದರೆ ಆಕೆಯ ಬಾಳು ನರಕ ಸದೃಶ್ಯ. ಪುರುಷ ರೂಪಿತ ಸಮಾಜದಲ್ಲಿ ಬಂಜೆತನವೆ ಬುದು ಹೆಣ್ಣಿನ ಪಾಲಿಗೆ ಒಂದು ಕ್ರೌರ್ಯವಾಗಿ ಪರಿಣಮಿಸಿದೆ. ಕುಟುಂಬದ ಒಳಗೂ ಮತ್ತು ಸಮಾಜದಲ್ಲಿಯೂ ಮಹಿಳೆಯನ್ನು 'ಬಂಜೆ ' ಎಂದು ಕರೆದು ಅಪಮಾನಿಸಲಾಗುತ್ತದೆ.ಅವಳ ಬಂಜೆತನವನ್ನು ಹೀಯಾಳಿಸಿ ಇಡೀ ಬದುಕೆ ನಿರರ್ಥಕವೆನ್ನುವಂತಹ ವಾತಾವರಣ ಸೃಷ್ಟಿಸಲಾಗುತ್ತದೆ ಆದ್ದರಿಂದ ಹೆಣ್ಣು 'ಬಂಜೆ ' ಎಂಬ ಹಿಂಸಾಲೋಕದಿಂದ ವಿಮೋಚನೆಗೊಳ್ಳಲು ತಹತಹಿಸುತ್ತಾರೆ 'ಮುಂಜಾನೆ ಹುಟ್ಟಲಿ ಸಂಜೆಗೆ ಸಾಯಲಿ ಬಂಜೆಂಬ ಶಬುದ ಬಿಡಿಸಯ್ಯ ಎಂದು ವಾಸ್ತವವಾಗಿ ಇರದ ದೇವರಲ್ಲಿ

ಮೊರೆಯಿಡುತ್ತಾಳೆ. ಕರುಳ ಕುಡಿ ಕಣ್ಮುಂದೆ ಸಾಯಲಿ ಮತ್ತು ಅದರ ಸಾವಿನ ಮೇಲಾದರೂ ತನಗೆ ಸಾಮಾಜಿಕ ಮನ್ನಣೆ ದೊರೆಯಲಿ ಎಂದು ಹಲಬುತ್ತಾಳೆ.

ಈ ಪುರುಷ ಪ್ರಧಾನ ಸಮಾಜ ಮಕ್ಕಳನ್ನು ಹೆರದ ಹೆಣ್ಣನ್ನು ಎಷ್ಟು ಕ್ರೂರವಾಗಿ ನಡೆಸಿಕೊಳ್ಳಬಲ್ಲದು ಎಂಬುದಕ್ಕೆ ಈ ಸಾಲನ್ನು ನಿದರ್ಶನ ನೀಡುತ್ತವೆ. ಮಹಿಳೆಯೊಬ್ಬಳ ಬದುಕುವ ಹಕ್ಕಿಗೂ ಅವಳ ಸಂತಾನೋತ್ಪತ್ತಿ ಸಾಮರ್ಥ್ಯಕ್ಕೂ ನೇರವಾಗಿ ತುಳುಕು ಹಾಕುವ ಸಮಾಜ ಪುರುಷನ ಬದುಕಿಗೂ ಅವನ ಸಂತಾನಶಕ್ತಿಗೂ ತಳಕು ಹಾಕುವುದಿಲ್ಲ. ಎಲ್ಲ ವೈಜ್ಞಾನಿಕ ತಿಳುವಳಿಕೆ, ಮಾನವೀಯ ವಿಶ್ಲೇಷಣೆ ಬದಲಾಗುತ್ತಿರುವ ಸಾಮಾಜಿಕ ಸ್ಥಾನಮಾನಗಳ ನಡುವೆಯೂ ಮಹಿಳೆಯ 'ಬಂಜೆತನವನ್ನು' ಅವಳ ಅಸ್ತಿತ್ವದ ಪ್ರಜ್ಞೆಯಾಗಿ ಪರಿಗಣಿಸುತ್ತಿರುವುದು ನಾಗರಿಕ ಸಮಾಜದ ಕ್ರೂರ ವ್ಯಂಗ್ಯಗಳಲ್ಲೊಂದಾಗಿದೆ "[೨] .ನಮ್ಮ ಸಮಾಜದಲ್ಲಿ ಬಂಜೆ ಕುರಿತಂತೆ ಸಾಕಷ್ಟು ನಂಬಿಕೆ ಅಪನಂಬಿಕೆಗಳಿವೆ. ಅವೆಲ್ಲವುಗಳು 'ಬಂಜೆ ಹೊನ್ನಮ್ಮ'ಳ ಕಥನಗೀತೆಯಲ್ಲಿ ದಾರುಣವಾಗಿ ಚಿತ್ರಿತಗೊಂಡಿದೆ.

ಇಲ್ಲಿ ಹೆಣ್ಣೊಬ್ಬಳ ತಾಯ್ತನದ ಹಂಬಲ ಹಾಗೂ ಆಕೆಯ ಮೇಲಿರುವ ಸಾಮಾಜಿಕ ಒತ್ತಡಗಳು ಎಳೆ ಎಳೆಯಾಗಿ ಬಿಚ್ಚಿಡಲಾಗಿದೆ. ತಾನೂ ಹೇಗಾದರೂ ಮಾಡಿ ತಾಯಿ ಆಗಲೇ ಬೇಕು ಎಂಬ ಹಂಬಲ 'ಬಂಜೆ' ಎಂಬ ಶಬ್ದದಿಂದ ಮುಕ್ತಿ ಪಡೆಯಬೇಕು ಎಂಬ ಕಾತುರ ಹೊನ್ನಮ್ಮಳು ಅನೇಕ ಪುಣ್ಯ ಕಾರ್ಯ ಮಾಡಿದರೂ ಮಕ್ಕಳ ಫಲ ದೊರೆಯುವುದಿಲ್ಲ. 'ಊರ ಒಳಗೆ ನಾರಿಯರೆಲ್ಲ ಬಾರೆ ಬಂಜಿ ಎಂತ ಕರೆಯುವರು ಬಂಜಿ ಎಂಬೊ ಸೊಲ್ಲಹರನೆ'. ಎಂದು ದೇವರಲ್ಲಿ ಬೇಡುತ್ತಾಳೆ. ಈ ಕಥನ ಗೀತೆಯು ಮಕ್ಕಳಿಗಾಗಿ ಹಪಹಪಿಸುವ, ಸಮಾಜ ಆಕೆಯನ್ನು ಕ್ರೂರವಾಗಿ ನಿಂದಿಸುವ ಸಂದರ್ಭಗಳು ಹೃದಯ ವಿದ್ರಾವಕವಾಗಿ ಮೂಡಿ ಬಂದಿದೆ.

"ಮಕ್ಕಳಿಲ್ಲದೋಳು ನೋಡಾಕೆ ಬರುತ್ತಳೆ.
ನಮ್ಮ ಮಕ್ಕಳ ನೋಡಾಕೆ ಬರುತ್ತಾಳೆ.
ನಮ್ಮ ಮಕ್ಕಳು ಬಂಜೆ ಆಗುತ್ತಾರೆ
ನಮ್ಮ ಮಕ್ಕಳು ಮುಚ್ಚಾಲೇಬೇಕು
ಪಂಜರದಲ್ಲಿ ಮುಚ್ಚುವರೆ ಅವರು
ಬಾಗ್ಲು ಹಾಕ್ಕೊಂಡ ಒಳಹೊಗುತ್ತಾರೆ. "[೩]

ಎಂಬುದಾಗಿ ನಮ್ಮ ಸಮಾಜದಲ್ಲಿ ಇರುವ ಬಂಜೆ ಪ್ರತಿಯಾದ ಜನ ಸಾಮಾನ್ಯರ ಮಾನಸಿಕ ಸ್ಥಿತಿಯನ್ನು ಈ ಕಥನ ಗೀತೆಯನ್ನು ಮೂಡಿ ಬಂದಿದೆ.

'ಎಲಮ್ಮನ' ಹಾಡು ಸಹ ಬಂಜೆತನದ ಕುರಿತು ಮನ ಮುಟ್ಟುವಂತೆ ರಚನೆಗೊಂಡದ್ದು ನೋಡಬಹುದು.ಜೋಗಬೇಡಲು ಹೋದ ಎಲ್ಲಮ್ಮನಿಗೆ ಜನರೆಲ್ಲ ಬಂಜಿ ಎಂದು ಜರಿಯುತ್ತಾರೆ.

"ಬಂಜಿ ಹೊಂಟಾಳೆಂದು ದಾರಿಬಿಟ್ಟಾರೆ ರಾಮು ರಾಮ
ವಾರೀಗಿ ಗೆಳದೇರು ಹೊಳಿನೀರಿಗ್ಹೋಗ್ಯಾರೆ ರಾಮು ರಾಮ

ಗೊಡ್ಡಿ ಹೊಂಡಾಳೆಂದು ಬಾಗಿಲು ಮುಚ್ಯಾರೆ ರಾಮು ರಾಮ
ಗೊಡ್ಡಿ ಎಂಬ ಶಬ್ದ ಕಿವಿಮುಟ್ಟು ಕೇಳ್ಯಾಳೆ ರಾಮು ರಾಮ

ಚಿಂತಿ ಮಾಡುತಾ ಕುಂತಾಳೆಲ್ಲಮ್ಮ ರಾಮು ರಾಮ
ದು:ಖ ಮಾಡುತಾ ಕುಂತಾಳೆಲ್ಲಮ್ಮ ರಾಮು ರಾಮ

ಹಾಲ ಸಮುದ್ರ ದಾಟಿ ಕ್ಷೀರ ಸಮುದ್ರ ದಾಟ್ಯಾಳೆ ರಾಮು ರಾಮ
ಸಪ್ತ ಸಮುದ್ರ ದಾಟ್ಯಾಲೆಲ್ಲಮ್ಮ ರಾಮು ರಾಮ

ಶಿವನ ಬಾಗಿಲಗಿ ಬಂದು ನಿಂತಾಳೆ ರಾಮು ರಾಮ
ಶಿವ ಜೋಡ ತನ್ನ ಮನ ಜೋಡೆ ರಾಮು ರಾಮ

ಎಂದಿಲ್ಲದ ಎಲ್ಲಮ್ಮ ಇಂದ್ಯಾಕೆ ಬಂದೆವ್ವ ರಾಮು ರಾಮ
ಬಾರವ್ವ ತಾಯಿ ನೀ ಒಳಯಾಕ ರಾಮು ರಾಮ

ಒಳಿಯಾಕ ಬರಲಾಕ ಬಂಜಿ ನಾನಿದ್ದಿನೋ ರಾಮು ರಾಮ
ನನಗೊಂದು ಫಲ ಕುಡುವೋ ಶಿವರಾಯ ರಾಮು ರಾಮ

ನಿನಗೊಂದು ಫಲ ಉಳಿದಿಲ್ಲ ಎಲ್ಲಮ್ಮ ರಾಮು ರಾಮ
ಬಡವ ಬಗ್ಗರಿಗಿ ಕೊಟ್ಟಿನೆಲ್ಲಮ್ಮ ರಾಮು ರಾಮ

ಹಕೀರ ಫಕೀರಗೆ ಕೊಟ್ಟಿನೆಲ್ಲಮ್ಮ ರಾಮು ರಾಮ
ನಿನಗೊಂದು ಫಲ ಉಳಿದಿಲ್ಲ ಮಗಳೇ ರಾಮು ರಾಮ

ನಿನಗೊಂದು ಫಲ ಉಳಿದಿಲ್ಲ ಎಲ್ಲಮ್ಮ ರಾಮು ರಾಮ
ಕಾಗಿ ಗುಬ್ಬೀಗಿ ಕೊಟ್ಟೀನೆಲ್ಲಮ್ಮ ರಾಮು ರಾಮ

ಇರುವೆಂಬ ಪಕ್ಷಿಗಿ ಕೊಟ್ಟಿನೆಲ್ಲಮ್ಮ ರಾಮು ರಾಮ
ಕೊಟ್ಟರ ಕೊಡುವೆನೆ ಮಗ ನಿನಗ ದಕ್ಕಲ್ಲ ರಾಮು ರಾಮ

ಆ ಮಗ ನಿನಗ ದಕ್ಕಿಲ್ಲ ಮಗಳೆ ರಾಮು ರಾಮ
ಆ ಮಗನ್ಹೆಳವ ಹುಟ್ಟಲಿ ಶಿವನೆ ರಾಮು ರಾಮ

ಸಂಜೀಗಿ ಹುಟ್ಟಲಿ ಮುಂಜೇಲಿ ಸಾಯಲಿ ರಾಮು ರಾಮ
ಬಂಜಿ ಎಂಬ ಶಬುದ ಮರೆಸು ಶಿವರಾಯ ರಾಮು ರಾಮ

ನನ್ನ ಹೊಟ್ಟೀಲಿ ಹುಟ್ಟಲಿ ನನ್ನ ಕೊರಳ ಕೊಯ್ಯಲಿ ರಾಮು ರಾಮ
ನನಗೋಂದೇ ಫಲವ ಕುಡುವೊ ಶಿವರಾಯ ರಾಮು ರಾಮ "೩

ಹೀಗೆ "ಎಲ್ಲಮ್ಮ"ನ ಕಥನ ಗೀತೆಯಲ್ಲಿ ಬಂಜೆಯೆಂಬ ಶಬ್ದವನ್ನು ಹಿಂಗಿಸಿಕೊಳ್ಳಲು ದೇವರ ಮನ ಕರಗಿಸುವ ನಿಟ್ಟನಲ್ಲಿ ನಾನಾ ರೀತಿಯಲ್ಲಿ ಬೇಡಿಕೊಳ್ಳುತ್ತಾಳೆ. ಜಗತಿನಲ್ಲಿನ ಎಲ್ಲ ಪ್ರಾಣಿ ಪಕ್ಷಿಗಳಿಗೆ ಸಂತಾನ ಭಾಗ್ಯಕೊಟ್ಟು ತನಗೆ ಮಾತ್ರ 'ಬಂಜೆ' ಎಂಬ ಶಬ್ದ ಬರುವಂತೆ ಮಾಡಿದೆ ಇದ್ದರಿಂದ ಮುಕ್ತಿ ದೊರೆಯುವಂತೆ ಮಾಡು 'ಮುಂಜಾನೆ ಹುಟ್ಟಿ ಸಂಜೆಗೆ ಸತ್ತರೂ ಅಡ್ಡಿ ಇಲ್ಲ 'ತಾ ಹೆತ್ತ ಮಗ ತನ್ನ ಕೊಂದರು ಸರಿ ತನಗೆ ಮಕ್ಕಳು ಮಾತ್ರ ಬೇಕು ಎಂದು ಬೇಡಿಕೊಳುತ್ತಾಳೆ. ಇದರಿಂದ್ದ ಮುಖ್ಯವಾಗಿ ಅರ್ಥ ಮಾಡಿಕೊಳುವ ಸಂಗತಿಯೆಂದರೆ ನಮ್ಮ ಸಮಾಜ ಮಕ್ಕಳಿಲ್ಲದ ಹೆಣ್ಣಿಗೆ ಯಾವ ಗೌರವವೂ ಕೋಡುವುದಿಲ್ಲ.

ಮಕ್ಕಳಿಲ್ಲದಾಗ ಇನ್ನೊಂದು ಮದುವೆ ಮಾಡಿಕೊಳ್ಳ ಗಂಡಸರಿಗೆ ಮಾತ್ರ ಅವಕಾಶ ಇದೆ. ಗಂಡ ಹೆಂಡತಿಯರಲ್ಲಿ ಕೊರತೆಯಾರದೇ ಆಗಿದ್ದರೂ ನಿಂದೆಗೆ ಒಳಗಾಗುವವಳು ಒಬ್ಬ ಹೆಣ್ಣು ಮಾತ್ರ 'ಅಕ್ಕ ತಂಗೇರ ಮನ ಎರಡಾಗತಾವ' ಕಥನಕವನದಲ್ಲಿ ಬಂಜೆ ಎಂಬ ನಿಂದನೆ ತಾಳದೆ ದಂಪತಿಗಳು ನೇಣಿಗೆ ಶರಣಾಗುವ ದಾರುಣ ಕಥೆಯಿದೆ.

"ಬಂಜಿ ನೆಳ್ಳ ಬಡದಿದ್ದಾವೆ ಕೋಲೆನ್ನ ಕೋಲೆ
ಈ ಮಾತ ಎಲ್ಲ ಕೇಳಿದಾಳ ಕೋಲೆನ್ನ ಕೋಲೆ
ಮನಿ ದಾರಿ ಹಿಡಿದಿದ್ದಾಳೆ ಕೋಲೆನ್ನ ಕೋಲೆ
ಹಗ್ಗಾದರ ತೊಗೊಂಡಾಳೆ ಕೋಲೆನ್ನ ಕೋಲೆ
ಉರುಲ ಹಾಯಿಕೊಂಡಾಳೆ ಕೋಲೆನ್ನ ಕೋಲೆ "೪

ಈ ಘಟನೆಗಳು ನಮ್ಮ ಸಮಾಜದಲ್ಲಿನ ಬಂಜೆತನದ ಬವಣೆಯನ್ನು ವ್ಯಕ್ತ ಪಡಿಸುತ್ತವೆ. ಸೌಂಸೌಂತೇರು ಕಥಾನಕವು ಬಂಜೆತನದ ದಾರುಣತೆ ವ್ಯಕ್ತಪಡಿಸುತ್ತದೆ. ಬಂಜೆತನ ಕಾರಣವಾಗಿ ಅಕ್ಕಳಂತಿರುವ ಸವತಿಯಲ್ಲಿ ಮಾತ್ಸರ್ಯ ಹುಟ್ಟಿ ಏನು ಅರಿಯದ ಸವತಿ ಮಗುವನ್ನು ಬಲಿ ತೆಗೆದುಕೊಳ್ಳುವ ಕಥೆಯಿದೆ.

"ಹಿರಿಯಾಕಿ ಹೋದಾಳೊ ತರಲಾಕ ನೀರ
ಸಣ್ಣಕಿ ಹೊಟ್ಯಾಗ ಬೆಂಕಿ ಬಿತ್ತೊ ಜೋರ
ಔಡಲ ಗಡಗ್ಯಾಗ ಹಾಕಿದಳೊ ಪುತ್ತರ
ಮ್ಯಾಲ ಹುಟ್ಟ ತಿರುವಿದಾಳೊ ಗರಗರ "೫

ಇಲ್ಲಿ ಬಂಜೆತನವೇ ಮಾತ್ಸರ್ಯಕ್ಕೆ ಕಾರಣವಾಗಿ ಹೆಣ್ಣೊಬ್ಬಳು ರಾಕ್ಷಸಿಯಾಗಿ ರೂಪು ಪಡೆದದ್ದು ನೋಡಬಹುದು.

ಬಂಜೆ ಎಂಬ ಹರಿತವಾದ ಕತ್ತಿಯಿಂದ ಆಕೆಯ ಬದುಕನ್ನು ಛಿಧ್ರವಾಗಿ ಮಾಡಲಾಗುತ್ತದೆ. ಪುರುಷ ಪ್ರಧಾನ ಮೌಲ್ಯಕ್ಕೆ ಹೆಚ್ಚಿನ ಬೆಲೆ ಕೊಡುವ ಜನಸಾಮಾನ್ಯರ ಮುಖವಾಣಿಯಾಗಿ ಈ

ಕಥನಗೀತೆಗಳು ರೂಪು ಪಡೆದಿವೆ. ಸಮಾಜದಲ್ಲಿಯಾಗಲಿ, ಕುಟುಂಬ ವಲಯದಲ್ಲಾಗಲಿ ಹೆಣ್ಣು ಮಕ್ಕಳ ಉತ್ಪಾದನಾ ಕೇಂದ್ರವಾಗಿದ್ದಾಳೆ.

ಮಕ್ಕಳ ಪಡೆಯುವ ಸಾಮರ್ಥ್ಯವಿಲ್ಲದಿದ್ದರೆ, ಆಕೆಗೆ ಬೆಲೆ ಇಲ್ಲ. ಬಂಜೆತನಕ್ಕೆ ಹೆಣ್ಣೊಬ್ಬಳೆ ಕಾರಣ ಎಂಬಂತೆ ಪುರುಷ ಪ್ರಧಾನ ಸಮಾಜ ಪ್ರತಿಬಿಂಬಿಸುತ್ತದೆ. ಇದು ಹಿಂದಿನಿಂದಲೂ ಬಂದ ಅಜ್ಞಾನ. ಆಧುನಿಕ ಕಾಲದಲ್ಲೂ ಈ ತಪ್ಪು ಗ್ರಹಿಕೆಯನ್ನು ನಂಬಿಕೊಂಡು ಬರಲಾಗುತ್ತಿದೆ. ಬಂಜೆ ಎಂಬ ಚುಚ್ಚು ನುಡಿ ಒಂದು ಹೆಣ್ಣಿಗೆ ಇನ್ನೊಬ್ಬ ಹೆಣ್ಣು ಮಗಳಿಂದಲೇ ಬಂದಿರುತ್ತದೆ. ಇದು ನಮ್ಮ ಸಮಾಜದ ವಿಪರ್ಯಾಸ. ಕಥನಗೀತೆಗಳಲ್ಲಿ ಬಂಜೆತನವು ಹೆಣ್ಣಿಗೆ ಅಭೀಶಾಪವಾಗಿ ಕಾಡಿದೆ. ಇಲ್ಲಿ ಮಕ್ಕಳಾಗದ ಹೆಣ್ಣುಮಕ್ಕಳು ತಾಯ್ತನಕ್ಕಾಗಿ ಹಾತೊರೆಯುವುದು ಸಾಮಾನ್ಯ.

ಬಂಜೆತನವು ಹೆಣ್ಣಿಗೆ ಅಭೀಶಾಪವಾಗಿ ಕಾಡಿದೆ. ಇಲ್ಲಿ ಹೆಣ್ಣು ಮಕ್ಕಳು ತಾಯ್ತನಕ್ಕಾಗಿ ಹಾತೊರೆಯುವುದು ಸಾಮಾನ್ಯ. ಬಂಜೆತನದಿಂದ ಹೆಣ್ಣು ತತ್ತರಿಸಿ ಹೋಗುತ್ತಾಳೆ. ಬಂಜೆತನಕ್ಕೆ ಕಾರಣ ಹೆಣ್ಣಿಗಾಗಲಿ, ಗಂಡಿಗಾಗಲಿ ಶೋಷಣೆಗೆ ಗುರಿಯಾಗುವವಳು ಮಾತ್ರ ಹೆಣ್ಣು. ಮದುವೆಯ ನಂತರ ನೂರಾರು ಕನಸುಗಳನ್ನು ಹೊತ್ತು ಗಂಡನ ಮನೆಗೆ ಬರುತ್ತಾಳೆ. ಬಂದ ಒಂದು ವರುಷದಲ್ಲಿ ತಾಯಿಯಾಗುವ ಸುದ್ದಿಕೊಡಲೇ ಬೇಕು ಇಲ್ಲದಿದ್ದರೆ ಆಕೆಯ ಬಾಳು 'ನಾಯಿ ಬಾಳು ' ಆಕೆ ಮಾನಸಿಕವಾಗಿ ರೋಸಿಹೋಗುವಂತೆ ಪರಿಸ್ಥಿತಿ ನಿರ್ಮಾಣ ಮಾಡಲಾಗುವುದು, ಪೂಜೆ, ಹರಕೆ, ವ್ರತಾದಿಗಳನ್ನು ಮೂಢನಂಬಿಕೆಗೆ ಬಲಿಯಾಗುವುದು ಸಾಮಾನ್ಯ. ಕೆಲವರು ಅಡ್ಡ ದಾರಿ ಹಿಡಿದು ಅನೈತಿಕ ಸಂಬಂಧಗಳಿಂದ ತಾಯಿಯಾಗುವುದು. ಸಂಸಾರದಲ್ಲಿ ಕಲಹ ಉಂಟಾಗುವುದು.ಆತ್ಮ ಹತ್ಯಕ್ಕೆ ಶರಣಾಗುವುದು. ಹೀಗೆ ಹಲವು ರೀತಿಯ ತೊಂದರೆಗೆ ಸಿಕ್ಕಿಕೊಳ್ಳುತ್ತಾಳೆ. ಏಕೆಂದರೆ ಬಂಜೆಯಾದವಳಿಗೆ ನಮ್ಮ ಸಮಾಜ ತಾತ್ಸಾರದಿಂದ ನೋಡುತ್ತದೆ. ಗಂಡನ ಮನೆಯಲ್ಲಿ, ತವರಿನಲ್ಲಿ, ಮದುವೆ ಸಮಾರಂಭಗಳಲ್ಲಿ, ಪೂಜಾದಿ ವಿಧಿಗಳಲ್ಲಿ ತೊಟ್ಟಿಲು, ನಾಮಕರಣ ಜನ್ಮದಿನದಂಥ ಯವುದೇ ರೀತಿಯ ಕೌಟುಂಬಿಕ ಸಮಾರಂಭದಲ್ಲಿ ಬಂಜೆಯಾದವಳು ಎಂದು ಹೀನವಾಗಿ ನುಡಿಯಲಾಗುತ್ತದೆ. ಆಕೆಗೆ ಮನ್ನಣೆ ದೊರೆಯದು ಕುಟುಂಬದವರಿಂದ ತಾತ್ಸಾರ, ವಿವಾಹ ವಿಚ್ಛೆದನ, ಗಂಡನ ಪುನರ್ವಿವಾಹ, ಇತ್ಯಾದಿ ಶೋಷಣೆಗಳಿಗೆ ಗುರಿಯಾಗುವ ಪರಿಸ್ಥಿತಿ ಒದಗಿಸುತ್ತದೆ. ಅದಕ್ಕಾಗಿ ಹೆಣ್ಣಾದವಳು ಮದುವೆಯ ನಂತರ ಕುಟುಂಬ ಹಾಗೂ ಸಮಾಜದ ಕ್ರೌರ್ಯ ಕಾರಣವಾಗಿ ಮಕ್ಕಳನ್ನು ಪಡೆಯಲೇಬೇಕು ಎಂದು ಹಂಬಲಿಸುತ್ತಾಳೆ.

## 2. ಗರ್ಭಿಣಿಯ ಹಿಂಸೆ

ಕಥನಗೀತೆಗಳಲ್ಲಿ ತಾಯಿ ಆಗಲಿರುವ ಹೆಣ್ಣನ್ನು ಎರಡು ರೀತಿಯಲ್ಲಿ ನಡೆಸಿಕೊಂಡು ಬರಲಾಗಿದೆ. ಒಂದು ವಂಶದ ಕುಡಿಯನ್ನು ಹೊತ್ತವಳಿಗೆ ನಾನಾ ಪ್ರಕಾರದ ಆರೈಕೆ ಮಾಡುವುದು, ಎರಡನೇಯದು ಮಾತ್ಸರ್ಯ ಕಾರಣವಾಗಿ ಗರ್ಭಿಣಿಗೆ ಹಿಂಸೆಯನ್ನು ಕೊಟ್ಟು ಆಕೆ ತಾಯಿ ಆಗದಂತೆ

ಕೇಡು ಬಗೆಯುವುದು. ಭಿನ್ನವಾಗಿ ಕಥನ ಗೀತೆಗಳಲ್ಲಿ ತಾಯ್ತನದ ಪ್ರಥಮ ಹಂತವನ್ನು ಬಿಂಬಿಸಲಾದೆ.

'ಎಲ್ಲಮ್ಮನ ಕಥನಗೀತೆ 'ಯಲ್ಲಿಯೂ ಆಕೆ ಮಕ್ಕಳಿರದೇ ಬಂಜೆತನದಿಂದ ರೋಸಿಹೋಗಿ ಪಣತೊಟ್ಟು ಹೆಂತಂತಾದರೂ ಸರಿ ಒಂದು ಮಗು ಬೇಕೆ ಬೇಕು ಬಂಜೆ ಎಂಬ ಶಬ್ದ ನೀಗಿ ಹೋದರೆ ಸಾಕು ಎಂದು ದೇವರಿಂದ ವರ ಪಡೆದು ಗರ್ಭಧರಿಸುತ್ತಾಳೆ. ಮೊದಲ ತಿಂಗಳಿಂದ ಹಿಡಿದು ಒಂಭತ್ತನೆ ತಿಂಗಳವರೆಗೆ ಬೇರೆ ಬೇರೆ ಬಯಕೆಗಳು ಆಕೆಗೆ ಕಾಡುತ್ತವೆ. ಎಳನೀರ, ತಿಳಿನೀರ, ಕಾಕಿಯ ಹಣ್ಣ, ಮಲ್ಲೀಗಿ, ಹಾರುಕ್ಕಿಬಾನಕೆನೆಮೊಸರು, ಪತ್ತಲ ಹಸರಕುಬಸ, ಕಂಠಲೇರಕ್ಕಿ ಕೊಡತುಪ್ಪ ಮುಂತಾದವುಗಳು ತಾಯಿ ಯಾಗಲಿರುವ ಹೆಣ್ಣು ಬಯಸುವ ಪದಾರ್ಥಗಳಲ್ಲೆವೂ ಎಲ್ಲಮ್ಮ ಬಯಸಿದಳು ಎಂದು ಕಥನಗೀತೆಯಲ್ಲಿ ಮೂಡಿ ಬಂದಿದೆ.

ತನ್ನ ವಂಶ ಮುಂದುವರೆಸಿಕೊಂಡು ಹೋಗಬೇಕಾದ ಗರ್ಭವತಿ ಹೆಣ್ಣನ್ನು ಸಂತೋಷ ಸಂಭ್ರಮದಿಂದ ನೋಡಿಕೊಳ್ಳಲಾಗುತ್ತದೆ. ಕೆಲ ಕಥನ ಗೀತೆಗಳಲ್ಲಿ ಗರ್ಭಿಣಿ ಹೆಣ್ಣು ಮಕ್ಕಳಿಗೆ ಸಂತೋಷವಾಗಿ ಸಂಭ್ರಮವಾಗಿ ನೋಡಿಕೊಳ್ಳಲಾಗಿದೆ. ಅದರಲ್ಲಿ ಸುಭದ್ರೆ ಕುರಿತು ಇರುವ ಕಥನವೂ ''ಜನಪದರ ಜೀವನದ ಚಕ್ರದಲ್ಲಿ ಹಳ್ಳಿಯ ಹೆಣ್ಣು ಮಗಳೊಬ್ಬಳು ಗರ್ಭವತಿಯಾಗಿ, ಎಲ್ಲ ಸಡಗರ ಸಂಭ್ರಮಗಳನ್ನು ಮೆರೆದು ನಾನಾ ರೀತಿಯ ಶಾಸ್ತ್ರ ಸಂಪ್ರದಾಯಗಳನ್ನು ಮುಗಿಸಿ ಹೆರಿಗೆಗಾಗಿ ತೌರಿಗೆ ಹೊರಡುವ ಮಧುರ ಸನಿವೇಶದಂತೆ ಈ ಕಥೆ ಸಾಗುತ್ತದೆ. ಸುಭದ್ರೆಯನ್ನು ಕರೆದ್ಯೊಯಲು ಅಣ್ಣ ಬಲರಾಮ ನಾನಾ ವಸ್ತು ವಿಶೇಷಗಳೊಡನೆ ಬರುವುದು. ಬಂಧು ಬಳಗದವರ ಉಟೋಪಚಾರಗಳು, ದಿನ ತುಂಬಿದ ಸುಭದ್ರೆಯನ್ನು ಬೀಳ್ಕೊಡುವ ವಿವರಗಳು ಈ ಕಥೆಯಲ್ಲಿ ಚಿತ್ರಿತವಾಗಿದೆ ''[4]

ಕಥಾನಕಗಳಲ್ಲಿ ಗರ್ಭವತಿ ಹೆಣ್ಣನ್ನು ಸುಖವಾಗಿ ನೋಡಿಕೊಳ್ಳುವ ಕುರಿತಂತೆ ಅಲ್ಲಲ್ಲಿ ಮೂಡಿ ಬಂದಿದೆ. ಆದರೆ ವಿರೋಧಾಭಾಸವೆಂಬಂತೆ ಗರ್ಭಿಣಿ ಹೆಣ್ಣನ್ನು ಸಂಭ್ರಮವಾಗಿ ನೋಡಿಕೊಳ್ಳುವುದಾಗಲಿ ಅವರ ಆರೈಕೆ ಮಾಡುವುದಾಗಲೀ ಮಾತ್ರ ಕಂಡು ಬರದೆ ಗರ್ಭಿಣಿ ಮಹಿಳೆಯರು ಶೋಷಣೆಗೆ ಒಳಗಾಗಿ ಹಿಂಸೆಯನ್ನು ಅನುಭವಿಸಿದ ಚಿತ್ರಣಗಳು ಹೆಚ್ಚಾಗಿ ಕಂಡು ಬರುತ್ತವೆ.

ಗರ್ಭವತಿ ಮಹಿಳೆಯರನ್ನು ನಾನಾ ಪ್ರಕಾರವಾಗಿ ಹಿಂಸೆಗೆ ಈಡು ಮಾಡಿರುವುದು ಕಥನ ಗೀತೆಗಳಲ್ಲಿ ವ್ಯಕ್ತವಾಗಿದೆ. ದ್ವೇಷ, ಅಸೂಯೆ ಸವತಿ ಮತ್ಸರ ಕಾರಣವಾಗಿ ಗರ್ಭಿಣಿಯರಿಗೆ ಕ್ರೂರ ಹಿಂಸೆ ಕೊಟ್ಟ ಹೃದಯ ವಿದ್ರಾವಕ ಘಟನೆಗಳು ಕಂಡು ಬರುತ್ತವೆ. ಸಾಮಾನ್ಯವಾಗಿ ಜನಪದ ಗೀತೆಗಳಲ್ಲಿ ಬಸುರಿ - ಬಯಕೆ - ಬಾಣತನ ಕುರಿತು ರಮ್ಯವಾದ ರೀತಿಯಲ್ಲಿ ಚಿತ್ರಣಗೊಡಿದ್ದು ಕಥನ ಗೀತೆಗಳಲ್ಲಿ ಮಾತ್ರ ಗರ್ಭಿಣಿ ಹೆಣ್ಣಿನ ಚಿತ್ರಣ ತುಂಬಾ ವಿಭಿನ್ನ . ರೀತಿಯಲ್ಲಿ ಮೂಡಿದನ್ನು ಗಮನಿಸಬಹುದು. ಇದಕ್ಕೆ ಉದಾಹರಣೆಎಂಬಂತೆ 'ಕಾಡಸಿದ್ದಮ್ಮ' ಕಥನ ಗೀತೆಯಲ್ಲಿ ಹೆರಿಗೆ ಬೇನೆಯನ್ನು ಅನುಭವಿಸುತ್ತಿರುವ ಕಾಡಸಿದ್ದಮ್ಮನನ್ನು ಇತರ

ರಾಣಿಯರು ಹಾಗೂ ಹೆರಿಗೆ ಮಾಡಿಸುವ ಸೂಲಗಿತ್ತಿಯು ಹಿಂಸೆಗೆ ಈಡುಮಾಡಿ ಕ್ರೌರ್ಯಕ್ಕೆ ಸಾಕ್ಷಿಯಾಗುತ್ತಾರೆ. ತುಂಬು ಬಸುರಿ ಸಿದ್ದಮ್ಮನನ್ನು ಕಾಲು ಮೇಲೆ ಮಾಡಿ ಕಂಬಕ್ಕೆ ಕಟ್ಟಿ, ತೂಗುವುದು, ಅಂಗಾತ ಕೆಡವಿ ಎದೆ, ಹೊಟ್ಟೆ ಮೇಲೆ ತುಳಿಯುವುದು ಪರಿಪರಿಯಾಗಿ ಅಂಗಲಾಚಿಬೇಡಿಕೊಂಡರು ಸವತಿ ಮಾತ್ಸರ್ಯದಿಂದ ಅಂಧರಾದ ರಾಣಿಯರು ಸ್ವಂತ ಹೆಣ್ಣಾಗಿ ಇನ್ನೊಂದು ಹೆಣ್ಣಿನ ಸಂಕಟ ತಿಳಿದುಕೊಳ್ಳದೆ ಹೋಗುತ್ತಾರೆ.

ನೀಲಕಂಠ ರಾಜನ ಕಥನ ಗೀತೆಯಲ್ಲಿ ಹಿಂಸೆ ಮೂಲಕ ಪರೀಕ್ಷಿಸುವ ಬಗೆ

"ಅಕ್ಕಿ ನೋಡೆ ನೀಲಮ್ಮನ ಅತ್ತಿ ಒಳ್ಳೆಯಣ್ಣೆ
ತಂದಿದ್ದಾರೆ ಕಡಯದೊಳಗೆ ಕಾಸಿದ್ದಾರೆ ಕೋಲೆಣ್ಣ ಕೋಲೆ
ಕಡಯದೊಳಗ ಇಳಿಯ ಅನ್ನುತ್ತಾರೆ ಕೋಲೆಣ್ಣ ಕೋಲ
ಕಡಯದೊಳಗ ಇಳಿಯುತ್ತಾಳೆ ಕೋಲೆಣ್ಣ ಕೋಲೆ
ಸತ್ಯದಕ್ಕಿ ನೀಲಮ್ಮ ಮ್ಯೆಯರ ಸೂಡನೀಲ್ಲೆ
ಕೋಲೆಣ್ಣ ಕೋಲ
ಕಲ್ಲಾರ ಕಾಸಿದ್ದಾರೆ ಕೈಯಲ್ಲಿಯ ಹಿಡಿಯುತ್ತಾರೆ
ಕೋಲೆಣ್ಣ ಕೋಲ
ಕಲ್ಲಾರ ಕಾಸಿದ್ದಾರೆ ಕೈಯಲ್ಲಿಯ ಹಿಡಿಯುತ್ತಾರೆ
ಕೋಲೆಣ್ಣ ಕೋಲ
ಕಲ್ಲಾರ ಕೈಯಲಿ ಹಿಡಿಯುತ್ತಾಳೆ ಕೋಲೆಣ್ಣ ಕೋಲ
ಸತ್ಯದಕ್ಕಿ ನೀಲಮ್ಮ ಕೈಯ ಸೂಡನೀಲ್ಲೆ ಕೋಲೆಣ್ಣ ಕೋಲೆ "[೭]

ಗರ್ಭವತಿಯಾದ ಸೊಸೆ ನೀತಿಗೆಟ್ಟವಳೆಂದು ಅನುಮಾನಿಸಿ ಪರೀಕ್ಷೆ ಒಡ್ಡುವ ನೆಪದಲ್ಲಿ ಹಿಂಸಿಸುತ್ತಾರೆ. ಕಾಡಿಗೆ ಅಟ್ಟುತ್ತಾರೆ. ಎಲ್ಲವೂ ಮೌನವಾಗಿ ಸಹಿಸಿಕೊಳ್ಳುತ್ತಾಳೆ. ಇಲ್ಲಿ ವ್ಯವಸ್ಥಿತ ಮೌಲ್ಯವನ್ನು ಒಪ್ಪಿಕೊಂಡು ಆ ನೆಲೆಯಲ್ಲಿಯೇ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದ್ದಾಳೆ. 'ನಾಗರ ಹಾವಿನ' ಕಥಾನಕದಲ್ಲೂ ಸಹ ಗರ್ಭಿಣಿಗೆ ಸಂಶಯಪಟ್ಟು ಕಾಡಿಗೆ ಅಟ್ಟಿರುವ ಕಥೆ ಇದು.

'ಅಕ್ಕ ನಾಗಮ್ಮನ' ಕಥನಗೀತೆಯಲ್ಲಿ ನಾಗಮ್ಮ ಗರ್ಭಿಣಿಯಾದಾಗ ಆಕೆಯ ಮಾವ ಅದನ್ನು ಪ್ರಶ್ನಿಸಿ 'ಇದು ಯಾರು ಮಾಡಿದ ಬಸರು' ಎಂದು ಅನುಮಾನ ಪಡುತ್ತಾನೆ. ಕಾದ ಹಂಚಿನಲ್ಲಿ ನಾಣ್ಯ ಹಾಕಿ ಅದನ್ನು ಕೈಯಿಂದ ತೆಗೆಯಲು ಹೇಳುತ್ತಾರೆ. ಅದಕ್ಕೆ ಹೆದರದ ಅಕ್ಕ ನಾಗಮ್ಮ ಕಾದ ಎಣ್ಣೆಗೆ ಕೈ ಹಾಕಿ ದುಡ್ಡು ಹೊರ ತೆಗೆಯುತ್ತಾಳೆ. ಆಕೆಗೆ ಯಾವ ಗಾಯವೂ ಆಗುವುದಿಲ್ಲ! ಪಾತಿವ್ರತಾ ಜಾಡಿನಲ್ಲಿ ಹಿಂಸಿಸಿರುವುದು ಕಂಡು ಬರುತ್ತದೆ. ಉದಹರಣೆಗೆ

'ಕಲ್ಲಿನ ಒಲಿಯ ಹೂಡಿ ಕಬ್ಬಿಣ ಕಡಾಯಿಯಿಟ್ಟು
ಕಾಸ್ಯಾರ ಎಣ್ಣೆ ಎಸರಿಟ್ಟು ಕೋಲೆಣ್ಣ ಕೋಲೆ
ಕಾಸಿದರ ಎಣ್ಣೆ ಎಸರಿಟ್ಟು ರತ್ನಮ್ಮಾ
ಎಣ್ಣ್ಯಾಗಿನ ದುಡ್ಡ ತೆಗೆಯೆಂದು ಕೋಲೆಣ್ಣ ಕೋಲೆ

ಹತ್ತು ದೇವರಿಗಿ ನೆನೆದು ಹಾಕ್ಯಾಳ ಬಲಗೈ

ಬೆರಳ ಒಂದು ಸುಡಲಿಲ್ಲ ಕೋಲೆಣ್ಣ ಕೋಲೆ

ಬೆರಳರ ಒಂದು ಸುಡಲಿಲ್ಲ ರತ್ನಮ್ಮಾ

ಎಣ್ಣ್ಯಾಗಿನ ದುಡ್ಡ ತೆಗೆಯೆಂದು ಕೋಲೆಣ್ಣ ಕೋಲೆ.'

(ಅವ್ವ ಕಾಡಾದಿ ಗೌರವ್ವ ಹಾಡಿದ ಹಾಡು-ಲೇ:ಡಾ: ನೀಲಾಂಬಿಕಾ ಪ್ರೋ. ಪಾಟೀಲ:ಪು-೨೩೮)

ಪಾತಿವ್ರತ್ಯವನ್ನು ಹೆಣ್ಣಿಗೆ ಪ್ರಶ್ನಿಸಲಾಗುತ್ತದೆ ವಿನಹ ಪುರುಷರಿಗಲ್ಲ. ಇದು ನಮ್ಮ ಪುರುಷಪ್ರಧಾನ ವ್ಯವಸ್ಥೆಗೆ ಸಾಕ್ಷಿ ಎನ್ನಬಹುದು.

## 3. ತಾಯ್ತನದ ತ್ಯಾಗ

ಕಾಶೀಬಾಯಿ ಕಥನ ಗೀತೆ ಪಾತಿವ್ರತ್ಯದ ಮಹತ್ವವನ್ನು ಸಾರುವ ಕಥಾನಕವಾಗಿದೆ. ಹೆರಿಗೆಗಾಗಿ ತವರಿಗೆ ಬಂದ ಕಾಶಮ್ಮಳನ್ನು ಗಂಡ ಕರೆಯಲು ಬರುತ್ತಾನೆ. ಆಕೆಯ ತಾಯಿ ಮಗು ಚಿಕ್ಕದಾಗಿದೆ ಬೇಸಿಗೆ ದಿನ ಬೇರೆ, ಇನ್ನೂ ಕೆಲದಿವಸ ಇಲ್ಲಿಯೇ ಇರಲಿ ಎಂದು ಹೇಳುತ್ತಾರೆ. ಇದರಿಂದ ಕಾಶಮ್ಮನ ಗಂಡ ಕೋಪಗೊಂಡು ಹಿಂತಿರುಗಿ ಹೋಗುತ್ತಾನೆ. ಅಸಮಾಧಾನದಿಂದ ಕಾಶಮ್ಮಳು ಗಂಡನಡೆದ ದಾರಿಯಲ್ಲಿ ಮಗುವನ್ನು ಎತ್ತಿಕೊಂಡು ಹೊರಟುಬಿಡುತ್ತಾಳೆ.ರೈಲು ಬರುವುದಾಗಿ ಸ್ಟೇಶನ್ನಿಗೆ ಬರುವಷ್ಟರಲ್ಲಿ ಗಂಡ ಹೋಗಿರುತ್ತಾನೆ. ಹನ್ನೆರಡು ಗಂಟೆ ನಂತರ ಇನ್ನೊಂದು ರೈಲು ಬರುವುದಾಗಿ ಸ್ಟೇಷನ ಮಾಸ್ತರನು ಹೇಳುತ್ತಾನೆ. ರಾತ್ರಿಯಾಗಿ ಕಾಶಮ್ಮ ಏನು ಮಾಡಬೇಕು ಎಂಬುದನ್ನು ತಿಳಿಯಲಾರದೆ ಕಂಗಾಲಾಗುತ್ತಾಳೆ. ಆಗ ಸ್ಟೇಶನ ಮಾಸ್ತರನೊಬ್ಬ ಕೆಟ್ಟ ಮನಸ್ಸಿನಿಂದ ತನ್ನ ಕೋಣೆಗೆ ಹೋಗಿ ಮಲಗುವಂತೆ ಹೇಳುತ್ತಾನೆ. ಆಗ ಕಾಶಮ್ಮ ವಿಧಿಯಿಲ್ಲದೆ ಮಲಗುತ್ತಾಳೆ. ದುರುದ್ದೇಶದಿಂದ ಸ್ಟೇಶನ ಮಾಸ್ತರನು ನಡುರಾತ್ರಿ ಬಂದು ಬಾಗಿಲು ಬಡಿಯುತ್ತಾನೆ. ಕಾಶಮ್ಮ ಬೆಚ್ಚಿಬೀಳುತ್ತಾಳೆ. ಆತನ ಕುದೃಷ್ಟಿ ಗೊತ್ತಾಗಿ ಕೋಣೆಯಲ್ಲಿ ಆತನಿಗೆ ಹಾಕಿ ಹೊರ ಬಂದು ಬಾಗಿಲು ಮುಚ್ಚಿ ಬಿಡುತ್ತಾಳೆ. ತಾನು ಬಗೆದ ಆಸೆ ಈಡೇರಲಿಲ್ಲವೆಂದು ಸಿಟ್ಟಿಗೆದ್ದ ಮಾಸ್ತರನು ಮಗುವನ್ನು ಎದುರಿಗಿಟ್ಟುಕೊಂಡು ಬಾಗಿಲನ್ನು ತೆರೆದು ತನ್ನ ಆಸೆ ಈಡೇರಿಸುವುದಾಗಿ ಹೇಳಿ, ಇಲ್ಲವಾದರೆ ಮಗುವನ್ನು ಕೊಂದು ಬಿಡುತ್ತೇನೆ ಎಂದು ಹೇಳುತ್ತಾನೆ. ಮಕ್ಕಳಿಗಿಂತ ತನಗೆ ಪಾತಿವ್ರತ್ಯವೇ ದೊಡ್ಡದು, ಹಡೆದರೆ ಮಕ್ಕಳು ಸಿಗುತ್ತಾರೆ. ಮದುವೆ ಮಾಡಿಕೊಂಡರೆ ಸಿಗುತ್ತಾನೆ. ಆದರೆ ಪಾತಿವ್ರತ್ಯ ಕಳೆದುಕೊಂಡರೆ ಮತ್ತೆ ಸಿಗಲಾರದು ಎಂದು ಹೇಳುತ್ತಾಳೆ. ಇದರಿಂದ ಸಿಟ್ಟಿಗೆದ್ದ ಸ್ಟೇಶನ ಮಾಸ್ತರನು ಕಾಶಮ್ಮಳ ಎದುರಲ್ಲಿ ಮಗುವಿಗೆ ಚಿತ್ರಹಿಂಸೆ ಕೊಟ್ಟು ಸಾಯಿಸುತ್ತಾನೆ. ಉತ್ತರ ಕರ್ನಾಟಕದಲ್ಲಿ ಈ ಕಥಾನಕ ಅತ್ಯಂತ ಜನಪ್ರಿಯತೆ ಪಡೆದಿದೆ. ಪಾತಿವ್ರತ್ಯಕ್ಕಾಗಿ ತನ್ನ ತಾಯ್ತನವನ್ನೆ ಬಲಿಕೊಟ್ಟ ಘಟನೆ ಇಲ್ಲಿ ವ್ಯಕ್ತವಾಗಿದೆ. ನಮ್ಮ ಸಮಾಜದಲ್ಲಿ ಹೆಣ್ಣಿಗೆ ತನ್ನ ಮಾನ ರಕ್ಷಣವೇ ಮುಖ್ಯ ಎಂದು ನಂಬಿಕೊಂಡು ಬರಲಾಗಿದೆ. ಅಗೊಂದು ಸಾಮಾಜಿಕ ಮೌಲ್ಯ ಅದನ್ನು ಕಾಪಾಡಿಕೊಂಡು ಬರುವುದು ಹೆಣ್ಣಿನ ಮುಖ್ಯ

ಕರ್ತವ್ಯವೆಂದು ಬಿಂಬಿಸಲಾಗಿದೆ. ಅಮಾಯಕಳಾದ ಅಶಕ್ತಳಾದ ಕಾಶಮ್ಮ ತನ್ನ ಕಣ್ಣೆದುರಿನಲ್ಲೆ ತನ್ನ ಕರುಳಿನ ಕುಡಿಯನ್ನು ತುಂಡು ತುಂಡಾಗಿ ಕತ್ತರಿಸಿದರೂ ತನ್ನ ಪಾತಿವ್ರತ್ಯಗಾಗಿ ತನ್ನ ತಾಯ್ತನವನ್ನೆ ಬಲಿಕೊಟ್ಟ ಘಟನೆ ಕೇಳುಗರನ್ನು ದಂಗುಬಡಿಸುತ್ತದೆ.

ಇದಕ್ಕೆ ಮುಖ್ಯ ಕಾರಣ ನಮ್ಮ ಸಮಾಜದಲ್ಲಿ ಹೆಣ್ಣಿನ ಪಾತಿವ್ರತ್ಯದ ಬಗ್ಗೆ ಇರುವ ವ್ಯಯಕ್ತಿಕ ಹಾಗೂ ಸಾಮಾಜಿಕ ಮೌಲ್ಯ. ತನ್ನ ಕರುಳಿನ ಕುಡಿ ತನ್ನ ರಕ್ಷಣೆಗೆ ಬಲಿಯಾಗುತ್ತದೆ. ಇಲ್ಲಿ ತಾಯ್ತನದ ಬಹುದೊಡ್ಡ ತೋಳಲಾಟ ಕಾಣಬಹುದು. ತನ್ನ ಮಾನ ರಕ್ಷಣೆಗೆ ಹೆಚ್ಚಿನ ಬೆಲೆ ಕೊಟ್ಟು ಹೆತ್ತ ಮಗುವನ್ನು ಬಲಿಕೊಡಲು ನಿರ್ಧರಿಸುವುದು ಆಕೆಯ ವಯಕ್ತಿಕ ನಿಲುವಲ್ಲ ಸಾಮಾಜಿಕ ಒತ್ತಡದಲ್ಲಿ ಪ್ರಭಾವಿಯಾಗಿ ಕಾರ್ಯ ನಿರ್ವಹಿಸಿದೆ. ಮಾನ ಹೋದ ಹೆಣ್ಣಿಗೆ ಸಮಾಜದಲ್ಲಿ ಬೆಲೆ ಇಲ್ಲ ಪುರುಷಗ್ರಹಿ ಸಮಾಜ ಹೇರಿದ ಹೇರಿಕೆ.ಈ ಹೇರಿಕೆ ಪುರುಷರ ಮೇಲೆ ಇಲ್ಲದೇ ಇರುವುದು ಬಹುದೊಡ್ಡ ಲಿಂಗ ತಾರತಮ್ಯ ಮನಗಾಣಿಸುತ್ತದೆ.

'ಚೆಂಗಾಳ್ವೆಯ ಹಾಡು' ಎಂಬ ಕಥನಗೀತೆ ಕಾಶಮ್ಮನ ಕಥನಗೀತೆಯಂತೆ ತಾಯ್ತನದ ತ್ಯಾಗವನ್ನು ಎತ್ತಿ ತೋರಿಸುತ್ತದೆ. ಚೆಂಗಾಳ್ವೆಯ ಭಕ್ತಿಯನ್ನು ಈ ಹಾಡು ಬಿಂಬಿಸುತ್ತದೆ. ಒಬ್ಬ ಸಾಧು ಭಿಕ್ಷುಕ ಬಂದು ಭೀಕ್ಷೆ ಬೇಡುತ್ತಾನೆ. ಭಕ್ತಿವಂತಳಾದ ಚೆಂಗಾಳ್ವೆ ಮೊರದ ತುಂಬ ಮುತ್ತನ್ನು ತಂದು ನೀಡುತ್ತಾಳೆ. ಅದಕ್ಕೆ ಭೀಕ್ಷಕ್ಕೆ ತನಗೆ ಮುತ್ತು - ತನ್ನ ಏನೂ ಬೇಡ ಊಟ ನೀಡು ಎಂದು ಹೇಳುತ್ತಾನೆ. ವಿವಿಧ ತರಹದ ಅಡಿಗೆ ಮಾಡಿ ಬಡಿಸಲು ಮುಂದಾದಾಗ ನನಗೆ ಈ ಊಟ ಬೇಡ ನಿನ್ನ ಮಗನನ್ನು ಕೋಯ್ದು ಅಡಿಗೆ ಮಾಡಿದರೆ ಊಟ ಮಾಡುವುದಾಗಿ ಹೇಳುತ್ತಾನೆ. ಸ್ವಾಮಿ ಇಚ್ಛೆಯಂತೆ ಚೆಂಗಾಳ್ವೆ ತನ್ನ ಮಗನ ದೇಹವನ್ನು ಕೊಯ್ದು ಅಡಿಗೆ ಮಾಡುತ್ತಾಳೆ. ಕೊಯ್ದ ಮಗನ ತಲೆಯನ್ನು ನೆಲುವಿನ ಮೇಲೆ ಇಡುತ್ತಾಳೆ. ಸ್ವಾಮಿಗೆ ಎಡೆ ಮಾಡಿ ಮಗನ ದೇಹದಿಂದ ಮಾಡಿದ ಅಡಿಗೆಯನ್ನು ಬಡಿಸುತ್ತಾಳೆ. ಆಗ ಸ್ವಾಮಿಯು ಅವಳ ಮಗನನ್ನು ಕರೆದು ತರುವಂತೆ ಹೇಳುತಾನೆ. ಇದ್ದ ಒಬ್ಬನೇ ಮಗನನ್ನು ಕೊಯ್ದು ಅಡಿಗೆ ಮಾಡಿದ್ದೇನೆ, ಇನ್ನೊಬ್ಬನನ್ನು ಎಲ್ಲಿಂದ ತರಲಿ ಎಂದು ಕೇಳುತ್ತಾಳೆ. ಆಗ ಸ್ವಾಮಿ ಮಾಳಿಗೆ ಏರಿ ಕೂಗಿ ನೋಡು ಎನ್ನುತ್ತಾನೆ. ಕೂಗಿ ನೋಡಿದಾಗ ಮಗ ಬರುತ್ತಾನೆ. ಆಕೆಯ ಭಕ್ತಿಗೆ ಮೆಚ್ಚಿ ದೇವರು ಅವನನ್ನು ಬದುಕಿಸಿಕೊಡುತ್ತಾನೆ. ಈ ಕಥಾನಕ ಭಕ್ತಿಯ ಪರಾಕಾಷ್ಠೆಯನ್ನು ಎತ್ತಿ ತೋರಿಸುತ್ತದೆ. ಸ್ವಾಮಿ ಭಕ್ತಿಗಾಗಿ ತನ್ನ ಕರುಳ ಕುಡಿಯನ್ನು ತನ್ನ ಕೈಯ್ಯಾರೆ ಕೊಯ್ದು ಅಡಿಗೆ ಮಾಡುವ ವಿದ್ರಾವಕ ಘಟನೆ ಆಶ್ಚರ್ಯ ಮೂಡಿಸುತ್ತದೆ. ಇಲ್ಲಿ ಭಕ್ತಿಗಾಗಿ ತಾಯಿಯಾದವಳು ತನ್ನ ತಾಯ್ತನವನ್ನೆ ಬಲಿಕೊಟ್ಟಿರುವುದು ಕಂಡು ಬರುತ್ತದೆ.

ಕಾಶಿಬಾಯಿ ಹಾಡು ಮತ್ತು ಚೆಂಗಾಳ್ವೆಯ ಹಾಡು ಎರಡು ಕಥನ ಗೀತೆಗಳಲ್ಲಿ ಹೆಣ್ಣು ಸಾಮಾಜಿಕ ಮೌಲ್ಯವಾದ ಶೀಲ ಮತ್ತು ಭಕ್ತಿಗೆ ತನ್ನ ತಾಯ್ತನವನ್ನೆ ಬಲಿ ಕೊಟ್ಟಿರುವುದನ್ನು ನೋಡಿದರೆ. 'ಕಲಿಯುಗದ ಬಾಲೆ ' ಕಥನ ಗೀತೆಯಲ್ಲಿ ಚಾರಿತ್ರ್ಯ ಹೀನಳಾದ ಹೆಣ್ಣು ಮಗಳು ತನ್ನ ವಿಕೃತ ಕಾಮಕ್ಕಾಗಿ, ಅನೈತಿಕ ಸಂಭಂಧವಿಟ್ಟುಕೊಂಡು ತನ್ನ ಹೆತ್ತ ಮಕ್ಕಳನ್ನೆ ಹಿಂಸಿಸಿ ಕೊಲ್ಲುವ ಹೃದಯ ವಿದ್ರಾವಕ ಕಥೆ ಇದೆ. ಗಂಡ ದಂಡಿಗೆಂದು ಹೋದಾಗ

ಪರಪುರುಷನೊಂದಿಗೆ ಸಂಬಂಧವಿಟ್ಟುಕೊಂಡದ್ದು ಮಕ್ಕಳು ತನ್ನ ತಂದೆಗೆ ಹೇಳಿಬಿಡುತ್ತವೆ. ಎಂಬ ಅಂಜಿಕೆಯಿಂದ ಸ್ವಾರ್ಥಿಯಾದ ತಾಯಿ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೆ ಹಿಂಸಿಸಿ ಕೋಲುತ್ತಾಳೆ. ತಾಯ್ತನಕ್ಕೆ ಸಂಬಂಧಿಸಿದ ಕಥನಗೀತೆಗಳಲ್ಲಿ ಇದು ತದ್ವಿರುದ್ಧವಾಗಿ ಮೂಡಿ ಬಂದಿದೆ. ಇಲ್ಲಿ ಬೇಲಿಯೆ ಹೋಲವನ್ನು ಮೇಯ್ದದ್ದು ಕಾಣ್ಣುತೇವೆ. ತಾಯಿಯಾದವಳನ್ನು ದುರ್ನಡತೆಯಿಂದ ಒಬ್ಬ ರಾಕ್ಷಸಿಯಾಗಿ ಬಿಂಬಿಸಲಾಗಿದೆ. ಸ್ವಾರ್ಥಿಯಾದ ಹೆಣ್ಣು ತಾಯ್ತನವನ್ನು ಲೆಕ್ಕಿಸದೇ ತಾನು ಹರಕೆ ಹೊತ್ತು ಹೆತ್ತ ಮಕ್ಕಳನ್ನು ಹಿಂಸಿಸಿಕೊಲ್ಲುತ್ತಾಳೆ. ಸಮಾಜದಲ್ಲಿ ತನ್ನ ಮಾನ ಪ್ರಾಣಕ್ಕೆ ಹಾನಿಯಾಗುವ ಆತಂಕದಿಂದ ಇಂಥಹ ಕ್ರೂರ ನಿರ್ಧಾರವನ್ನು ಕಲಿಯುಗದ ಬಾಲೆ ತೆಗೆದು ಕೊಳ್ಳುತ್ತಾಳೆ. ಇಲ್ಲಿ ತಾಯಿಯ ಕ್ರೌರ್ಯ ಮುಗಿಲು ಮುಟ್ಟಿದೆ.

ಸೌಂಸೌತೇರ ಕಥಾನಕದಲ್ಲಿ ಸವತಿ ಮತ್ಸರಕ್ಕೆ ಮಗು ಬಲಿಯಾಗಿ ತಾಯಿಯ ಆಕ್ರಂದನ ಮುಗಿಲು ಮುಟ್ಟುವ ಘಟನೆ ಮನ ಕಲುಕುತ್ತದೆ. ಇಬ್ಬರು ಹೆಂಡತಿಯರು ಒಂದೇ ಮನೆಯಲ್ಲಿ ವಾಸಿಸಿದರೂ ಸಣ್ಣವಳು ತನ್ನ ದ್ವೇಷವನ್ನು ಮಗುವಿನ ಮೇಲೆ ಕಾರುತ್ತಾಳೆ. ತಾಯಿಯು ಕುಟುಂಬದಲ್ಲಿ ತನ್ನ ಹಕ್ಕನ್ನು ತನ್ನ ವಂಶ ಕುಡಿಯ ಮೂಲಕ ಚಲಾಯಿಸುವುದು ಪ್ರಾರಂಭಿಕ ಪದ್ಧತಿ. ಇದನ್ನು ಸಹಿಸದ ಸವತಿ ಸೇಡು ತಿರಿಸಿಕೊಳ್ಳಲು ಗಂಡನವಂಶದ ಕುಡಿಯನ್ನು ಒಂದಿಷ್ಟು ಅಳುಕದೆ ಕೊಲ್ಲುವ ದೃಶ್ಯ ಹೃದಯವಿದ್ರಾವಕವಾಗಿದೆ ಔಡಲದ ಗಡಗ್ಯಾಗ ಹಾಕಿದಾಳೊ ಪುತ್ತರ ಮ್ಯಾಲ ಹುಟ್ಟ ತಿರವಿತಾಳೊ ಗರಗರ ಎಂಬಲ್ಲಿ ಸವತಿಯ ಮಾತ್ಸರ್ಯ ಗಡಿದಾಟಿರುವುದು ಕಂಡುಬರುತ್ತದೆ. ತನ್ನ ಮಗು ಸತ್ತದ್ದು ಕಣ್ಣಾರೆ ಕಂಡತಾಯಿ ವಿಷತಿಂದು ಸಾಯುತ್ತಾಳೆ. ವ್ಯಾಪಾರಕ್ಕೆ ಹೋದ ಗಂಡ ಬಂದಾಗ ಹೆಂಡತಿ ಮತ್ತು ಮಗು ಸತ್ತ ವಿಷಯ ತಿಳಿದು ಆಯುಧ ತಿವಿದುಕೊಂಡು ತನು ಪ್ರಾಣ ಬಿಡುತ್ತಾನೆ. ಈ ವಿಷಯ ಊರಿನ ಊರೇ ತಿಳಿದು ಗೌಡ, ಕುಲಕರ್ಣಿ, ರೈತರೆಲ್ಲರೂ ಬಂದು ಸವತಿಯನ್ನು ಸರಕಾರಕ್ಕೆ ಒಪ್ಪಿಸಿ ಗಲ್ಲು ಶಿಕ್ಷೆ ಕೊಡುತ್ತಾರೆ.

ಸಮಾನ್ಯವಾಗಿ ಕಥನಗೀತೆಗಳಲ್ಲಿ ತಾಯಿಯ ಚಿತ್ರಣವನ್ನು ಮೌಲಿಕವಾಗಿ ಚಿತ್ರಿಸಿದು ಕಂಡು ಬರುತ್ತದೆ. ಸಮಾಜಕ್ಕಾಗಿ, ಕುಟುಂಬಕ್ಕಾಗಿ, ಯಜಮಾನ ಹೇಳಿದ ಮಾತು ಪಾಲಿಸಲಿಕ್ಕಾಗಿ, ತನ್ನ ಪಾತಿವ್ರತ್ಯ ಕಾಪಾಡುವುದಕ್ಕಾಗಿ ಭಕ್ತಿಗಾಗಿ ತನ್ನ ತಾಯ್ತನವನ್ನೆ ತ್ಯಾಗ ಮಾಡಿದ ಹೆಣ್ಣು ಮಕ್ಕಳನ್ನು ಕಾಣುತ್ತೇವೆ.ಆದರೆ 'ಕಲಿಯುಗದ ಬಾಲೆ ' ಕಥಾನಕ ಮಾತ್ರ ತಾಯ್ತನಕ್ಕೆ ಒಂದು ಕಪ್ಪು ಚುಕ್ಕೆಯಾಗಿದೆ ಎನ್ನಬಹುದು.

'ಮಳಿ ಹಾಡು' ಎಂಬ ಕಥಾನಕವು ಮಳೆ ಇಲ್ಲದೆ ಭೂಮಿಗೆ ಬರ ಬಂದು ತಮ್ಮ ಮಕ್ಕಳನ್ನೆ ಮಾರುವ ದಾರುಣ ಘಟನೆ ಚಿತ್ರಣಗೊಂಡಿದೆ.

"ಒಕ್ಕಲಗೇರ್‍ಯಾಗ ಒಣ್ಯಾಗ ಅವರು
ಮಕ್ಕಳು ಮಾರ್‍ಯಾರ ಮಳಿರಾಜಾ
ಮಕ್ಕಳ ಮಾರಿ ರೊಕ್ಕ ಹಿಡಿಕೊಂಡು
ಭತ್ತಂತ ತಿರಗ್ಯಾರ ಮಳಿರಾಜ "೮

ಮಕ್ಕಳನ್ನು ಮಾರಿ ರೊಕ್ಕ ಹಿಡಿದು ಹುಡುಕಿದರೂ ಎಲ್ಲಿಯೂ ಭತ್ತವಿಲ್ಲ. ಇಲ್ಲಿ ಬರದ ದಾರುಣ ಚಿತ್ರಣವಿದೆ. ಅನ್ನಕ್ಕಾಗಿ ತಮ್ಮ ಮಕ್ಕಳನ್ನು ಮಾರುವುದಷ್ಟೇ ಅಲ್ಲ. ಹಸುವಿನಿಂದ ಒದ್ದಾಡಿ ಸಾಯುವುದನ್ನು ನೋಡಲಾಗದೆ ಅನ್ನದಲ್ಲಿ ವಿಷ ಹಾಕಿ ಕೊಲ್ಲುತ್ತಾರೆ.

"ಗಿದ್ದನ ಅಕ್ಕ್ಯಾಗ ಮಳಿರಾಜಾ ಅವರು
ಅಪುವನ್ನು ಕೂಡಿಸ್ಯಾರೆ ಮಳಿರಾಜಾ
ಸಣ್ಣ ಕೂಸಿಗಿ ಮನ್ನಿಸಿ ಉಣಿಸ್ಯಾರ
ಕಣ್ಣನ್ನೆ ಮುಚ್ಚ್ಯಾವ ಮಳಿರಾಜಾ "೯

ಇಲ್ಲಿ ತಾಯಿ ತನ್ನ ಕೈಯಾರೆ ತನ್ನ ಹಸುಗೂಸಿಗೆ ಅನ್ನದಲ್ಲಿ ಅಪುಹಾಕಿ ಮಲಗಿ ಸುತ್ತಾಳೆ. ಆ ಹಸುಗೂಸು ಅಲ್ಲೇ ಕಣ್ಣು ಮುಚ್ಚುತ್ತವೆ. ಅತಿವೃಷ್ಟಿ ಕಾರಣವಾಗಿ ಭೂಮಿಯ ಮೇಲೆ ಬರ ಆವರಿಸಿಕೊಳ್ಳುತ್ತದೆ. ಇಲ್ಲಿ ತಾಯಿಯ ಆಸಾಯಕತೆ ಎದ್ದು ಕಾಣುತ್ತದೆ.

'ಕೋಂತ್ಯಮ್ಮ' ಈ ಕಥನಗೀತೆ ಮಹಾ ಭಾರತದಲ್ಲಿ ಬರುವ ಕುಂತಿಯ ಕಥೆಯನ್ನು ಒಳಗೊಂಡಿದ್ದು, ಕುಂತಿ ತನ್ನ ಮಕ್ಕಳಿಗಾಗಿ ಪಟ್ಟ ಕಷ್ಟಗಳನು ಇದು ಚಿತ್ರಿಸುತ್ತದೆ. ಇಲ್ಲಿ ಕುಂತಿ ಒಬ್ಬ ಸಾಮಾನ್ಯ ಹೆಣ್ಣಾಗಿ ಕಾಣುತ್ತಾಳೆ. ಬಡತನದ ಬೇಗೆಯಲ್ಲಿ ಬೆಳೆಯುತ್ತಿರುವ ತಾಯಿ ಹೇಗೆ ತನ್ನ ಸಂಸಾರ ನಡೆಸುತ್ತಾಳೋ ಆ ಪ್ರಕಾರ ಕುಂತಿ ಕೂಡ ಸಂಸಾರ ನಡೆಸುತ್ತಾಳೆ. ತನ್ನ ಮಕ್ಕಳಿಗೆ ಹೊಟ್ಟಿ ಹಸಿದಾಗ ಕಾಡಿಗೆ ಹೋಗಿ ಸೊಪ್ಪುತಂದು ಉಪ್ಪಿಲ್ಲದೆ ಹಾಗೆ ಬೆಯಿಸಿ ಮಕ್ಕಳ ಹಸಿವನ್ನು ನೀಗಿಸುತ್ತಾಳೆ. ಭೀಮನಿಗೆ ಹಸಿವು ನೀಗದೆ ಹೋದಾಗ ತನ್ನ ಎದೆಹಲನ್ನು ನೀಡುತ್ತಾಳೆ. ಅದು ಸಾಲದಾಗ ತನ್ನ ಕಿರು ಬೆರಳು ಚೀಪಿಸುತ್ತಾಳೆ. ಬಡತನಕೆ ರೋಸಿ ಎದೆಗುಂದದೆ ಗಂಡುಗಾಸೆಯ ಹಾಕಿ ದಿಂಡುಡುಗೆಯ ಸುತ್ತಿ ಮಕ್ಕಳಿಗಾಗಿ ದುಡಿಯುತ್ತಾಳೆ. ಇಲ್ಲಿ ಕುಂತಿ ಪಡುವ ಪಾಡು ಹೇಳತೀರದು. ಬಡತನದಲ್ಲಿ ಎಷ್ಟೇ ಕಷ್ಟ ಬಂದರೂ ತನ್ನ ಮಕ್ಕಳನ್ನು ಸಾಕಿ ಸಲಹುತ್ತಾಳೆ. ಕಾಡಿನಲ್ಲಿ ಮಕ್ಕಳೊಂದಿಗೆ ವನವಾಸ ಅನುಭವಿಸುವ ಕೊಂತೆಮ್ಮ ತನ್ನ ಸುಖದ ಕುರಿತು ಚಿಂತಿಸದೆ ಮಕ್ಕಳನ್ನು ಕಣ್ಣ ರೆಪ್ಪೆಯಲ್ಲಿಟ್ಟುಕೊಂಡು ಕಾಪಾಡುತ್ತಾಳೆ. ಇಲ್ಲಿ ಕುಂತಿ ತನ್ನ ಸುಖವೆಲ್ಲ ತ್ಯಾಗ ಮಾಡುವ ಮೂರ್ತಿಯಾಗಿ ಕಂಡು ಬರುತ್ತಾಳೆ.

ಅಸಗರಲಿ ಕಥಾನಕದಲ್ಲಿ ತನ್ನ ಆರು ತಿಂಗಳ ಮಗುವನ್ನು ಕಳೆದುಕೊಂಡ ತಾಯಿಯ ಪ್ರಲಾಪ ಮುಗಿಲು ಮುಟ್ಟಿದ. ಚಿತ್ರಣವಿದೆ ಕರ್ಬಲಾ ಹಾಡುಗಳಿಗೆ ಸಂಬಂದಿಸಿದಂತೆ ಇಲ್ಲಿ ವಸ್ತು ಕಂಡುಬರುತ್ತದೆ. ಕರ್ಬಲಾ ಯುದ್ಧದ ಅನುಕರಣೆಯಾಗಿ ಮೊಹರಂ ಆಚರಣೆ ನಡೆದುಕೊಂಡು ಬಂದಿದೆ. ಈ ಯುದ್ಧದಲ್ಲಿ ಹುಸೇನ ಹೆಂಡತಿಯಾದ ಬಾನೊ ಎಂಬ ಹೆಣ್ಣು

ಮಗಳು ತನ್ನ ಆರುತಿಂಗಳ ಮಗುವಿನೊಂದಿಗೆ ಯುದ್ಧದಲಿರುವಾಗ ಶತ್ರುಗಳ ಬಾಣ ಬಂದು ಮಗುವಿನ ಎದೆಗೆ ಹೊಕ್ಕಿ ತಾಯಿಯ ಎದುರಿಗೆ ಪ್ರಾಣ ಬಿಡುತ್ತದೆ. ಈ ಸಂದರ್ಭದಲ್ಲಿ ತಾಯಿಯ ಆಕ್ರಂದನ ಇಡೀ ಜನಪದ ಸಾಹಿತ್ಯದಲ್ಲಿಯೇ ಕಣಸಿಗದಷ್ಟು ನೋವುಗಳನ್ನು ಈ ಕಥಾನಕದಲ್ಲಿ ತುಂಬಿದೆ.

ಇಲ್ಲಿ ತಾಯಿ ದು:ಖ ಪಡುವ ರೀತಿ ಓದುಗರ ಹೃದಯವನ್ನು ಕಲಕುತ್ತದೆ. ಕಣ್ಣುಗಳಿಂದ ಹನಿ ಉದುರಿಸುತ್ತದೆ. "ಒಂದು ಮಗು ತುಂಬು - ಹೆಣ್ಣಿನ ತಾಯ್ತನದ ಸ್ಥಾನವನ್ನು ಇನ್ನಾವ ಐಶ್ವರ್ಯವೂ ತುಂಬಿಕೊಡುವುದು ದುಸ್ತರ ತನ್ನ ಮಗುವನ್ನು ಕಳೆದುಕೊಂಡ ಒಬ್ಬ ತಾಯಿಯ ಗೋಳು ಇದಾದುದರಿಂದ ನಮಗೆ ಕಾವ್ಯದ ತುಂಬ ತನ್ನ ತಾಯ್ತನ ಬರಿದಾದುದಕ್ಕೆ ಪಡುವ ಆಕ್ರಂದನ ಕೇಳಬರುತ್ತದೆ. ಭಾಳ ಹೊತ್ತ ಆಯ್ತು ಮಲಿ ಕುಡಿವಲ್ಲದ; ಎತ್ತಿಕೊಂಡು ಉಡಿದೊಳು ಎಚ್ಚತರದಿಂದ ನಿನ್ನ ಸಣ್ಣ ತುಟಿಗೆ ಕುಡುವೇನೊ ಮುದ್ದ ಎನ್ನುವ ಸಾಲುಗಳಲ್ಲಿ ಈ ಮೇಲಿನ ಭಾವ ಮೂಡಿ ಬಂದಿದೆ. ತಾಯಿಯ ಆಸೆಗಳನ್ನು ಕವಿ ಚಿತ್ರಿಸಿರುವ ರೀತಿ ಅತ್ಯಂತ ಪರಿಣಾಮಕಾರಿಯಾಗಿದೆ. ಮಗುವಿಲ್ಲದ ತಾಯಿಯ ಬಾಳು ವ್ಯರ್ಥ ಎಂಬುದನ್ನು ಸಾರ್ಥಕ ಆಗಲಿಲ್ಲ ಹುಟ್ಟಿಬಂದ ಎಂಬ ನುಡಿ ತುಂಬಿಕೊಡುತ್ತದೆ .

ಎಲ್ಲಿ ಬೀಟಲಿ ತೊಟ್ಟಿಲ ನಿಂದ<br>
ಮಲಿಹಾಲ ಯಾರು ಕುಡಿದಾರು ಬಂದ<br>
ಯಾರಿಗ ಹೋಗಿ ಕರಿಯಲಿ ಅಸಗರಂದ

ಎನ್ನುವ ಸಾಲುಗಳಲ್ಲಿ ಶೋಕ ಮಡುಗಟ್ಟುತ್ತದೆ. ತೊಟ್ಟಿಲು ತಾಯಿಯ ಬಸಿರನ್ನು ಪ್ರತಿನಿಧಿಸುತ್ತದೆ "[00] ಹೀಗೆ ಇಡೀ ಕಥಾನಕದ ತುಂಬ ತಾಯಿಯ ದು:ಖ ಹೊರಚಲ್ಲಿ ಕೇಳುಗರನ್ನು ದು:ಖ ಸಾಗರದಲ್ಲಿ ಮುಳಗಿಸುತ್ತದೆ.

## 4. ತಾಯ್ತನದ ಬಲಿದಾನ

ಜನಪದ ಕಥನಗೀತೆಗಳು ಹೇಚ್ಚಾಗಿ ತ್ಯಾಗ - ಬಲಿದಾನದ ಕಥೆಗಳಾಗಿವೆ. ಇಲ್ಲಿನ ಮುಖ್ಯ ಪಾತ್ರವಾಗಿ ಕಂಡು ಬರುವವಳು ಹೆಣ್ಣು. ಹೆಣ್ಣಿನ ಬದುಕಿನ ವೈವಿಧ್ಯತೆಯನ್ನು ಸಂಕೀರ್ಣತೆಯನ್ನು ಈ ಕಥಾನಕಗಳು ಚಿತ್ರಿಸುತ್ತವೆ. ಬಹುಪಾಲು ಹೆಣ್ಣಿನಿಂದಲೇ ಸೃಷ್ಟಿಯಾದ ಇವು ಆಕೆಯ ಬಲಿದಾನದ ಪ್ರತೀಕವೇ ಆಗಿವೆ. ಹೆಣ್ಣಿನ ಬದುಕಿನ ಬಹು ಮುಖ್ಯ ಘಟ್ಟವೆಂದರೆ ಆಕೆ ತಾಯಿ ಆಗುವ ಸಂದರ್ಭ. ವ್ಯಕ್ತಿನೆಲೆಯಲ್ಲಿ ತಾಯಿಗೆ ಪ್ರಾಮುಖ್ಯತೆ ಇದ್ದೆ ಇದೆ. ಆದರೆ ಹಲವು ಸಂದರ್ಭದಲ್ಲಿ ಸಮಜಕ್ಕಾಗಿ ತ್ಯಾಗಮಾಡಲು ಹೋಗಿ ತನ್ನ ತಾಯ್ತನವನ್ನೆ ಬಲಿಕೊಟ್ಟಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿ ಹೆಣ್ಣಿನ ಬಲಿನಡೆದರೂ ಅದು ತಾಯ್ತನದ ಬಲಿಯೇ ಆಗಿದೆ. ಹೆಣ್ಣು ಮಕ್ಕಳು ತಾವು ಜೀವಿಸುವ ಸಮಾಜಕ್ಕಾಗಿ ಕೆರೆ, ಹಳ್ಳ, ಬಾವಿ, ಕೋಟೆ ಕೊತ್ತಲುಗಳಿಗೆ ಬಲಿಯಾಗಿದ್ದಾರೆ. ಬಲಿಯಾದ ಹೆಣ್ಣು ಮಕ್ಕಳಲ್ಲಿ ಹೆಚ್ಚಿನವರು ಚಿಕ್ಕ ಮಕ್ಕಳ ತಾಯಂದಿರಾಗಿದ್ದಾರೆ.

ಚಿಕ್ಕ ಹಸುಳೆಯ ತಾಯಂದಿರೆಂದು ಸಹ ಕನಿಕರಪಡದೆ ಒಂದು ತ್ಯಾಗವಾದರೆ, ಆ ಕಂದ ತನ್ನ ತಾಯಿ ಕಳೆದುಕೊಂಡು ತಬ್ಬಲಿಯಾಗುವುದು, ಮಗುವಂದಿಗೆ ಬಲಿಯಾಗುವುದು, ಹೀಗೆ ಮೂರು ನೆಲೆಯಲ್ಲಿ ಕ್ರೌರ್ಯತೆ ಕಾಣಬಹುದಾಗಿದೆ. ಬಲಿಯಾಗಲು ಸಿದ್ಧಳಾದ ಹೆಣ್ಣು ತಾನೊಬ್ಬ ತಾಯಿಯೆ ಲೆಕ್ಕಿಸದೆ ಕುಟುಂಬದ ಹಿರಿಯ ಯಜಮಾನನ ಆಜ್ಞೆಯಂತೆ ಬಲಿಯಾಗಿ ತನ್ನೊಂದಿಗೆ ತಾಯ್ತನವನ್ನು ಬಲಿಕೊಟ್ಟಿದ್ದು ನೋಡಬಹುದು.

'ಮಲರಡ್ಡಿ ಸಾಹುಕಾರ' ಮತ್ತು 'ಸಂಗಮ್ಮನ' ಕಥಾನಕಗಳು ಕೆರೆಗೆ ಹಾರದ ರೀತಿಯಲ್ಲಿ ಬಲಿಯಾದ ಘಟನೆ ಇದೆ ಆದರೆ ತಾಯಿಯಾಗಲಿರುವ ಗರ್ಭಿಣಿಗೆ ಬಲಿ ಕೊಟ್ಟದ್ದು ಮುಖ್ಯವಾಗಿ ಗಮನಿಸುವ ವಿಷಯ ಹೀಗೆ ಹಲವು ಕಥಾನಕಗಳನ್ನು ಕಾಣಬಹುದಾಗಿದೆ.

'ಹುಳಿಯಾರುಕೆಂಚಮ್ಮ' ಕಥನಗೀತೆಯಲ್ಲಿ ಕೆಂಚಮ್ಮಳನ್ನು ಹುಳಿಯಾರಿನ ಕೆರೆಗೆ ಬಲಿಕೊಡುವಾಗ ಆಕೆ ಇನ್ನು ಹಸಿ ಬಾಣಂತಿಯಾಗಿರುತ್ತಾಳೆ.ಗಂಡು ಮಗುವಿನ ತಾಯಿಯಾಗಿ ಎಲ್ಲರೂ ಸಂತೋಷದಿಂದಿರುವಾಗಲೇ ಬಲಿ ಕೊಡುವ ಘಟನೆ ನಡೆದು ಬೀಡುತ್ತದೆ. ಆಕೆ ಗಂಗೆ ಪೂಜೆ ಮಡುವಾಗ ಕೆರೆಯ ಏರಿಯ ಕಲ್ಲು ಸಡಿಲವಾಗುತ್ತದೆ.ಆಗ ಮಾವನಾದವನು ಮಗುವಿನ ನೆಪದಲ್ಲಿ ಮನೆಗೆ ಹೋಗಲು ತಿಳಿಸುತ್ತಾನೆ. ಮನೆಗೆ ಹೋದ ಕೆಂಚವ್ವ ಮತ್ತೆ ತನ್ನ ಇಚ್ಛೆಯಿಂದ ಕೆರೆಗೆ ಬರುತ್ತಾಳೆ. ತನ್ನ ಮಗು ಸಮ್ಮೇತ ಕೆರೆಗೆ ಆಹಾರವಾಗುತ್ತಾಳೆ. ಈ ಕಥನಗೀತೆ ತಾಯ್ತನ ನೆಲೆಯಲ್ಲಿ ಭಿನ್ನವಾಗಿ ಕಾಣುತ್ತದೆ. ತನ್ನ ಎಳೆಗೂಸಿನ ಸಮೇತ ಕೆರೆಗೆ ಬಲಿಯಾಗುವ ದೃಶ್ಯ ಕರುಣಾಜನಕವಾಗಿದೆ.

ಒಡ್ಡರ ಬೋಯಿ ಆಗತಾನೆ ಮಗುವನ್ನು ಹೆತ್ತಿರುತ್ತಾಳೆ. ಬಾಣಂತಿಯಾದ ಇವಳು ಕೆರೆಗೆಬಲಿಯಾಗುತ್ತಾಳೆ. ಆದರೆ 'ಹುಳಿಯಾರಕೆಂಚಮ್ಮ 'ನಂತೆ ಸ್ವಪ್ರೇರಣೆಯಿಂದ ಈಕೆ ಬಲಿಯಾಗುವುದಿಲ್ಲ. ನಮ್ಮ ಮಾವ ಬಡ್ಡಿಮಗ ಅವ್ರು ಹೊಸಕೆರೆ ಕಟ್ಟಸವ್ರೆ ನನ್ನ ಬಲಿದಾನ ಕೊಡುತ್ತಾರೇ ಎಂದು ಪ್ರತಿರ್ಭಟಿಸುತ್ತಾಳೆ. ಆದರೆ ಮಾವನ ಒತ್ತಾಯಕ್ಕೆ ಬಲಿಯಾಗಲೂ ಒಪ್ಪುತ್ತಾಳೆ. ತನ್ನ ಮಗುವನ್ನು ಗಂಗೆ ಕೈಗೆ ಒಪ್ಪಿಸಿ ತಾನೂ ನೀರಿಗೆ ಬಲಿಯಾಗುತ್ತಾಳೆ. ನಂತರ ಆಕೆಯ ಶವ ಕೆರೆಯಲ್ಲಿ ತೆಲುತ್ತದೆ. ಗಂಡನಿಗೆ ಈ ಸುದ್ದಿ ತಿಳಿದು ಕೆರೆಗೆ ಬಂದಾಗ ಅಲ್ಲಿ ಹೆಂಡತಿಯ ಶವ ಮೇಲೆ ತೆಲುತ್ತಿರುತ್ತದೆ. ನನ್ನ ಹೆಂಡತಿ ಪತಿವ್ರತೆಯಾಗಿದ್ದರೆ ನನ್ನ ಕಣಿಗೆ ಕಾಣಲಿ ಎಂದಾಗ ಒಡರ ಬೊಯಿ ಎದ್ದು ಬರುತ್ತಳೆ. ಸತ್ತು ಹೋದ ಮಗುಮಾತ್ರ ಹಿಂತಿರುಗಿ ಬರುವುದಿಲ್ಲ. ಇಲ್ಲಿ ತಾಯ್ತನದ ಬಲಿಯಾಗಿರುವುದು ಎದ್ದು ಕಾಣುತ್ತದೆ.

'ಮದಗದ ಕೆಂಚವ್ವ 'ನ ಕಥನ ಗೀತೆಯಲ್ಲಿ ಗೌಡನು ತಾನು ಕಟ್ಟಿಸಿದ ಕೆರೆ ಬಲಿಕೊಡುವುದಕ್ಕಾಗಿಯೇ ತಂಗಿಯ ಮಗಳಾದ ಕೆಂಚ್ಚವನೊಂದಿಗೆ ತನ್ನ ಮಗನ ಲಗ್ನ ಮಾಡಿಸುತ್ತಾನೆ. ಮುಂದೆ ಆಕೆ ಒಂದು ಮಗುವಿನ ತಾಯಿಯಾಗುತ್ತಾಳೆ. ಒಂದು ದಿನ ಕೆರಗೆ ಪೂಜೆಗೆಂದು ಹೋದಾಗ ಕೆಂಚವ್ವ ಮತ್ತು ಮಗು ಇಬ್ಬರು ನೀರು ಪಾಲಾಗುತ್ತಾರೆ. 'ಮಲ್ಲಿಗೆ ಮಾದೆವಿ ' ಕಥನಗೀತೆ ಸಹ ಏಂಟು ದಿನದ ಬಾಣಂತಿ ಮಗು ಸಮೇತ ಬಲಿಯಾದ ಘಟನೆಯನ್ನು ಪ್ರತಿಬಿಂಬಿಸುತ್ತದೆ. 'ಕೆರೆ ಹೊನ್ನಮ್ಮ' ಕಥನ

ಗೀತೆಯೂ ಸಹ ಇಂಥ ಘಟನೆಗಳನ್ನು ಧ್ವನಿಸುತ್ತದೆ. ಆದರೆ ಕೊನೆಯಲ್ಲಿ ಹೊನ್ನಮ್ಮ ಮೈದನೂ ಕೂಡ ಮುಳುಗಲು ಪ್ರಯತ್ನಿಸಿದಾಗ ಹೊನ್ನಮ್ಮ ಅಪವಾದ ಬರುವುದಾಗಿ ಹೇಳಿ ತಡೆಯುವ ದೃಷ್ಯ ವಿಶೇಷವಾಗಿದೆ. ಹೀಗೆ ಬಲಿದಾನಕ್ಕೆ ಸಂಬಂಧಿಸಿದಂತೆ ಕಥನ ಗೀತೆಗಳಲ್ಲಿ ಹೆಣ್ಣು ಮಕ್ಕಳು ತಮ್ಮ ತಾಯ್ತನವನ್ನೆ ಬಲಿಕೊಟ್ಟಿರುವುದನ್ನು ಕಾಣಬಹುದು.

ಬಲಿದಾನದ ಕುರಿತಾದ ಈ ಕಥಾನಕಗಳಲ್ಲಿ ಗಮನಿಸಬಹುದಾದುದೆಂದರೆ "ಜನಪದರು ಒಪ್ಪಿಕೊಂಡ ಸಾಮಾಜಿಕ ಮತ್ತು ವೈಯಕ್ತಿಕ ಮೌಲ್ಯಗಳ ಪರಸ್ಪರ ತಾಕಲಾಟವನ್ನು ನಾವು ಇವುಗಳಲ್ಲಿ ಕಾಣುತ್ತೇವೆ ಈ ಸಂಘರ್ಷದಲ್ಲಿ ಕೊನೆಗೆ ಜನ ಒಪ್ಪಿಕೊಳುವುದು. ಬಹುಜನ ಒಪ್ಪಿಗೆಯಾದ ಸಾಮಾಜಿಕ ಮೌಲ್ಯಗಳ ಜಯವನ್ನೆ, ಹೀಗೆ ಸಾಮಾಜಿಕ ಮೌಲ್ಯವನ್ನು ಎತ್ತಿ ಹಿಡಿಯಲು ಹೋಗಿ, ವೈಯಕ್ತಿಕ ಮೌಲ್ಯಗಳನ್ನು ಅವುಗಳ ಮುಂದೆ ತ್ಯಾಗ (ಬಲಿ) ಮಾಡುವ ಆಥವಾ ಸೋಲಿಸುವ ಸಂದರ್ಭಗಳನ್ನು ಅವರು ಸೃಷ್ಟಿಸುತ್ತಾರೆ. ಈ ಮೂಲಕ ವೈಯಕ್ತಿಕ ಮೌಲ್ಯ ಸಾಧನೆಗಿಂತ ಸಾಮಾಜಿಕ ಮೌಲ್ಯದ ಸಾಧನೆಯೆ ಮಹತ್ವದ್ದೆಂದು ಸಾರಿ, ಅವುಗಳ ತ್ಯಾಗವನ್ನೆ ಅವರು ಬೋದೀಸುತ್ತಾರೆ. ಇದು ಒಂದು ದೃಷ್ಠಿಯಲ್ಲಿ ಅನಿವಾರ್ಯ ನಿರ್ಣಯವೂ ಎನಿಸುತ್ತದೆ "[೨೦] ಅದಕ್ಕಾಗಿ ಮೊದಲೇ ಹೇಳಿದ ಹಾಗೆ ಇವು ಹೆಣ್ಣಿನ ಬದುಕಿನ ಬಹುಭಾಗವಾದ ತಾಯ್ತನವನ್ನು ಪ್ರಭಾವಿಸಿವೆ.

ಈ ಗ್ರಹಿಕೆಯ ಹೊರತಾಗಿ ತಾಯ್ತನದ ಇನ್ನೊಂದು ಮುಖವು ಇಲ್ಲಿ ವ್ಯಕ್ತವಾಗಿದೆ. ಅದೆಂದರೆ ಕಲಿಯುಗದ ಬಾಲೆ ಕಥಾನಕ. ತಾಯಿ ಹಾಗೂ ತಾಯ್ತನದ ಭೀಭತ್ಸತೆಯ ಮುಖ ವ್ಯಕ್ತವಾಗಿದೆ. ತನ್ನ ವ್ಯಬಿಚಾರಕ್ಕೆ ಅಡ್ಡಿಯಾದ ಕರಳು- ಬಳ್ಳಿಗಳನ್ನೇ ಸ್ವತ: ಕೈಯಾರೆ ಬಲಿ ಕೊಟ್ಟು ಕ್ರೌರ್ಯ ತಾಂಡವಾಡುವಂತೆ ಮಾಡಿದೆ.

" ಇಬ್ಬರು ಮಕ್ಕಳ ಕಟ್ಟಾಕಿ ಮುಂದೆ
ಹಿಂಸೆ ಮಾಡುತ್ತಾಳೆ ! ಲೌಡಿ
ಶೋಕವ ಮಾಡುತ್ತಾಳೆ....
...............................
ಹುಣಸೆ ಚಬ್ಬೆ ತಕ್ಕೊಂಡು ಮುಂಡೆ
ಹಿಂಸೆ ಮಾಡುತ್ತಾಳೆ ! ಲೌಡಿ
ಶೋಕವ ಮಾಡುತ್ತಾಳೆ "[೨೧]

ಹೀಗೆ ತಾಯಿ ಮತ್ತು ತಾಯ್ತನದ ವಿಭಿನ್ನ ಮುಖಗಳು ಕಥನ ಗೀತೆಗಳಲ್ಲಿ ವ್ಯಕ್ತವಾಗಿದೆ.

ಜನಪದ ಕಥನಗೀತೆಗಳಲ್ಲಿ ಪುರುಷ ಕೇಂದ್ರಿತ ಸಮಾಜ ರೂಪಿಸಿರುವ ನೀತಿ -ನಿಯಮಗಳು ಕಂಡು ಬರುತ್ತವೆ. ಪಾತಿವ್ರತ್ಯ ಕಾಯ್ದುಕೊಳುವಿಕೆ, ತ್ಯಾಗ - ಬಲಿದನ, ಮಾತ್ಸರ್ಯಭಾವ ಕಿರಿಕುಳ, ಕೌಟುಂಬಿಕ ಕಲಹಗಳಂತಹ ಕ್ರೌರ್ಯಕ್ಕೆ ಹೆಣ್ಣು ಬಲಿಯಾಗಿದ್ದಾಳೆ. ಕುಟುಂಬವೊಂದರಲ್ಲಿ ಬದುಕುವ

ಹೆಣ್ಣಿನ ಅಸಹಾಯಕತೆ, ಒಬ್ಬ ಹೆಣ್ಣು ಇನೊಂದು ಹೆಣ್ಣಿಗೆ ಮಾಡುವ ಹಿಂಸೆ ಮನ ಕಲಕುತ್ತದೆ. ಜನಪದ ಗೀತೆಗಳಗಿಂತಲೂ ಕಥನಗೀತೆಗಳಲ್ಲಿ ಹೆಣ್ಣಿನ ಬದುಕು ಸಮೀಪದಿಂದ ನೊಡಲು ಸಾಧ್ಯಾವಾಗುತ್ತದೆ. ಏಕೆಂದರೆ ಇಡೀಯಾಗಿ ಕಂಡು ಬರುವ ಒಂದು ಕಥೆ ಹೆಣ್ಣಿನ, ವಿವಿಧ ಮುಖವನ್ನು ಪರಿಚಯಿಸುತ್ತವೆ. ಕಥನ ಗೀತೆಗಳಲ್ಲಿ ಹೆಚ್ಚಾಗಿ ಹೆಣ್ಣಿನ ದಾರುಣತೆ ಚಿತ್ರಣಗೊಂಡಿದ್ದು. ಅಲ್ಲಿ ತಾಯ್ತನವೆಂಬುದು ಪೂರ್ವಾಗ್ರಹಪೀಡಿತ ಪರಿಕಲ್ಪನೆಗೆ ಬದ್ಧವಾಗಿದ್ದು ಆ ಮೂಲಕ ತನ್ನ ಬದುಕು ನಡೆಸಿದ್ದು. ನಡೆಸಿ ಬಲಿಯಾಗಿದ್ದು ಸ್ಪಷ್ಟವಾಗಿ ಕಾಣಬಹುದು.

## ಟಿಪ್ಪಣಿಗಳು

1. 'ಮಹಿಳಾ ಶೋಷಣೆಯ ಸವಾಲುಗಳು' ಸಂ- ಡಾ. ವಿಜಯಶ್ರೀ ಸಬರದ ಪು.೬

2. 'ಜನಪದ ಕಥನಗೀತೆಗಳಲ್ಲಿ ಮಹಿಳೆ' ಲೇ- ಡಾ. ಎಂ.ಕೆ.ರುಕ್ಮಿಣಿ ಪು.೯೫

3. 'ನನ್ನೊಡಲ ಹಾಡು-ಪಾಡು' ಸಂ- ಶಾಂತಾಮಠ ಪು.೬೮

4. 'ಆಯ್ದ ಜಾನಪದ ಕಥಾನಕಗಳು' ಸಂ - ಶಾರದಾದೇವಿ ಎಸ್. ಜಾಧವ ಪು.೩೦

5. 'ಕನ್ನಡ ಜಾನಪದ ಪ್ರಜ್ಞೆ' ಡಾ. ವೀರಣ್ಣ ದಂಡೆ ಪು. ೪೨

6. 'ಜನಪದ ಕಥನಗೀತೆಗಳಲ್ಲಿ ಮಹಿಳೆ' ಡಾ.ಎಂ.ಕೆ.ರುಕ್ಮಿಣಿ ಪು.೨೩೩

7. 'ಬೀದರ ಜಿಲ್ಲೆಯ ಬುಲಾಯಿ ಹಾಡುಗಳು' ಸಂ - ಡಾ. ಜಗನ್ನಾಥ ಹೆಬ್ಬಾಳೆ ಪು . ೮೧

8. 'ಜನಪದ ಕಥನಗೀತೆಗಳು' ಸಂ- ಡಾ.ಪಿ.ಕೆ ಖಂಡೋಬಾ ಡಾ.ಟಿ.ಎಂ.ಭಾಸ್ಕರ ಪು.೬೮

9. 'ಜನಪದ ಕಥನಗೀತೆಗಳು' ಸಂ- ಡಾ.ಪಿ.ಕೆ ಖಂಡೋಬಾ ಡಾ.ಟಿ.ಎಂ.ಭಾಸ್ಕರ ಪು.೮೦

10. 'ಕನ್ನಡ ಜಾನಪದ ಪ್ರಜ್ಞೆ ' ಡಾ. ವೀರಣ್ಣ ದಂಡೆ ಪು.೧೨

11. 'ಕನ್ನಡ ಜಾನಪದ ಪ್ರಜ್ಞೆ ' ಡಾ. ವೀರಣ್ಣ ದಂಡೆ ಪು.೨೬

12. 'ಕನ್ನಡ ಜಾನಪದ ಪ್ರಜ್ಞೆ ' ಡಾ. ವೀರಣ್ಣ ದಂಡೆ ಪು.೯೧

# ಅಧ್ಯಾಯ:-5 ಗಾದೆಗಳಲ್ಲಿ ತಾಯ್ತನದ ಗ್ರಹಿಕೆಗಳು

- ತಾಯಿ ಮತ್ತು ತವರಿನ ಮಹತ್ವ
- ವಿರೋಧಾಭಾಸದ ಗ್ರಹಿಕೆಗಳು

## ಅಧ್ಯಾಯ:-5

## ಗಾದೆಗಳಲ್ಲಿ ತಾಯ್ತನದ ಗ್ರಹಿಕೆಗಳು

ಗಾದೆಗಳು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿದೆ. ಜನಪದ ಗದ್ಯ ಪ್ರಕಾರಗಳಲ್ಲಿ ಗಾದೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಇವು ಜನ ಸಾಮಾನ್ಯರ ಅನುಭವದ ಪ್ರತೀಕವಾಗಿ ಬಹು ಜಮಪ್ರೀಯತೆಯನ್ನು ಪಡೆದಿವೆ. " ಇಂಗ್ಲೀಷಿನ proverb ಎಂಬ ಶಬ್ದಕ್ಕೆ ಸಂವಾದಿಯಾಗಿ 'ಗಾದೆ' ಎಂಬ ಶಬ್ದವನ್ನು ಬಳಸುತ್ತಿದ್ದೆವೆ. ಜನಪದ ಗಾದೆಗಳು ಮೂಲತ: ಜನಪದ ಕಾವ್ಯಂಗಗಳೇ. ಗಾದೆ ಜನಪದ ವೇದ ಎನ್ನುತ್ತಾರೆ. ವೇದಕ್ಕಿಂತಲೂ ಗಾದೆ ಜನಸಾಮಾನ್ಯರಲ್ಲಿ ನಂಬಿಕೆ ರೂಪದಲ್ಲಿ ಬಂದಿವೆ. ಅವೂ ಕೂಡ ಪ್ರಾಸ ಲಯ ಬದ್ಧ ರಚನೆಗಳಾಗಿವೆ. ಗಾದೆಯನ್ನು ಜನಪದರ 'ಹಿತನುಡಿ' ಎನ್ನಬಹುದು. ಗಾದೆಗಳಲ್ಲಿ ಜನರ ಮನಸ್ಸಿನ ಮೌಲ್ಯಗಳ ಹಲವು ಬಣ್ಣಗಳನ್ನು ಕಾಣಬಹುದು. ಸಂಸ್ಕೃತದ 'ಗಾಥಾ' ಶಬ್ದದ ತದ್ಭವವೇ 'ಗಾದೆ' ಎನ್ನಲಾಗುತ್ತದೆ. 'ನಾಣ್ನುಡಿ' ಎಂಬ ಅಚ್ಚಕನ್ನಡ ಶಬ್ದ 'ಗಾದೆ' ಯ ಅರ್ಥವನ್ನು ಧ್ವನಿಸುತ್ತದೆ."[1] ಜಗತಿನಾದ್ಯಂತ ಎಲ್ಲ ಭಾಷೆಗಳಲ್ಲಿ ಕಂಡು ಬರುವ ಗಾದೆಗಳು ಜನರ ಮಾತಿಗೆ ಮೌಲ್ಯವನ್ನು ತಂದು ಕೋಡುತ್ತವೆ.

### ಗಾದೆಯ ಲಕ್ಷಣಗಳು

ಗಾದೆಯ ಕುರಿತಂತೆ ಅದರ ಲಕ್ಷಣಗಳನ್ನು ಹೇಳಬೇಕೆಂದರೆ ಮೂರ್ತಿ ಚಿಕ್ಕದಾದರೂ ಕೀರ್ತಿದೊಡ್ಡದು' ಎಂಬಂತೆ ಒಂದೇರಡು ಸಾಲುಗಳುಳ್ಳ ಗಾದೆಗಳು ಜನಮಾನಸದಲ್ಲಿ ತೀವ್ರ ಪ್ರಭಾವ ಬೀರಿದೆ. ಗಾದೆಯ ಲಕ್ಷಣ ಒಂದೇ ಮಾತಿನಲ್ಲಿ ಹೇಳುವುದು ಕಷ್ಟಸಾಧ್ಯ ಎಕೆಂದರೆ ಇದರ ವಸ್ತು ವ್ಯಾಪ್ತಿ ಅನಂತವಾದದ್ದು ಹಾಗೂ ವಿಶಾಲವಾದದ್ದು. ಜನಸಾಮಾನ್ಯರ ನಡುವೆ ಅನುಭವದ ತ್ರೀವ್ರತೆಯ ಫಲವಾಗಿ ಹುಟ್ಟಿದ ಗಾದೆಗಳು ಪರಂಪರಗತವಾಗಿ ಮಾನವನ ಭಾಷೆಯೊಂದಿಗೆ ಸೇರಿಕೊಂಡು ಅವಿರತವಾಗಿ ವ್ಯಾಪಿಸಿಕೊಂಡಿವೆ. ಇವು ಹುಟ್ಟುವಾಗ ಯಾವನೊಬ್ಬನ ಮಾತಿನ ಚಾತುರ್ಯದಿಂದ ಹೊರಬಂದರೂ ಅನಂತರ ಸಮಾಜದ ಸ್ವತ್ತಾಗಿ ಚಾಲ್ತಿಯಲ್ಲಿರುತ್ತವೆ.

ಸಾಮಾನ್ಯವಾಗಿ ಜಾನಪದ ಸ್ವತ್ತಾಗಿ ಚಾಲ್ತಿಯಲ್ಲಿರುತ್ತವೆ. ನಾಲ್ಕು ಲಕ್ಷಣವನ್ನು ಗುರುತಿಸಿದ್ದಾರೆ ಅವುಗಳೆಂದರೆ.

1) ಸಂಕ್ಷೀಪ್ತತೆ ಅಥವಾ ಸಂಕೀರ್ಣನೆ
2) ವಿವೇಚನೆ.
3) ತೀಕ್ಷ್ಣತೆ
4) ಜನಪ್ರೀಯತೆ

ಇವುಗಳನ್ನು ಮುಂದಿನಂತೆ ವಿವರವಾಗಿ ನೋಡಬಹುದು.

## 1) ಸಂಕ್ಷಿಪತೆ ಅಥವಾ ಸಂಕೀರ್ಣತೆ

ಗಾದೆಯ ಮುಖ್ಯ ಲಕ್ಷಣವೆಂದರೆ ಇವು ಸಂಕ್ಷಿಪ್ತವಾಗಿ ಇರುತ್ತವೆ. ಹಸಿ ಗೊಡೆಗೆ ಹೋಡೆದಂತೆ ಚಿಕ್ಕವಾಗಿ ಚೊಕ್ಕವಾಗಿ ಇರುತ್ತವೆ. ಪ್ರಾಸಮಯವಾಗಿ ಇರುವುದರಿಂದ ಹೇಳಲು ಕೇಳಲು ರಮ್ಯವಾಗಿರುತ್ತವೆ. ಸಾವಿರ ಮಾತನಾಡುವದಕ್ಕಿಂತ ತೂಕಬದ್ಧವಾಗಿ ಒಂದೇ ಒಂದು ಮಾತನಾಡಿದರೂ ಸಾಕು ಅದು ಪ್ರಭಾವ ಬೀರುತ್ತದೆ. ಆ ಒಂದೇ ಒಂದು ಮಾತು ಎಂದರೆ ಅದು ಗಾದೆ ಎಂದೇ ಹೇಳಬಹುದು. ಕಿರಿದರೊಳ್ ಪರಿದರ್ಥ ಹೊಂದಿರುವುದೇ ಗಾದೆ. ಇದನ್ನು ಕೇಳಿದ ತಕ್ಷಣ ಕವಿತೆಯೊಂದು ಕೇಳಿದಂತೆ ಭಾಸವಾಗುತ್ತದೆ.

## 2) ವಿವೇಚನೆ

ಗಾದೆಯ ಇನ್ನೊಂದು ಮುಖ್ಯ ಲಕ್ಷಣವೆಂದರೆ ಇವು ವಿವೇಚನೆಯಿಂದ ಕೂಡಿರುತ್ತವೆ. ಅದಕ್ಕಾಗಿಯೇ ಇವು ಭಾಷೆಯಲ್ಲಿ ಬಹು ಪ್ರಭಾವಕಾರಿ. ಹಲವಾರು ಜನರ ವಿವೇಚನೆ ಜಾಣ್ಮೆ ಇದರಲ್ಲಿರುತ್ತದೆ. ಗಾದೆಗಳಲ್ಲಿ ಎಲ್ಲ ಕ್ಷೇತ್ರದ ಅನುಭವ ದೊರೆಯುತ್ತದೆ. ಅದಕ್ಕಾಗಿ ಗಾದೆಗಳು ವೇದಕ್ಕೆ ಸಮ ಎಂದು ಹೇಳಲಾಗುತ್ತದೆ. ಜನರ ಜೀವನದ ಅನುಭವವು ಬಹಳ ಜಾಣ್ಮೆಯಿಂದ ಗಾದೆಗಳಲ್ಲಿ ಅಡಕವಾಗಿರುತ್ತದೆ. ಗಾದೆಗಳು ಮಾತುಗಾರನ ವಿವೇಚನೆಗೆ ಸಾಕ್ಷೀಯಾಗಿ ನಿಲ್ಲುತ್ತವೆ ಗಾದೆ ಜೀವನಕ್ಕೆ ಬಹಳ ಹತ್ತಿರವಾಗಿ ವಾಸ್ತವದ ನೆಲೆಯಲ್ಲಿ ನಿಂತಿರುತ್ತವೆ. ಅದಕ್ಕಾಗಿ ಜನರ ವಿವೇಚನೆಯ ಸಾಕಾರ ರೂಪವೇ ಗಾದೆಗಳು ಎನ್ನಬಹುದು.

## 3) ತೀಕ್ಷ್ಣತೆ

ಗಾದೆಯ ಇನ್ನೊಂದು ಲಕ್ಷಣ ತೀಕ್ಷ್ಣತೆ. ಗಾದೆ ಮಾತುಗಳು ಬಹು ತೀಕ್ಷ್ಣವಾಗಿ ಇರುತ್ತವೆ. ಇವು ನೇರವಾಗಿ ಕೇಳುಗನ ಮನಸ್ಸನ್ನು ನಾಟುತ್ತವೆ. ಜೊತೆಗೆ ಆಗಾದೆ ಮಾತು ಆತ ಜೀವನ ಪರಿಯಂತ ನೆನಪಿನಲ್ಲಿಟ್ಟುಕೊಟ್ಟುವಂತೆ ಪ್ರಭಾವ ಬೀರುತ್ತವೆ. ಗಾದೆ ಬಹು ಮೊನಚು ಎಂದು ಹೇಳಬಹುದು ಕೇಳುಗನ ಎದೆಗೆ ನೇರವಾಗಿ ನಾಟುತ್ತದೆ. ಆತನ ಅಂತರಂಗ ಪ್ರವೇಶಿಸಿ ವಿಷಯ ಮನದಟ್ಟು ಮಾಡಿಸುವ ತೀಕ್ಷಣತೆ ಹೊಂದಿದೆ. ಉದಾಹರಣೆಗೆ ಯಾಗಾದರು ಮಹತ್ವದ ಕೆಲಸದವೇಳೆ ಮಧ್ಯ ಪ್ರವೇಶಿಸಿದರೆ 'ಶಿವ ಪೂಜೆಲಿ ಕರಡಿ ಬಿಟ್ಟಂತೆ' ಎಂದು ಹೇಳಲಾಗುತ್ತದೆ. ಒಟ್ಟಿನಲ್ಲಿ ಗಾದೆ ಬಹು ತೀಕ್ಷ್ಣತೆಯ ಲಕ್ಷಣ ಹೊಂದಿದೆ.

## 4) ಜನಪ್ರೀಯತೆ

ಗಾದೆಗಳು ಪ್ರಾಚೀನ ಕಾಲದಿಂದಲೂ ಜನಪ್ರೀಯತೆ ಪಡೆದುಕೊಂಡಿವೆ. ರಾಮಾಯಣ, ಮಹಾಭಾರತ ವೇದ ಉಪನಿಷತ್ತು ಕುರಾನ್, ಬೈಬಲ್ ಹೀಗೆ ಪ್ರಾಚೀನ ಧರ್ಮ ಗ್ರಂಥಗಳಲ್ಲಿಯಾ ನಾವು ಗಾದೆಗಳನ್ನು ಕಾಣಬಹುದಾಗಿದೆ. ಅಷ್ಟೇ ಏಕೆ ಗಾದೆಗಳಿಲ್ಲದ ಪ್ರದೇಶಗಳಿಲ್ಲ ಗಾದೆಗಳಿಲ್ಲದ ಭಾಷೆಯೇ ಇಲ್ಲ ಎಂದು ಹೇಳಬಹುದು. ಮಾನವನ ರೀತಿ-ನೀತಿ, ಸಂಪ್ರದಾಯ, ಆಚಾರ-ವಿಚಾರ, ನಂಬಿಕೆ ಹೀಗೆ ಎಲ್ಲವುಗಳನ್ನು ನಾವು ಗಾದೆಗಳಲ್ಲಿ ಕಾಣಬಹುದಾಗಿದೆ. ಸಮಾಜದಲ್ಲಿ ಗಾದೆಗಳು ಪ್ರಾಚೀನ ಕಾಲದಿಂದಲೂ ಜನಪ್ರೀಯತೆ

ಪಡೆದುಕೊಂಡಿವೆ. ಇದರಲ್ಲಿ ಸಂಸ್ಕೃತಿ ಇತಿಹಾಸ, ಪೌರಾಣಿಕ ಅಂಶ, ಐತಿಹ್ಯ ಮುಂತಾದವುಗಳು ಹುದುಗಿಕೊಂಡಿವೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಗಾದೆಗಳಿಗೆ ತನ್ನದೆ ಆದ ಸ್ಥಾನವಿದೆ ಪ್ರಾಚೀನ ಕವಿಗಳಿಂದ ಹಿಡಿದು ಆಧುನಿಕ ಕವಿಗಳ ವರೆಗೆ ಎಲ್ಲರೂ ಗಾದೆಗಳನ್ನು ಬಳಸಿದ್ದಾರೆ. ನಯಸೇನ, ಬಸವಾದಿ ಶರಣರು, ಹರಿದಾಸರು, ತತ್ವಪದಕಾರರು, ಸರ್ವಜ್ಞ ಕವಿ ಆದಿಯಾಗಿ ತಮ್ಮ ಕೃಗಳಲ್ಲಿ ಗಾದೆಗಳನ್ನು ಯಥೆಚ್ಛವಾಗಿ ಬಳಸಿದ್ದಾರೆ. ಪ್ರಾಚೀನ ಕಾಲದಿಂದಲೂ ಬಳುವಳಿಯಾಗಿ ಬಂದ ಗಾದೆಗಳು ತನ್ನ ಜನಪ್ರೀಯತೆಯನ್ನು ಕಾಯ್ದುಕೊಂಡು ಬಂದಿದೆ. ಜನಪದರುಗಳಿಂದ ಹಿಡಿದು ಶಿಷ್ಟ ಕವಿಗಳ ವರೆಗೆ ಅನಕ್ಷರಸ್ಥರಿಂದ ಹಿಡಿದು ಅಕ್ಷರಸ್ಥರವರೆಗೆ ಎಲ್ಲರ ಮನಸ್ಸನ್ನು ಗಾದೆಗಳು ಗೆದ್ದಿವೆ.

ಗಾದೆಗಳ ಕುರಿತಂತೆ ಹಲವು ವಿದ್ವಾಂಸರು ತನ್ನದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಗಾದೆ ಎನ್ನಿಸಿಕೊಳ್ಳಲು ನಾಲ್ಕು ಗುಣಗಳು ಅಗತ್ಯ. ಸಂಕ್ಷಿಪ್ತತೆ, ಸಾರ ಗರ್ಭಿತತೆ ಸಪ್ರಾಣತೆ (ಚುರುಕು) ಹಾಗೂ ಲೋಕಪ್ರೀಯತೆ' ಎಂದು ಜೇಮ್ಸ್ ಎ. ಕೆಲ್ಲೋ ಅಭಿಪ್ರಾಯ ಪಟ್ಟರೆ" ಹಲವರ ಜ್ಞಾನ ಮತ್ತು ಒಬ್ಬನ ವಿವೇಕವೇ ಗಾದೆ" ಎಂಬುದು ಲಾರ್ಡ ರಸ್ಸೆಲ್‌ನ ಅಭಿಪ್ರಾಯ "ಸಂಕ್ಷಿಪ್ತತೆ ಗಾದೆಯ ಅನಿವಾರ್ಯ ಗುಣ. ಅಲ್ಲಿ ಯಾವುದೇ ಅನಗತ್ಯ ಆಧಿಕೃತಕ್ಕೆ ಅವಕಾಶವಿಲ್ಲ. ಅವ್ಯಯ ಮತ್ತು ಪ್ರತ್ಯಯಗಳಲ್ಲಿ ಶ್ರೀಮಂತವಾಗಿರುವ ಭಾಷೆಯ ಹಲವು ಗಾದೆಯನ್ನು ಟಂಕಿಸುವಾಗಲೇ ಸಾಧ್ಯವಾದಷ್ಟು ಮಟ್ಟಿಗೆ ಇವುಗಳನ್ನು (ಅವ್ಯಯ ಪ್ರತ್ಯಯಾದಿಗಳನ್ನು)ಕ್ಕೆ ಬಿಡುವುದರತ್ತ ಇರುತ್ತದೆ ಎಂಬುದು ಗಮನಾರ್ಹ" ಎಂದು ಲಯನೆಲ್ ಗಿಲ್ಸ್ ಅಭಿಪ್ರಾಯ ಪಟ್ಟರೆ "ಗಾದೆಗಳು ನಿಜವಾಗಿ ಜೀವನದ ಪ್ರಾಯೋಗಿಕ ಸಂಬಂಧಗಳಲ್ಲಿ ನಮ್ಮ ಸೂಕ್ಷ್ಮ ಗ್ರಹಣ ಶಕ್ತಿಯ ತೀರ್ಮಾನಗಳನ್ನು ಪರಿಮಾಣವುಳ್ಳ ಗುಳಿಗೆಗಳು" ಎಂದು ಗುಗುಷವಿಲಿ ಅಭಿಪ್ರಾಯ ಪಡುತ್ತಾನೆ. "ಗದ್ಯ ಪದ್ಯಗಳೆರಡರಲ್ಲೂ ಸಂಕ್ಷಿಪ್ತ ಕಲಾತ್ಮಕ ರೂಪ ಅಥವಾ ಜನಾಂಗದ ಸಮಷ್ಠಿ ಅನುಭವದ ಆಧಾರದ ಮೇಲೆ ರೂಪುಗೊಂಡ ತೀರ್ಮಾನಗಳು ಎನ್ನಬಹುದು. ಎಂಬುದು ಎ.ಎಮ್. ಎಸ್ಟಿನೋಸನ ಅಭಿಪ್ರಾಯ ಒಂದು ಗುಂಪಿನ ಜಾಣ್ಮೆ, ಜೀವಾನುಭವ ಅಭಿವ್ಯಕ್ತಿಯ ನವುರು ಜನಪದ ಸಾಹಿತ್ಯದ ಮಿಕ್ಕೆಲ್ಲೂ, ಗಾದೆಗಳಲ್ಲಿಯ ಹಾಗೆ ಸ್ಪಷ್ಟವಾಗಿ ಗೋಚರಿಸುವುದು ಎಂದು ಡಾ. ಹಾಮಾ ನಾಯಕರು ಅಭಿಪ್ರಾಯ ಪಟ್ಟರೆ. "ಜನಾಂಗದಲ್ಲಿ ಪ್ರಚಾರದಲ್ಲಿರುವ ತಿಳಿವು ತಕ್ಕ ಮನಸ್ಸಿನಲ್ಲಿ ಬಿದ್ದಾಗ ನಾಲ್ಕು ಮಾತಿನಲ್ಲಿ ಘನಿಸಿ ಮುತ್ತಿನಂತಾಗುತ್ತದೆ. ಹಲವರ ಭಾವ ಒಬ್ಬನ ಮಾತಿನಲ್ಲಿ ಕಂಡು ಆ ಮಾತು ಹಲವರ ಮಾತಾಗುತ್ತದೆ. ಗಾದೆಗಳನ್ನು ನೋಡಿದರೆ ಜನಾಂಗದ ಮನಸ್ಸು ಎಂಥದೆಂದು ಊಹಿಸಲು ಸಾಧ್ಯವಾಗುವದಕ್ಕೆ ಇದೇ ಕಾರಣ" ಎಂದು ಮಾಸ್ತಿಯವರು ಅಭಿಪ್ರಾಯ ಪಡುತ್ತಾರೆ"೨ ಹೀಗೆ ವಿದ್ವಾಂಸರು ಗಾದೆಯ ಕುರಿತಂತೆ ತಮ್ಮ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.

ಕನ್ನಡ ಭಾಷೆಯಲ್ಲಿ ಗಾದೆಗಳು ಬಹುವ್ಯಾಪಕವಾಗಿ ಹರಡಿಕೊಂಡಿವೆ. ಸಾವಿರಾರು ಗಾದೆಗಳು ಕನ್ನಡದಲ್ಲಿ ಬಳಕೆಯಾಗುತ್ತಿವೆ. ಇದೆ ಭಾಷೆ ಸಮೃದ್ಧತೆಯನ್ನು ಸಾರುತ್ತದೆ. ಗಾದೆಗಳು ಪ್ರಾಚೀನ ಕಾಲದಿಂದಲೂ ಬಳಕೆಯಾದರು ಅವುಗಳ ಸಂಗ್ರಹ ಕಾರ್ಯಮಾತ್ರ ಒಂದೆರೆಡು

ಶತಮಾನಗಳಿಂದ ಮಾತ್ರ ನಡೆಯುತ್ತಿದೆ. ೧೮೫೨ರಲ್ಲಿ ಮಂಗಳೂರಿನಿಂದ ಪ್ರಕಟವಾದ ಕನ್ನಡ ಗಾದೆಗಳು ಕನ್ನಡದ ಪ್ರಪ್ರಥಮ ಗಾದೆಗಳ ಸಂಕಲನ ಗುಣ ಸಂಖ್ಯೆಗಳೆರಡರಲ್ಲೂ ಮಹತ್ವದೆನಿಸಿದ ಈ ಗ್ರಂಥದಲ್ಲಿ ಮೂರು ಸಾವಿರದ ನಾಲ್ಕು ನೂರ ಐವತ್ತೇಳು ಗಾದೆಗಳಿವೆ. ಈ ಕೃತಿ ಗಾದೆಗಳನ್ನು ಸಂಗ್ರಹಿಸುವ ಕಡೆ ಕನ್ನಡಿಗರ ಗಮನ ಸೆಳೆಯಿತು. ಗಾದೆಗಳನ್ನು ಅಕಾರಾಡಿಯಾಗಿ ಸಂಕಲಿಸಿ ಪ್ರಕಟಿಸುವ ಕ್ರಮಕ್ಕೂ ಈ ಕೃತಿಯೇ ಮಾರ್ಗದರ್ಶಕವೆನ್ನಬಹುದು. ಅನಂತರ ೧೮೬೪ರಲ್ಲಿ ಮಂಗಳೂರಿನ ಬಾಸೆಲ್ ಮಿಶನ್ ಬುಕ್ ಎಂಡ್ ಟ್ರಾಕ್ಟ ಡಿಪಾಜಿಟರಿಯವರಿಂದ ಪ್ರಕಟವಾದ ಸಹಸ್ರ ಗಾಥಾಮೃತ ಕಲಶವು ಒಂದು ಸಾವಿರ ಸುಂದರ ಗಾದೆಗಳ ಸಂಕಲನ ಇದೇ ಪ್ರಕಾಶರ ಆಶ್ರಯದಲ್ಲಿ ಶದ್ರಾಚ್ ಐಮನ್ ಮತ್ತು ಉಭಯದ ನರಸಿಂಹರಾವ್ ಅವರು ಸಂಪಾದಿಸಿದ ಪಾಪ್ರೊಲರ್ ಕೆನರೀಸ್ ಪ್ರಾವಬ್ರ್ಸ ಅಂಡ್ ದೆರ್ ಇಂಗ್ಲೀಷ್ ಈಕ್ವಿವತಿಂಟ್ಸ್ ಎಂಬ ಕೃತಿ ೧೮೯೪ ರಲ್ಲಿ ಪ್ರಕಟವಾಯಿತು. ಈ ಸಮಯದಲ್ಲೇ ಹಣಮಂತ ಗೋವಿಂದ ಜೋಗಿ ಅವರ ಸಾಮತಿ ಸಂಗ್ರಹ ಕನ್ನಡ ಗಾದೆಗಳೂ ಅವುಗಳ ಸಮಾನಾರ್ಥಕ ಇಂಗ್ಲೀಷ್ ನುಡಿಗಳು ಎಂಬ ಕೃತಿ ಬೆಳಗಾಂ ಸಮಾಚಾರ್ ಪ್ರೆಸ್ಸ್‌ನಿಂದ ಪ್ರಕಟವಾಯಿತು.

ಇದು ೧೯೦೬ ರಲ್ಲಿ ಮರುಮುದ್ರಣವನ್ನು ಕಂಡಿತು. ಇದೇ ಅವಧಿಯಲ್ಲಿ ಕನ್ನಡ ನಿಘಂಟೊಂದನ್ನು ಪ್ರಕಟಿಸಿದ ಕಿಟ್ಟಲ್ ಅವರು ಗಾದೆಗಳ ಸಂಗ್ರಹಕಾರರಾಗಿಯೂ ದುಡಿದಿರುವುದು ಮಹತ್ವದ ವಿಷಯವಾಗಿದೆ. ಅನಂತರ ಬಾಸೆಲ್ ಬುಕ್ ಅಂಡ್ ಟ್ರಾಕ್ಟ ಡಿಪಾಜಿಟರಿಯ ಪ್ರಕಾಶನದಿಂದ ಎಹ್ಯಾಂಡ್ ಬುಕ್ ಆಫ್ ಕೆನರೀಸ್ ಪ್ರಾವಟ್ರ್ಸ ವಿತ್ ಇಂಗ್ಲೀಷ ಈಕ್ವಲೆಂಟ್ಸ ಎಂಬ ಹೆಸರಿನಿಂದ ಯು.ಬಿ.ನರಸಿಂಗರಾವ ಅವರು ಸಂಗ್ರಹಿಸಿ ಪ್ರಕಟಿಸಿದರು. ಈ ಸಂಧರ್ಭದಲ್ಲಿ ಕನ್ನಡ ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಿದಂತೆಯೇ ಬಾಸೆಲ್ ಮಿಶನರಿಯವರೇ ಕೊಡಗು ಭಾಷೆಯ ಗಾದೆಗಳನ್ನು ಮೊಟ್ಟಮೊದಲಿಗೆ ಸಂಗ್ರಹಿಸಿ ಕನ್ನಮಡ ಲಿಪಿಯಲ್ಲಿ 'ಕೊಡುವ ಪಡಿಮ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದು (೧೮೮೬) ಗಮನಾರ್ಹ ಸಂಗತಿಯಾಗಿದೆ.

ಅನಂತರ ೧೯೪೪ ರಲ್ಲಿ ಪ್ರಕಟವಾದ ಎಚ್.ಎಸ್.ಅಟ್ಟಪ್ಪ ನವರ ಕನ್ನಡ ಗಾದೆಗಳು' ಒಂದು ಅಪೂರ್ವ ಸಂಗ್ರಹ, ಹಾಗೆಯೇ ೧೯೫೬ರಲ್ಲಿ ಪ್ರಕಟವಾದ ಜಂಗಮ ಕೋಟಿ ಕೃಷ್ಣಶಾಸ್ತ್ರೀಗಳ ಗಾದೆಗಳ ಭಂಡಾರ ಎಂಬ ಕೃತಿ ಇನ್ನೊಂದು ಮಹತ್ತ್ವದ ಸಂಗ್ರಹವಾಗಿದೆ. ಟಿ.ವಿ ವೆಂಕಟರಮಣಯ್ಯನವರ ಕನ್ನಡ ಗಾದೆಗಳ ಕೋಶ ೧೯೬೩ರಲ್ಲಿ ಪ್ರಕಟವಾಯಿತು. ೧೯೬೮ರಲ್ಲಿ ರಾಗೌ ಅವರ ನಮ್ಮ ಗಾದೆಗಳು ಸಂಗ್ರಹ ಹಲವಾರು ದೃಷ್ಟಿಗಳಿಂದ ಮಹತ್ವದ್ದಾಗಿದೆ. ೧೯೬೯ರಲ್ಲಿ ಪ್ರಕಟವಾದ ಅಚ್ಚಪ್ಪನವರ ಗ್ರಂಥಸ್ಥ ಗಾದೆಗಳು' ಆಯ್ದ ಗಾದೆಗಳ ಸಂಗ್ರಹ ಇದಾಗಿದೆ. ೧೯೭೧ರಲ್ಲಿ ಪ್ರಕಟವಾದ ಬಸಯ್ಯ ವಿರೋಪಾಕ್ಷಯ್ಯ ಮಠದ ರವರ

ಸಾವಿರ ಮಾತಿನ ಸರದಾರ ಕೃತಿ ಪ್ರಕಟವಾಗಿದೆ. ೧೯೬೪ರಲ್ಲಿ ಸುಧಾಕರ ಅವರ ನಮ್ಮ ಸುತ್ತಿನ ಗಾದೆಗಳು ಕೃತಿಯು ಮಹತ್ವದ್ದಾಗಿದೆ. (ಅಂತರಜಾಲದಿಂದ ಮಾಹಿತಿ ಪಡೆಯಲಾಗಿದೆ.)

ಹೀಗೆ ಕನ್ನಡ ಸಾಹಿತ್ಯದಲ್ಲಿ ಗಾದೆಗಳ ಕುರಿತಂತೆ ಹಲವು ಮಹತ್ವದ ಕೃತಿಗಳು ಪ್ರಕಟಗೊಂಡಿವೆ. ಅಷ್ಟೇ ಅಲ್ಲ ಗಾದೆಗಳ ಕುರಿತಂತೆ ವಿದ್ವಾಂಸರು, ಸಂಶೋಧಕರು, ವಿಶ್ವವಿದ್ಯಾಲಯಗಳು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ಮೂಲಕ ಗಾದೆಗಳಲ್ಲಿನ ಹಲವು ಆಯಾಮಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಗಾದೆಗಳಲ್ಲಿ ಹುದುಗಿಸುವ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳನ್ನು ಗುರುತಿಸಬಹುದಾಗಿದೆ. ಜೊತೆಗೆ ಮಹಿಳೆಯರ ಬದುಕಿನ ಮಗ್ಗಲುಗಳನ್ನು ಹತ್ತಿರದಿಂದ ಅಧ್ಯಯನ ಮಾಡಲು ಈ ಗಾದೆಗಳು ಸಹಕಾರಿಯಾಗಿದೆ. ಈ ಹಿನ್ನೆಲೆಯಲ್ಲಿ ಗಾದೆಗಳನ್ನು ಸ್ನಾತಕೋತ್ತರ ಮಟ್ಟದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನ ವಿಷಯವಾಗಿ ಅಧ್ಯಯನ ಕೈಗೊಳ್ಳಲಾಗುತ್ತಿದೆ. ಅಷ್ಟೇ ಅಲ್ಲ ಸಂಗ್ರಹಣೆ ಸಂಪಾದನೆ. ವಿಶ್ಲೇಷಣೆ ಹಾಗೂ ಪ್ರಕಟಣೆಯು ನಡೆಯುತ್ತಿದೆ. ಇನ್ನೂ ಸಮಗ್ರವಾಗಿ ಅಧ್ಯಯನ ಮಾಡುವುದು ಮುಖ್ಯವಾಗಿದೆ.

ಯಾವುದೇ ಭಾಷೆ , ಸಾಹಿತ್ಯಕ್ಕೆ ಅದರದೇ ಆದ ಒಂದು ವಿಶೇಷತೆ ಇದೆ ಎಂಬುದು ಎಲ್ಲರೂ ಒಪ್ಪತಕ್ಕ ಮಾತು. ಮುಖ್ಯವಾಗಿ ನಮ್ಮ ಭಾಷೆಯ ಸತ್ವ ಗಾದೆಗಳಲ್ಲಿ ಅಡಗಿದೆ. ಇವು ಜನರ ಮಧ್ಯ ಹುಟ್ಟಿ ಜನರ ಮಧ್ಯಯೇ ಬದುಕಿ ಬಾಳುವಂತಹು ಸಾರ್ವತ್ರಿಕವಾಗಿ ಒಪ್ಪುವ ತಾತ್ವಿಕ ಅರ್ಥದ ಮಾತುಗಳೇ ಗಾದೆಗಳು ಎನ್ನಬಹುದು. ಸುತ್ತಿ - ಬಳಸಿ ಮಾತನಾಡದೇ ಇರುವುದನ್ನು ಚಿಕ್ಕದಾಗಿ ಚೊಕ್ಕವಾಗಿ ಗಾದೆಗಳ ಮೂಲಕ ಒಂದು ವಿಷಯವನ್ನು ಮನದಟ್ಟು ಮಾಡಬಹುದು. ಮಾತುಗಳು ಏಷ್ಟೇ ಕ್ಲಿಷ್ಟವಾಗಿದದದರೂ ಗಾದೆಗಳನ್ನು ಬಳಸಿಕೊಂಡಾಗ ಅದು ಅಷ್ಟೇ ಸರಳವಾಗಿ ಮನಸ್ಸನ್ನು ನಾಟುತ್ತದೆ. ಸಂಕೀರ್ಣ ವಿಷಯ ಇದ್ದರೂ ಅದು ಗಾದೆಯ ಮೂಲಕ ತಿಳಿಸಿದರೇ ಒಬ್ಬ ಸಾಮಾನ್ಯ ಮನುಷ್ಯನ ಮಾತಿನ ಅರ್ಥವನ್ನು ಸುಲಭವಾಗಿ ಗ್ರಹಿಸಿಕೊಳ್ಳುತ್ತಾನೆ.

ಗಾದೆ ಪ್ರಾಚೀನವಾಗಿದ್ದರೂ ಸಹ ಅದರಿಂದ ಹೊರಸೊಸುವ ಅರ್ಥ ಎಂದು ಕಳೆ ಗುಂದುವುದಿಲ್ಲ. ಜನರ ಜೀವನದಲ್ಲಿ ಇರುವ ಸಮಸ್ಯೆ ಬದುಕಿನ ಸಂಕೀರ್ಣತೆ ಈ ಗಾದೆಗಳು ತೆರೆದು ತೋರಿಸುತ್ತದೆ. ಮಾನವನ ಸ್ವಭಾವದ ಚಿತ್ರಣವನ್ನು ಯಾವುದೇ ಮುಲಾಜಿಲ್ಲದೇ ಹೇಳುತ್ತದೆ. ಗ್ರಾಮೀಣ ಬದುಕಿನ ನೈಜ ಅನುಭವ ಇಲ್ಲಿ ದೊರೆಯುತ್ತದೆ. ಜನಪದ ಸಾಹಿತ್ಯದ ಭಾಷೆಯ ಜೀವಾಳವಾಗಿ ಗಾದೆಗಳು ಕಂಡು ಬರುತ್ತದೆ.

ಯಾವುದೇ ಒಬ್ಬ ವ್ಯಕ್ತಿಯಿಂದ ಮಾತ್ರ ಹುಟ್ಟಲಾರದೇ ಸಮಷ್ಠಿ ಅನುಭವದ ಕಾವಿನಿಂದ ಹೊರಬಂದ ಚಿನ್ನವಾಗಿ ಗಾದೆಗಳು ಹುಟ್ಟಿಕೊಂಡಿದೆ.ಸಮಾಜದ ಯಾವ ಸ್ತರದಲ್ಲೂ, ಯಾವ ಸ್ಥಳದಲ್ಲೂ, ಯಾವ ಸಂದರ್ಭದಲ್ಲೂ ಹುಟ್ಟಿಕೊಂಡಿರಬಹುದು. ಅವುಗಳ ಬಳಕೆ ಮಾತ್ರ ಯಾವ ನಿರ್ಭಂದವಿಲ್ಲದೇ ಸಂದರ್ಭಕ್ಕನುಗುಣವಾಗಿ ಬಳಕೆಯಾಗುತ್ತಲೇ ಇರುತ್ತವೆ.

ಜನಪದರು ದಿನ ನಿತ್ಯ ಬಳಸುವ ಭಾಷೆಯಲ್ಲಿ ಯಥೇಚ್ಛವಾಗಿ ಕಂಡು ಬರುತ್ತವೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಗಾದೆ, ಗಾದೆಯ ಮಹತ್ವವನ್ನು ತಿಳಿಸುತ್ತದೆ. ತಾವು ಆಡುವ ಮತುಗಳು ಪ್ರಭಾವಿಕಾರಿಯಾಗಿ ಇರಬೇಕು ಎಂದು ಅಂದುಕೊಂಡರೆ ಗಾದೆಗಳನ್ನು ಬಳಸಬೇಕು. ಗಾದೆಗಳಲ್ಲಿ ವಿವೇಕತನವಿದೆ, ಜಾಣ್ಮೆ ಇದೆ.

ಸಂದರ್ಭಕ್ಕೆ ತಕ್ಕಂತೆ ಇವುಗಳನ್ನು ಬಳಸಿದರೆ ಮಾತಿನ ಮೆರುಗು ಹೆಚ್ಚಾಗುತ್ತದೆ. ಆಯಾ ಭಾಷೆಯಲ್ಲಿ ಕಂಡು ಬರುವ ಗಾದೆಗಳು ಅಲ್ಲಿನ ಸಂಸ್ಕ ತಿಯನ್ನು ದರ್ಶಿಸುತ್ತವೆ. ಗಾದೆ ಎಲ್ಲ ಸಂಸ್ಕೃತಿಗಳಲ್ಲೂ ಕಂಡು ಬರುವ ಒಂದು ಪ್ರಮುಖ ಜಾನಪದ ಪ್ರಕಾರ. ಕಥೆ , ಗೀತೆ ಲಾವಣಿಗಳಿಗಿಂತ ಗಾದೆಗಳತ್ತ ವಿದ್ವಾಂಸರ ದೃಷ್ಟಿ ಮೊದಲು ಹರಿಯಿತು. ಅಡಕವಾದ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಜೀವನದ ಆಳವಾದ ಅನುಭವವನ್ನು ತುಂಬಿಕೊಂಡು ಅರ್ಥವತ್ತಾಗಿ ಮೂಡಿಬರುವ ಗಾದೆಗಳು ಒಂದು ರೀತಿಯ ನೀತಿ ಸಂಹಿತೆ ಇದ್ದಂತೆ. ಬದುಕಿನ ಅಂಕುಡೊಂಕುಗಳನ್ನು ತಿದ್ದುವಲ್ಲಿ, ಮಾತಿನ ಪ್ರಖರತೆಯನ್ನು ಹೆಚ್ಚಿಸುವಲ್ಲಿ ಗಾದೆಗಳ ಪಾತ್ರ ಅಪೂರ್ವವಾದುದು "೩ .ಮಾನವನ ಜೀವನದವನ್ನು ತಿದ್ದಿ ಆತನನ್ನು ಸರಿ ಮಾರ್ಗದ ಕಡೆಗೆ ಕರೆದುಕೊಂಡು ಹೋಗಲು ಗಾದೆಗಳು ಸಹಕರಿಸುತ್ತವೆ. ಪ್ರಾಚೀನ ಕಾಲದಿಂದಲೂ ತಲೆ ಮಾರಿನಿಂದ ತಲೆಮಾರಿಗೆ ಸಾಗಿಬಂದ ಈ ಗಾದೆಗಳು ಮಾನವ ಬದುಕಿನಲ್ಲಿ ಹಾಸುಹೊಕ್ಕಿವೆ.

ವೇದ, ಉಪನಿಷತ್ತು. ಪುರಾಣಗಳಲ್ಲಿ, ಕವಿಕೃತಿಗಳಲ್ಲಿಯೂ ಗಾದೆಗಳನ್ನು ಕಾಣಬಹುದಾಗಿದೆ. ಯಾವುದೇ ಮಾತು ಮುಲಾಜಿಲ್ಲದೆ ನಿರ್ಭೀಡೆಯಾಗಿ ಗಾದೆಗಳು ಹೇಳುತ್ತವೆ. ಹತ್ತು ಮಾತಾಡುವುದಕ್ಕಿಂತ ಮುತ್ತಿನಂಥ ಒಂದೆ ಮಾತನಾಡಬೇಕಾದರೆ ಗಾದೆಗಳನ್ನು ಬಳಸಿಕೊಳ್ಳಬೇಕು. ನಮ್ಮ ಸಂಸ್ಕ ತಿಯ ಎಳೆಗಳನ್ನು ಗಾದೆಯಿಂದ ಗುರುತಿಸಬಹುದಾಗಿದೆ. ಇವು ಮನವ ಸಂಭಂಧಗಳನ್ನು ಪ್ರತಿನಿಧಿಸುವ ಸೂಕ್ತಿಗಳಾಗಿವೆ.

ಇವು ಮಾನವ ಬದುಕಿನ ಸಾಮಾಜಿಕ-ಭಾಷಿಕ- ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಮಗ್ಗಲುಗಳನ್ನು ಅನಾವರಣಗೊಳಿಸುತ್ತವೆ. ಜನಪದರ ಜೀವನದ ಯಾವುದೇ ವಿಷಯವಿದ್ದರೂ ಅದನ್ನು ನೇರವಾಗಿ ಹೇಳುತ್ತವೆ. ಮುಚ್ಚುಮರೆ ಇಲ್ಲದೇ ತನ್ನ ತಾತ್ವಿಕ ವಿಚಾರಗಳನ್ನು ಸಂಕ್ಷೀಪ್ತದಲ್ಲಿ ಹೇಳುತ್ತವೆ. ಯಾವುದೇ ಜಾತಿ, ಜನಾಂಗ, ಲಿಂಗ ತಾರತಮ್ಯವಿಲ್ಲದೇ ಸ್ವತಂತ್ರವಾಗಿ ವಿಹರಿಸುವ ಇವು ಜನಪದ ಬದುಕಿನ ವಾಸ್ತವವೇ ಆಗಿವೆ. ಹೆಣ್ಣಿನ ಚಿತ್ರಣ ಕೊಡುವಲ್ಲಿ ಇವು ಸಹಕಾರಿಯಾಗಿವೆ. ಕೌಟುಂಬಿಕ ಸಂಬಂಧ, ಸಾಮಾಜಿಕ ಬೆಸುಗೆಯಲ್ಲಿ ಇವು ಬಳಕೆಯಾಗಿವೆ. ಹೆಣ್ಣಿನ ಕುರಿತಾದ ಪುರುಷ ಗ್ರಹಿಕೆಗಳ ಜೊತೆಗೆ ಪಿತೃಪ್ರಧಾನದ ಹೆರಿಗೆಯ ಒತ್ತಡವನ್ನು ಇಲ್ಲಿ ಕಾಣಬಹುದಾಗಿದೆ.

ಕೆಲವು ಸಲ ಸಂದರ್ಭಕ್ಕೆ ತಕ್ಕಂತೆ ವಿಷಯ ಪ್ರಸ್ತಾಪಗೊಂಡರೆ, ಅದೇ ವಿಷಯ ವೈರುಧ್ಯದ ನೆಲೆಯಲ್ಲಿಯೂ ಮೂಡಿ ಬಂದಿರುತ್ತದೆ.ಉದಾಹರಣೆಗೆ' ಗೊಡ್ಡಿಗೇನು ಗೊತ್ತು ಹಡದಾಕಿನ ಬ್ಯಾನಿ 'ಎಂಬುದು ಒಂದು ಪ್ರಚಲಿತ ಗಾದೆ ಇದು ಬಂಜೆಯನ್ನು ಬಹಿರಂಗವಾಗಿ ಟೀಕಿಸುವ ಗಾದೆ, ಅರಿಯದೇ ಇರುವ ಮನಸ್ಸನ್ನು ಬಂಜೆಗೆ ಹೋಲಿಸಲಾಗಿದೆ. ಅಂದರೆ ಬಂಜೆಯನ್ನು ತುಚ್ಛವಾಗಿ

ಕಾಣಲಾಗಿದೆ. ಆದರೆ ವೈರುಧ್ಯವೆಂಬಂತೆ, ಇನ್ನೊಂದು ಗಾದೆ ಹೀಗಿದೆ ' ಹೆಣ್ಣು ಹೆತ್ತರು ತಾಯಿ ಹೆರದಿದ್ದರೂ ತಾಯಿ ' ಇಲ್ಲಿ ಹೆಣ್ಣು ಮೂಲತ: ಮಾತೃ ಸ್ವರೂಪಿ ಎಂಬ ಕಲ್ಪನೆಯಲ್ಲಿ ಮೂಡಿಬಂದಿದೆ. ಈ ಗಾದೆ ಕುರಿತ ವೈಶಾಲ್ಯತೆ ಎತ್ತಿ ಹಿಡಿಯುತ್ತದೆ.

ಗಂಡು-ಹೆಣ್ಣು, ತಂದೆ-ತಾಯಿ, ಅಣ್ಣ-ತಮ್ಮ, ತಾಯಿ -ಮಗಳು,. ತಂದೆ -ಮಗ, ಅತೆ - ಸೊಸೆ, ಅತ್ತಿಗೆ-ನಾದಿನಿ ಹೀಗೆ ಹಲವು ತೆರನಾದ ಸಂಬಂಧಗಳನ್ನು ಸಾಕ್ಷೀಕರಿಸುತ್ತವೆ. ಸಮಾಜಿಕ ನೆಲೆಯಲ್ಲಿ ಮಹತ್ವ ಪಡೆದ ಗಾದೆಗಳು ಕೌಟುಂಬಿಕ ನೆಲೆಯಲ್ಲಿಯೂ ಭದ್ರವಾಗಿ ನಿಂತಿವೆ. ಮನುಷ್ಯನು ತಾನು ಆಡು ಭಾಷೆಯ ನೆಲೆಯಲ್ಲಿ ತನಗೆ ತಿಳಿದೊ ತಿಳಿಯದೆಯೊ ಗಾದೆಗಳನ್ನು ಬಳಸುತ್ತಾನೆ. ಅಲ್ಲಿ ಹೆಣ್ಣು ಗಂಡಿನ ಸಂಬಂದವನ್ನು ನಿಶ್ಚಿತವಾಗಿ ಕಾಣಬಹುದಾಗಿದೆ. ವಿವಿಧ ಬಾಂಧವ್ಯಗಳಲ್ಲಿ ಬದುಕುವ ಮನುಷ್ಯ ಆ ಬಾಂಧವ್ಯದ ಸ್ವರೂಪವನ್ನು ಗಾದೆಗಳಲ್ಲಿ ಹಿಡಿದಿಟ್ಟಿದ್ದಾನೆ. ಕುಟುಂಬದಲ್ಲಿ ಗಂಡು - ಹೆಣ್ಣು ಪರಸ್ಪರ ಜೀವನ ನಡೆಸುವ ಸಂದರ್ಭದಲ್ಲಿ ತಂದೆ - ತಾಯಿಯ ಮಹತ್ವ ಅಣ್ಣ - ತಮ್ಮರ ದಾಯಾದಿ ಕಲಹ, ತಾಯಿ - ಮಗಳ ಸಾಮರಸ್ಯ, ಅತ್ತೆ - ಸೊಸೆಯ ಜಗಳ ಅತ್ತಿಗೆ -ನಾದಿನಿಯರ ಕೊಂಕು ನುಡಿ ಹೀಗೆ ಹತ್ತು ಹಲವು ರೀತಿಯ ಸಂಬಂಧಗಳ ಸಂಕೀರ್ಣ ವ್ಯವಸ್ಥೆಯನ್ನು ಗಾದೆಗಳು ಒಂದೇ ಉಸಿರಿನಲ್ಲಿ ವ್ಯಕ್ತಪಡಿಸುತ್ತವೆ.

ಸಾಮಾನ್ಯವಾಗಿ ಗಾದೆಗಳು ಹೆಣ್ಣಿನ ಜೀವನದ ಸಂಹಿತೆಗಳಾಗಿವೆ. ಗಾದೆಗಳಂತೂ ಮಹಿಳೆಯ ಜೀವನದ ಬಗ್ಗೆ ಅಲಿಖಿತ ಕಾನೂನುಗಳಂತೆ ಕೆಲಸ ಮಾಡಿವೆ ಲಿಂಗ ವ್ಯವಸ್ಥೆಯಲ್ಲಿನ ತಾರತಮ್ಯವನ್ನು ಸ್ಪಷ್ಟವಾಗಿ ದಾಖಲಿಸಿವೆ. ಹೆಣ್ಣು ಜೀವನದ ವಿವಿಧ ಸ್ತರಗಳಲ್ಲಿ ನಡೆದುಕೊಳ್ಳಬೇಕಾದ ರೀತಿ ರಿವಾಜುಗಳನ್ನು ಗಾದೆಗಳು ತಿಳಿಸುತ್ತವೆ "[೪] ಅದಕ್ಕಾಗಿ ಗಾದೆಗಳು ಹೆಣ್ಣಿನ ಜೀವನದ ಪ್ರತಿಬಿಂಬವೂ ಆಗಿವೆ.

ಗಾದೆಗಳಲ್ಲಿ ತಾಯ್ತನದ ಕುರಿತು ವ್ಯಕ್ತವಾದ ಗ್ರಹಿಕೆಯನ್ನು ಗಾದೆಗಳ ಹಿನ್ನೆಲೆಯಲ್ಲಿ ನೋಡಬಹುದು. ಹೆಣ್ಣೊಬ್ಬಳು ತಾಯಿಯಾಗಿ ತನ್ನ ಮಗಳನ್ನು ನೋಡುವ, ಅತ್ತೆಯಾಗಿ ಸೊಸೆಯನ್ನು ನೋಡುವ ಬೇರೆ ಬೇರೆ ಗ್ರಹಿಕೆಗಳನ್ನು ನೋಡಬಹುದು."ಸೊಸೆ - ಮಗಳು ಇಬ್ಬರೂ ಅತೆಯೂ ತಾಯಿಯೂ ಆವಳಿಗೆ ಹತ್ತಿರದ ಮಹಿಳಾ ಸಂಬಂಧಿಗಳೇ ಆದರೂ ಒಬ್ಬಳು ತಂದವಳು ಇನ್ನೊಬ್ಬಳು ತಾನು ಹೆತ್ತದ್ದು ಅಂತೆಯೇ ಇಬ್ಬರನ್ನೂ ಆಕೆ ತಂತಮ್ಮ ನೆಲೆಯಲ್ಲಿಯೇ ಕಾಣುತ್ತಾಳೆ. ಇಂಥ ಭೇಧಭಾವವನ್ನು ಗಾದೆಗಳು ಎಷ್ಟು ತೀಕ್ಷ್ಣವಾಗಿ ಹಿಡಿದಿಡುತ್ತವೆ, ಖಂಡಿಸುತ್ತವೆ ಎಂಬುದಕ್ಕೆ ಈ ಕೆಳಗಿನ ಎರಡು ಗಾದೆಗಳು ಗಮನಿಸಬಹುದು. 'ತನ್ನ ಹೂಸು ಹೊನ್ನು, ಮಗಳ ಹೂಸು ಮಾಣಿಕ್ಯ, ಸೊಸೆ ಹೂಸು ಕಸಕಟ್ಟೆ; 'ಸೊಸೆಯಾದರೆ ಜೊಳೊ ಜೊಳೊ ಮಗಳಾದರೆ ಚಿಲಿ ಚಿಲಿ " [೫]. ತಾಯಿಯು ತನ್ನ ಮಗಳೊಂದಿಗೆ ತೋರುವ ಅಕ್ಕರೆ ಸೊಸೆಯೊಂದಿಗೆ ತೋರುವುದಿಲ್ಲ ಎಂಬ ವಾಸ್ತವವನ್ನು ಈ ಗಾದೆಗಳು ತೋರಿಸುತ್ತವೆ. ಗಾದೆಗಳಲ್ಲಿ ವ್ಯಕ್ತವಾದ ತಾಯ್ತನದ ಗ್ರಹಿಕೆಯನು ಮುಂದಿನಂತೆ ಗಾದೆಗಳ ಆಧಾರದಿಂದ ಗ್ರಹಿಸಬಹುದಾಗಿದೆ.

- ತಾಯಿ ಇದ್ದರೆ ತವರು ನೀರಿದ್ದರೆ ಕೆರೆ.
- ತಾಯಿ ಮಾತು ಮೀರಿದೋನು ನಾಯಿಗಿಂತ ಕಡೆ.
- ತಾಯಿಯ ಮಡಿಲು ಹೊಂಗೆಯ ನೆರಳು.
- ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ದೇವರಿಲ್ಲ.
- ನಾಯಿ ಹಂಥೊದು ಒಂದು ತಾಯಿ ಇರಬೇಕು.
- ಕತ್ತಿ ಹಂಥೊದು ಒಂದು ಅತ್ತಿ ಇರಬೇಕು.
- ತಾಯಿ ಇಲ್ಲದ ಮಕ್ಕಳಿಗೆ ಆಯಿಲ್ಲ, ದಾಯಿಲ್ಲ,
  ಆಡಿ ಬಂದುಣ್ಣೋ ಸಲಿಗಿಲ್ಲ,
- ತಾಯಿ ಮಾತಿಗೆ ತರ್ಕವುಂಟೇ
  ತಂಬಿಟ್ಟಿಗೆ ಉಪ್ಪುಮಟೇ
  ಡೊಂಬರ ಗುಡಿಗೆ ಕದವುಂಟೇ.
- ತಾಮ್ರದ ದುಡ್ಡು ತಾಯಿ ಮಗಳಿಗೆ ಕೆಡಿಸಿತು.
- ಊರು ಮಾಡಿದ ಕೊಳಗ ತಾಯಿ ಮಾಡಿದ ಹೊಟ್ಟಿ.
- ತಾಯಿ ಕಲಿಸಿದ್ದು ಊಟ ತಂದೆ ಕಲಿಸಿದ್ದು ಬುದ್ಧಿ
  ಅತ್ತೆ ಕಲಿಸಿದ್ದು ಕೆಲಸ.
- ಉತ್ತಲ್ಲದೆ ಹೊಲವಲ್ಲ, ಹೆತ್ತಲ್ಲದೆ ಹೆಣ್ಣಲ್ಲ.
- ಆರು ಹಡದಾಕಿನ ಮುಂದ ಮೂರು ಹಡದಾಕಿ ಟಿಣಕಿದಳಂತ.
- ನೀರ ಮೇಲಿನ ಎಣ್ಣೆಯ ನುಣುಪು ತಪ್ಪಲ್ಲ
  ಹೆಣ್ಣಿಗೆ ತವರು ಮೇಲಿನ ಆಸೆ ತಪ್ಪಲ್ಲ.
- ಹೆತ್ತವಳ ಮುಖ ಚಂದ ಹೆರದಿದ್ದವಳ ಮೊಲೆ ಚಂದ.
- ಗೊಡ್ಡಿಗೇನು ಗೊತ್ತು ಹಡದಾಕಿನ ಬ್ಯಾನಿ.
- ಅವ್ವನ ಮಲಿ ಕುಡ್ದುರ ಹೊಟ್ಟಿ ತುಂಬ್ತದ
  ಅಪ್ಪನ ಮಲಿ ಕುಡ್ದುರ ತುಂಬೋದಿಲ್ಲ.
- ತಾಯಿ ಹಾಂಗ ಮಗಳು
  ತಂದಿ ಹಂಗ ಮಗ
- ಗೆಡ್ಡೆಯ ಹೊಲ ಹೀನ
  ಗೊಡ್ಡ ಹೆಂಡತಿ ಹೀನ

- ಒಕ್ಕಲಿಲ್ಲದ ಊರು
  ಮಕ್ಕಳಿಲ್ಲದ ಮನಿ ವ್ಯರ್ಥ
- ಗಂಡು ಹಡೆದವನು ತೆಂಗು ಬಿತ್ತಿದವನು
- ಹೆತ್ತ ಮೇಲೆ ಹೆಣ್ಣಿಗೆ ಬುದ್ಧಿ ಬಂತು
  ಉತ್ತ ಮೇಲೆ ಎತ್ತಿಗೆ ಬುದ್ಧಿ ಬಂತು
- ಹೆತ್ತ ಹೊಟ್ಟೆಗೆ ಹತ್ತಿ ತುಂಬು
- ಹೆತ್ತ ಹೊಟ್ಟೆಗೆ ಹೇಲೂ ಸಾಲದು
- ಹೆತ್ತೋರೂ ಒಂದೆ
  ಸತ್ತೋರೂ ಒಂದೆ
- ಹೆತ್ತೋರು ಹೆಸರಿಕ್ಕಬೇಕು
- ಹೆತ್ತೋರಿಗೆ ಮಕ್ಕಳ ಭಾರವ?
  ಕುಂಬಳ ಬಳ್ಳಿಗೆ ಭಾರವ?
- ಮಣ್ಣೆ ನೋಡದ ತಾಯಿ
  ನೀನು ಮಾಗಡಿ ನೋಡೊದು ದಿಟವ?
- ಅಮ್ಮ ಪಟ್ಟಕ್ಕೆ ಬರುವಾಗ ಅಪ್ಪ ಚಟ್ಟಕ್ಕೆ
- ಆಡೋ ಹುಡುಗಿಗೊಂದು ಕಾಡೋಕೂಸು
- ಕುನ್ನಿಯಿಂದ ನಾಯಿ ನುಣ್ಣಗೆ
  ಕೂಸಿನಿಂದ ತಾಯಿ ನುಣ್ಣಗೆ
- ತವರು ಮನೆ ತುಪ್ಪ ಅನ್ನಕ್ಕಿಂತ
  ಗಂಡನ ಮನೆ ಗಂಜಿ ಲೇಸು
- ತಂದೇಲಿ ಹತ್ತು
  ತಾಯೀಲಿ ಹನ್ನೊಂದು
- ತಾಯಿ ಕಣ್ಣೋ?
  ನಾಯಿ ಕಣೋ?
- ತಾಯಿ ಶಾಪವೋ?
  ನಾಯಿ ಶಾಪವೋ?
- ತಾಯಿ ಸತ್ತರೂ ಸೋದರ ಮಾವ ಇರಬೇಕು
- ತಾಯಿ ಸತ್ತ ಮೇಲೆ ತಂದೆ ಸೋದರಮಾವ

- ತಾಯಿರಬೇಕು ಇಲ್ಲ ಬಾಯಿ ಇರಬೇಕು.
- ತಾಯಿರೋ ತನಕ ತವರು
  ಪ್ರಾಯ ಇರೋ ತನಕ ಪೊಗರು
- ತಾಯಿ ಸತ್ತ ಮೇಲೂ ಬಾಯಿ ಸವೀನ?
  ಮಗು ಸತ್ತ ಮೇಲೂ ತೊಟ್ಟಿಲು ಸುದ್ದಿನ?
- ತಾಯಿ ಸಾಲು ಮಕ್ಕಳಿಗೆ
  ಊರು ಸಾಲು ಒಕ್ಕಲಿಗೆ

ಹೀಗೆ ತವರು, ತಾಯಿ,ಬಂಜೆತನ ಕುರಿತಂತೆ ಹಲವು ಗಾದೆಗಳು ನಮ್ಮ ಜನಪದರು ಸೃಷ್ಟಿಸಿದ್ದಾರೆ.

## 1. ತಾಯಿ ಮತ್ತು ತವರಿನ ಮಹತ್ವ

ಹೆಣ್ಣಿಗೆ ತಾಯಿಯಾಗುವುದು ಅನಿವಾರ್ಯ ಇಲ್ಲದಿದ್ದರೆ ಆಕೆಗೆ ಸಮಾಜದಲ್ಲಿ ಮನ್ನಣೆ ಇಲ್ಲ. ಹೆಣ್ಣಿಗೆ ಮದುವೆಯೆಂಬುದು ಎಷ್ಟು ಮುಖ್ಯವಾಗಿತ್ತೋ ತಾಯಿಯಾಗುವುದು ಅಷ್ಟೇ ಮುಖ್ಯವಾಗಿತ್ತು. ಹೆಣ್ಣಾದವಳು ತನ್ನ ಹೊಟ್ಟೆಯಲ್ಲಿ ಒಂದು ಕಸಬಾರಿಗೆಯಾದರೂ ಹುಟ್ಟಲಿ ಆದರೆ ಬಂಜೆ ಎಂಬ ಶಬ್ದ ಹೋಗಲಿ ಎಂದು ಅಪೇಕ್ಷಿಸುತ್ತಾಳೆ. ಇನ್ನೂ ತವರನ್ನು ಬಿಟ್ಟು ಗಂಡನ ಮನೆಗೆ ಹೋದ ಹೆಣ್ಣು ಸದಾ ತನ್ನ ತಾಯಿ ತವರನ್ನು ನೆನೆಸಿಕೊಳ್ಳುತ್ತಾಳೆ. ತಾಯಿ ಮಹತ್ವದ ಕುರಿತು ಅನೇಕ ಗಾದೆಗಳು ಸೃಷ್ಟಿಯಾಗಿವೆ

ತಾಯಿರೋ ತನಕ ತವರು
ಪ್ರಾಯ ಇರೋತನಕ ಪೊಗರು

ಎಂಬ ಗಾದೆ ತಾಯಿ ಮತ್ತು ತವರಿನ ಮಹತ್ವವನ್ನು ಸಾರುತ್ತದೆ. ಜೊತೆಗೆ ತಾಯಿಯ ಕೋಪವಾಗಲಿ, ಶಾಪವಾಗಲಿ ಅದು ತುಂಬ ಪ್ರಭಾವಕಾರಿ, ಯಾರಾದರೂ ತಾಯಿಯ ಮನಸ್ಸನ್ನು ನೋಯಿಸಿದರೆ ಅವರಿಗೆ ಶಾಪ ತಟ್ಟದೆ ಇರದು ಎನ್ನುವ ನಂಬಿಕೆ ನಮ್ಮ ಜನಪದರಲ್ಲಿದೆ.

'ತಾಯಿ ಕಣೋ
ನಾಯಿ ಕಣೋ'
'ತಾಯಿ ಶಾಪವೋ?
ನಾಯಿ ಶಾಪವೋ?

ಎಂದು ಹೇಳಲಾಗುತ್ತದೆ. ಅಂದರೆ ತಾಯಿ ಹಾಗೂ ನಾಯಿಯ ಗುಣವನ್ನು ಸಮೀಕರಿಸಿ ಹೇಳಲಾಗಿದೆ. ನಾಯಿ ತನ್ನ ಕುನ್ನಿಗಳಿಗಾಗಿ ಬೀದಿ ಬೀದಿ ತಿರುಗಿ, ಬೋಗಳ, ಕಚ್ಚಾಡಿ ಕಿತ್ತಾಡಿ ಸಂರಕ್ಷಿಸುತ್ತದೆ. ಅದರ ಪರದಾಟ ನಿಜವಾಗಿಯೂ ಹರಸಾಹಸದಿಂದ ಕೂಡಿರುವಂತಹದ್ದು. ಹಾಗೆಯೇ ತಾಯಿಯು ಸಹ ತನ್ನ ಮಕ್ಕಳಿಗಾಗಿ ಇಡೀ ಜಗತ್ತನ್ನು ಬೇಕಾದರು ಎದುರುಹಾಕಿಕೊಳ್ಳುತ್ತಾಳೆ. ನಾಯಿಯದಾಗಲಿ ತಾಯಿಯದಾಗಲಿ ಕೋಪ, ಶಾಪ ತಟ್ಟದೆ ಇರದು. ಮರಿಹಾಕಲಿರುವ ನಾಯಿ ಮನೆ

ಮುಂದೆ ಬಂದರೆ ಅದಕ್ಕೆ ತುತ್ತು ರೊಟ್ಟಿ ಹಾಕಲೇ ಬೇಕು ಇಲ್ಲದಿದ್ದರೆ ಅದರ ಸಂಕಟ ನಮಗೆ ತಟ್ಟುತ್ತದೆ ಎಂಬುದು ಜನಪದ ನಂಬಿಕೆ. ಹಾಗೆಯೇ ಗರ್ಭಿಣಿ ಹೆಣ್ಣುಮಗಳಿಗೆ ಆಕೆ ಬಯಸಿದ್ದೆಲ್ಲ ಕೊಡಬೇಕು ಇಲ್ಲದಿದ್ದರೆ ಆಕೆ ಮಗುವಿನ ಕಿವಿ ಸೋರುತ್ತದೆ ಎಂಬುದು ನಂಬಿಕೆ ಇದೆ. ಇವೆಲ್ಲದರ ಹಿಂದಿನ ತಾತ್ಪರ್ಯ ಇಷ್ಟೇ ತಾಯಿ ಜೀವನ ಸದಾ ತನ್ನ ಮಕ್ಕಳ ಪಾಲನೆ ಪೋಷಣೆಗಾಗಿ ಮುಡಿಪಿಟ್ಟಿರುವುದು ಅದನ್ನೇ ನಮ್ಮ ಸಮಾಜ ಪೋಷಿಸಿಕೊಂಡು ಬಂದಿದೆ.

ಗಾದೆಗಳಲ್ಲಿ ತಾಯಿಯ ಮಹತ್ವವನ್ನು ಎಷ್ಟು ಒತ್ತಿ ಹೇಳಲಾಗಿದೆ ಎಂದರೆ ತಾಯಿ ಇಲ್ಲದ ಮಕ್ಕಳ ಜೀವನ ನರಕ ಸದೃಶ್ಯ ಎಂಬಂತೆ ಬಿಂಬಿಸಲಾಗಿದೆ. 'ತಾಯಿ ಸತ್ತ ಮೇಲೆ ತಂದೆ ಸೋದರ ಮಾವ' ಎಂದು ಗಾದೆಯೊಂದು ವಾಸ್ತವ ಸಂಗತಿ ಹೇಳುತ್ತದೆ.

ತಾಯಿ ಸತ್ತ ಮೇಲೂ ಬಾಯಿ ಸವೀನ?<br>
ಮಗು ಸತ್ತ ಮೇಲೂ ತೊಟ್ಟಿಲು ಸುದ್ದಿನ?

ಎಂದು ಗಾದೆ ಪ್ರಶ್ನಿಸುತ್ತದೆ. ಮಕ್ಕಳಿಗೆ ಸಮಯ ಸಮಯಕ್ಕೆ ಬೇಕಾದದ್ದನ್ನು ಕೊಡುವವಳು ತಾಯಿ ಆಕೆ ಇಲ್ಲದಿದ್ದರೆ ಮಕ್ಕಳಿಗೆ ಸುಖವಿಲ್ಲ ಎಂದು ಹೇಳಲಾಗುತ್ತದೆ.

'ಮರಳಿನಲ್ಲಿ ಅಕ್ಕಿ ನುರಿಬೇಕು ತೌರಲ್ಲಿ ಹೆಣ್ಣು ನುರಿಬೇಕು' ಎಂಬ ಗಾದೆ ಹೆಣ್ಣಾದವಳಿಗೆ ತವರು ಅಕ್ಕರತೆಯ ತಾಣ. ಹಾಗೆಂದು ಮಗಳನ್ನು ಕೆಲಸ ಕಾರ್ಯಗಳನ್ನು ಕಲಿಸದೆ ಹೆಚ್ಚು ಸಲಿಗೆ ಕೊಡಬಾರದು. ಆಕೆ ತವರಲ್ಲಿ ಎಲ್ಲ ಕೆಲಸಗಳನ್ನು ಕಲಿತು ನುರಿತವಳಾಗಬೇಕು ಎಂಬ ಭಾವ ಈ ಗಾದೆಯಲ್ಲದೆ ಏಕೆಂದರೆ ತವರಿನಲ್ಲಿ ಏನು ಕಲಿಯದೆ ಗಂಡನ ಮನೆಗೆ ಬಂದು ಅಲ್ಲಿ ಯಾವ ಕೆಲಸವೂ ಗೊತ್ತಿಲ್ಲದೆ, ಪಡಬಾರದ ಕಷ್ಟ ಪಡೆಯಬೇಕಾಗುತ್ತದೆ. ಅದಕ್ಕಾಗಿ ಅವರು ಹೆಣ್ಣು ಮಕ್ಕಳಿಗೆ ತರಬೇತಿ ಕೊಡುವ ತಾಣವೆಂದು ಹೇಳುತ್ತದೆ.

ಜನಪದ ಹೆಣ್ಣು ಮಗಳಿಗೆ ತವರಿನ ಬಗ್ಗೆ ಅಪಾರ ಪ್ರೀತಿ ಇದೆ. ತವರಲ್ಲಿ ತಾಯಿ ಜೀವವನ್ನು ಕಾಣುವ ಸಲುವಾಗಿ ಮಗಳು ಹಾತೊರೆಯುತ್ತಾಳೆ. ತವರನ್ನು ಬಿಟ್ಟು ಗಂಡನ ಮನೆಗೆ ಹೋದ ಹೆಣ್ಣು ಸದಾ ತನ್ನ ತವರು ಮನೆಯನ್ನು ನೆನೆಸುತ್ತಾಳೆ. ತನ್ನ ಆಸರಿಕೆ ಬೇಸರಿಕೆಗಳನ್ನೆಲ್ಲ ತನ್ನ ತವರು ಮನೆಯಲ್ಲಿ ಕಳೆಯುತ್ತಾಳೆ. ವರ್ಷಕೊಮ್ಮೆಯೇ ಅಥವಾ ವಿಶೇಷ ಸಂದರ್ಭದಲ್ಲಿ ಮಾತ್ರ ತನ್ನ ತವರಿಗೆ ಹೋಗುವ ಹೆಣ್ಣು ತವರಿಗಾಗಿ ಹಾತೊರೆಯುತ್ತಾಳೆ. ಈ ಮಾತಿಗೆ ಪೂರಕವಾಗಿ 'ತಾಯಿ ಇದ್ದರೆ ತವರು ನೀರಿದ್ದರೆ ಕೆರೆ' ಗಾದೆ ಇದೆ. ಇಲ್ಲಿ ತವರಿಗೆ ಮಹತ್ವ ಇರುವುದು ತಾಯಿಂದ ಮಾತ್ರ ಎಂದು ಗ್ರಹಿಸಲಾಗಿದೆ. ತವರಿನಲ್ಲಿ ತಾಯಿ ಇದ್ದರೆ ಮಾತ್ರ ತಮಗೆ ಒಳಗೆ ಕರೆಯುವರು ತಮ್ಮನ್ನು ತವರಿನ ಕಡೆಗೆ ಎಳೆದೊಯ್ಯುತ್ತದೆ. ಇಲ್ಲದಿದ್ದರೆ ಕೆರೆಯಲ್ಲಿ ನೀರಿಲ್ಲದಿದ್ದರೆ ಕೆರೆ ಪ್ರಯೋಜನಕ್ಕೆ ಬರುವುದಿಲ್ಲವೋ ಹಾಗೆ ತವರಲ್ಲಿ ತಾಯಿ ಇಲ್ಲದಿದ್ದರೆ ತಮಗೆ ಯಾವ ಸಂತೋಷವೂ ಸಿಗಲಾರದು ಎಂಬುದು ಈ ಗಾದೆಯ ಗ್ರಹಿಕೆಯಾಗಿದೆ.

ಹೆಣ್ಣು ಯಾವಾಗಲೂ ತವರಿನ ಮೇಲೆ ಆಶೆ ಪಡುತ್ತಾಳೆ ಎಂದು ತಿಳಿಸುತ್ತದೆ. ಹಬ್ಬ ಹರಿದಿನಗಳು ಬಂದರೆ ತನ್ನ ತವರು ಮನೆಯವರು ಯಾವಾಗ ಕರೆಯಲು ಬರುವರೋ ಎಂಬ ದಾರಿ ನಮ್ಮ ಜನಪದ ಹೆಣ್ಣು ನೋಡುತ್ತಿರುತ್ತಾಳೆ. ತನರಿನ ಸೀರೆ, ಕುಪ್ಪಸ , ಬಳೆ, ತೊಟ್ಟಿಲು, ಮುಂತಾದ ಉಪಹಾರಗಳು ಆಕೆಗೆ ಎಲ್ಲಿಲ್ಲದ ಸಂತೋಷವನ್ನು ತಂದುಕೊಡುತ್ತವೆ.

ಗಾದೆಗಳಲ್ಲಿ ತಾಯಿಯ ಗುಣಸ್ವಭಾವದ ಕುರಿತು ರಚನೆಗೊಂಡ ಭಾವವನ್ನು ಹೀಗೆ ನೋಡಬಹುದು. 'ಗಂಡಸಿಗೆ ತೆತ್ತಲ್ಲದೆ ಬುದ್ಧಿ ಇಲ್ಲ, ಹೆಂಗಸಿಗೆ ಹೆತ್ತಲ್ಲದೆ ಬುದ್ಧಿ ಇಲ್ಲ ' ಎಂಬ ಗಾದೆ ಮಕ್ಕಳನ್ನು ಹೆತ್ತಾಗ ಮಾತ್ರ ಹೆಣ್ಣು ಪ್ರಬುದ್ಧಳಾಗುತ್ತಾಳೆ. ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತದೆ. ಹೆಣ್ಣನ್ನು ಉತ್ಪಾದಕ ಸಾಮಾಗ್ರಿಯಾಗಿ ನೋಡುವ ನಮ್ಮ ಸಮಾಜ ತಾಯಿಯಾದವಳು ಮಾತ್ರ ಪ್ರೌಢಳು ಪರಿಪೂರ್ಣಳು ಎಂದು ಗ್ರಹಿಸಿದೆ. ತಾಯ್ತನವನ್ನು ಒಂದು ಅಳತೆಗೋಲಾಗಿ ಕಾಣಲಾಗಿದೆ.

'ಆರು ಹಡದಾಕಿನ ಮುಂದ ಮೂರು ಹಡದಾಕಿ ಟಣಿಕಿದಳಂತೆ ' ಈ ಗಾದೆ ತಾಯಿಯ ಹಿರಿತನವನ್ನು ಎತ್ತಿ ಹಿಡಿಯುತ್ತದೆ. ಜೀವನದ ತರಬೇತಿಯಲ್ಲಿ ನಿಪುಣಳಾದವಳು ಹಲವು ಮಕ್ಕಳನ್ನು ಹೆತ್ತುಕೊಟ್ಟವಳ ಮುಂದೆ ಕಿರಿಯಳಾದ ಎಂದು ಮೂರು ಮಕ್ಕಳನ್ನು ಮಾತ್ರ ಹಡದ ತಾಯಿಯು ಅಹಂಕಾರ ಪಟ್ಟರೆ ಹೇಗೆ ಎಂಬುದನ್ನು ವ್ಯಂಗ್ಯವಾಗಿ ಹೇಳಲಾಗಿದೆ. ಇಲ್ಲಿ ಗೊತ್ತಿದ್ದವರ ಬುದ್ಧಿವಾದ ಹೇಳಲು ಹೋದರೆ ಅವರು ಅದನ್ನು ಒಪ್ಪಿಕೊಳ್ಳದೆ ಈ ಗಾದೆ ಸೃಷ್ಟಿ ಮಾಡಿದಂತೆ ತೋರುತ್ತದೆ.

ತಾಯಿಯಾವಾಗಲೂ ಮಕ್ಕಳಿಗೆ ಆಶ್ರಯವನ್ನು ಕೊಡುವ ಸ್ವಭಾವದವಳು ಅದಕ್ಕಾಗಿದೆ ತಾಯಿ ತಂಪು ಕೊಡುವವಳು ಎನ್ನುವರು. ಈ ನೆಲೆಯಲ್ಲಿಯೆ ' ತಾಯಿಯ ಮಡಿಲು ಹೊಂಗೆಯ ನೆರಳು ' ಎಂದು ಗಾದೆ ಹೇಳುತ್ತದೆ. ಹೊಂಗೆ ಹೂವಿನ ಗಿಡ ಸುಹಾಸನೆಯ ಜೊತೆಗೆ ನೆರಳನ್ನು ಕೊಡುವ ಗಿಡವಾಗಿದೆ. ನವೂರಾದ ಹೂವಿನ ಗಿಡವನ್ನು ತಾಯಿಗೆ ಹೋಲಿಸಲಾಗಿದೆ. ಇನ್ನೊಂದು ಬಹು ಪ್ರಚಲಿತ ಗಾದೆ ಎಂದರೆ 'ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ದೇವರಿಲ್ಲ' (ತಾಯಿಗಿಂತ ಬಂಧುವಿಲ್ಲ ಎಂತಲೂ ಹೇಳುವರು) ಅಡಿಗೆ ರುಚಿಯಾಗಿ ಆಗಬೇಕಾದರೆ ಉಪ್ಪು ಎಷ್ಟು ಮುಖ್ಯವೋ ಹಾಗೆ ತಾಯಿ ದೇವರ ಸ್ವರೂಪಳಾಗಿ ಆಕೆಯ ಹೊರತಾಗಿ ದೇವರಿಲ್ಲ ಎಂದು ಹೇಳಲಾಗಿದೆ.' ನಾಯಿ ಹಂಥಾದ ಒಂದು ತಾಯಿ ಇರಬೇಕು, ಕತ್ತಿ ಹಂಥಾದ ಒಂದು ಅತ್ತಿ ಇರಬೇಕು. ಎಂದು ಹೇಳಲಾಗುತ್ತದೆ. ಅಂದರೆ ತಾಯಿಯಾದವಳು ತನ್ನ ಮಕ್ಕಳನ್ನು ಕಾಪಾಡುವಲ್ಲಿ ನಾಯಿಯಂತೆ ಇತರರೊಂದಿಗೆ ಜಗಳವಾಡುವ ಸ್ವಭಾವದವಳು ಎಂದು ಚಿತ್ರಿಸಲಾಗಿದೆ. ಪಿ. ಲಂಕೇಶರ ಅವ್ವ ಕವನದಲ್ಲಿಯೂ ತಾಯಿಯನ್ನು ನಾಯಿಯ ಗುಣಸ್ವಭಾವಕ್ಕೆ ಹೋಲಿಸಿ ಹೇಳಿರುವುದನ್ನು ನೋಡಬಹುದು.

ಮಕ್ಕಳನ್ನು ಪಡೆದ ತಾಯಿಯ ಗುಣಸ್ವಭಾವವನ್ನು ಗಾದೆ ನಿರೂಪಿಸುತ್ತವೆ. 'ಮಗುವಿನ ತಾಯಿ ಕೆಲಸ ಕಳ್ಳಿ; 'ಕೆಲಸಗಳ್ಳಿಗೆ ಕೂಸು ಹುಟ್ಟಿತು; 'ಕುನ್ನಿಯಿಂದ ನಾಯಿ ನುಣ್ಣಗೆ' ಹೀಗೆ ತಾಯಿಯಾದವಳು ಗುಣಗಳನ್ನು ಒಂದೇ ಮಾತಿನಲ್ಲಿ ಹೇಳಿವೆ. ಕೂಸಿನ ತಾಯಿ ಮೈಗಳ್ಳತನ ಮಾಡುತ್ತಾಳೆ. ಕೂಸಿನ ಕಾರಣವಾಗಿ ತಾಯಿಯು ಉಂಡು - ತಿಂದು, ಆರಾಮವಾಗಿದ್ದು, ನುಣ್ಣಗಾಗುತ್ತಾಳೆ ಎಂಬುದು ಈ ಗಾದೆಗಳ ತಾತ್ಪರ್ಯ.

'ತಾಯಿ ಮಾತಿಗೆ ತರ್ಕವುಂಟೆ ತಂಬಿಟ್ಟಿಗೆ ಉಪ್ಪುಂಟೇ ಡೊಂಬರ ಗುಡಿಗೆ ಕದವುಂಟೇ' ಎಂಬ ಗಾದೆಯ ಅರ್ಥವೆಂದರೆ ತಾಯಿಯ ಹೃದಯದಲ್ಲಿ ಯಾವುದೇ ತರ್ಕವಿಲ್ಲ, ಸ್ವಾರ್ಥವಿಲ್ಲ ಅಲ್ಲಿ ಇರುವುದು ಕೇವಲ ಪ್ರೀತಿ ವಾತ್ಸಲ್ಯ ಮಾತ್ರ. ಉಪಾವಾಸವಿದ್ದ ಸಮಯದಲ್ಲಿ ತಂಬಿಟ್ಟು ಮಾಡಿ ತಿನ್ನುವರು ಅದಕ್ಕಾಗಿ ತಂಬಿಟ್ಟಿನಲ್ಲಿ ಉಪ್ಪು ಹಾಕುವುದಿಲ್ಲ. ಹಾಗೆ ಡೊಂಬುರರು ಊರಿಂದ ಊರಿಗೆ ವಲಸೆ ಹೋಗುವವರಿರುತ್ತಾರೆ ಅವರು ವಲಸಿಗರು. ಹೋದಲ್ಲಿ ಬಂದಲ್ಲಿ ಗುಡಿಸಲುಗಳನ್ನು ಹಾಕುತ್ತಾರೆ.ಅದರಲ್ಲೆ ಅವರ ವಸತಿ ಆ ಗುಡಿಸಿಲಿಗೆ ಕದ ಇರುವುದಿಲ್ಲ. ಹೀಗಾಗಿ ತಾಯಿಯ ಮಾತು ತರ್ಕ ಬದ್ಧವಾಗಿರದಿದ್ದರೂ ಮಮತಾಮಯಿಯಾಗಿರುತ್ತವೆ ಎಂಬುದೇ ಇದರ ತಾತ್ಪರ್ಯ.

'ತಾಯಿ ಕಲಿಸಿದ್ದು ಊಟ ತಂದೆ ಕಲಿಸಿದ್ದು ಬುದ್ಧಿ, ಅತ್ತೆ ಕಲಿಸಿದ್ದು ಕೆಲಸ ' ಈ ಗಾದೆಯ ಮೂಲಕ ತಾಯಿ ತಮ್ಮ ಮಕ್ಕಳ ಹಸಿವನ್ನು ನೀಗಿಸುವ ಅನ್ನಪೂರ್ಣೆ , ತನ್ನ ಮಕ್ಕಳು ಊಟ ಮಾಡಿದರೆ ಆಕೆ ಹೊಟ್ಟೆ ತುಂಬುತ್ತದೆ. ಊಟ ಮಾಡುವುದನ್ನು ಸಮರ್ಥವಾಗಿ ಕಲಿಸುವಳು ತಾಯಿಯೇ ಎಂದು ಹೇಳಲಾಗಿದೆ. ಪೋಷಿಸುವ ಗುಣ ಆಕೆಯ ಸ್ವಭಾವದಲ್ಲಿಯೇ ಇದೆ ಎಂದು ಈ ಗಾದೆ ಸಾರುತ್ತದೆ. ಬುದ್ಧಿ ಕಲಿಸಲು ತಂದೆ ಶ್ರೇಷ್ಠ, ಕೆಲಸ ಕಲಿಸುವಲ್ಲಿ ಅತ್ತೆ ಶ್ರೇಷ್ಠ ಆದರೆ ಹೊಟ್ಟೆ ತುಂಬುವ ರೀತಿಯಲ್ಲಿ ಆರೋಗ್ಯಕರವಾಗಿ ಹೇಗೆ ? ಏನು? ಊಟ ಮಾಡಬೇಕು ಎಂಬುದನ್ನು ಕಲಿಸುವವಳು ತಾಯಿಯೇ ಎಂದು ಹೇಳಲಾಗಿದೆ. ' ತಾಯಿ ಹಾಂಗ ಮಗಳು ತಂದಿ ಹಾಂಗ ಮಗ ' ಈ ಗಾದೆಯಲ್ಲಿ ಮಗಳು ಯಾವಾಗಲೂ ತಾಯಿಯ ಗುಣ - ಸ್ವಭಾವವನ್ನೇ ಹೋಲುತ್ತಾಳೆ ಎಂಬ ಅರ್ಥಕೊಡುತ್ತದೆ.

- **ವಿರೋಧಾಭಾಸದ ಗ್ರಹಿಕೆಗಳು**

ಬಂಜೆತನದ ಕುರಿತು ಹಲವು ಗಾದೆಗಳು ಸೃಷ್ಟಿಗೊಂಡಿವೆ. 'ಹೆಡೆದವ್ವಳಿಗೆ ಪಟ್ಟೆ ಸೀರೆ ಪಡೆಯದವಳಿಗೆ ಮುತ್ತುಗದ ಹಾಳೆ' ಈ ಗಾದೆಯಲ್ಲಿ ಮಕ್ಕಳಿರುವವಳಿಗೆ ನಮ್ಮ ಸಮಾಜ ಎಂಥ ಮನ್ನಣೆ ಕೊಡುತ್ತದೆ. ಎಂದು ಸಾರುತ್ತದೆ. 'ಮಕ್ಕಳಿಲ್ಲದ ಬಂಜೆ ಹೋದಲ್ಲಿ ಸಂಜೆ' ಎಂಬ ಗಾದೆ ಬಂಜೆಗೆ ಎಲ್ಲಿ ಹೋದರೂ ಅಪಮಾನ ತಪ್ಪಿದ್ದಲ್ಲ, ಒಳಿತು ಆಗುವುದಿಲ್ಲ. ಎಂಬುದನ್ನು ಹೇಳುತ್ತದೆ. ಪರಂಪರಾಗತವಾಗಿ ಬಂದ ಪುರುಷಾಧಾರಿತ ಮೌಲ್ಯಗಳು ಕಾರಣವಾಗಿ ಇಂಥ ಗಾದೆಗಳು ಸೃಷ್ಠಿಯಾಗಿವೆ.

'ಹೆಣ್ಣು ಹೆರದಿದ್ದರೂ ತಾಯಿ' ಎಂಬ ಗಾದೆಯಾಗಲಿ ' ಮಕ್ಕಳಿಲ್ಲದಿದ್ದರೆ ಒಂದು ದು:ಖ ಇದ್ದರೆ ನಾನಾ ದು:ಖ' ಎಂಬ ಗಾದೆಯೇ ಆಗಲಿ ಮಕ್ಕಳಿಗೆ ಮಹತ್ವ ಕೊಡದಿದ್ದರೂ ವಾಸ್ತವದಲ್ಲಿ ಹೆತ್ತವಳೇ ಪರಿಪೂರ್ಣ ಹೆಣ್ಣು ಎಂಬ ಪುರುಷಪ್ರಧಾನ ಗ್ರಹಿಕೆ ನಮ್ಮ ಸಮಾಜದಲ್ಲಿದೆ. ತವರುಮನೆ ಕುರಿತಂತೆಯೂ ಅಪಾರ ಪ್ರೀತಿ ಮೋಹ ಇರುವ ನಮ್ಮ ಜನಪದ ಹೆಣ್ಣು ಮಕ್ಕಳು ವಿರೋಧಾಭಾಸವೆಂಬಂತೆ ತವರು ಮನೆಗಿಂತ ಗಂಡನ ಮನೆ ಲೇಸು ಎಂದು ಹೇಳಲಾಗಿದೆ.

'ತವರು ಮನೆ ತುಪ್ಪ ಅನ್ನಕ್ಕಿಂತ

ಗಂಡನ ಮನೆ ಗಂಜಿ ಲೇಸು'

ಎಂದು ಹೇಳಲಾಗಿದೆ. ತಾಯಿಯ ಮಹತ್ವದ ಕುರಿತು ಒತ್ತಿ ಹೇಳಲಾದ ಹಲವು ಗಾದೆಗಳು ನಮಗೆ ಕಂಡುಬಂದರೂ 'ತಾಯಿ ಸತ್ತರೂ ಸೋದರ ಮಾವ ಇರಬೇಕು' ಎಂದು ನಿರ್ಣಯ ಕೊಟ್ಟಿದೆ. ಇದರ ತಾತ್ಪರ್ಯವೆಂದರೆ ತಾಯಿ ಇಲ್ಲದಿದ್ದರೂ ಸೋದರಮಾವ ತಾಯಿಯೆಂತೆ ನೋಡಿಕೊಳ್ಳುವ ಕರುಳುಬಳ್ಳಿಯವನಾಗಿರುತ್ತಾನೆ. ಎನ್ನಲಾಗಿದೆ. ಇಲ್ಲಿ ಹೆಣ್ಣಿಗೆ ಗಂಡನಮನೆಯಲ್ಲಿ ಏನಾದರೂ ತೊಂದರೆಗಳಾದಾಗ ಆಕೆಯ ಬೆಂಗಾವಲಿಗೆ ಸೋದರ ಮಾವ ಇರುತ್ತಾನೆ. ಎನ್ನುವ ಸೂಚನೆಯೂ ಇದೆ. ಅದಕ್ಕಾಗಿ ಹಾಗೆ ಹೇಳುವುದುಂಟು.

"ನೀರ ಮೇಲಿನ ಎಣ್ಣಿ ನುಣುಪು ತಪ್ಪು

ಹೆಣ್ಣಿಗೆ ತೌರ ಮನೆ ಆಸೆ ತಪ್ಪು

ಹರಳೆಣ್ಣೆಗಾಗಿ, ನೀರಿಟ್ಟು ಹರಳು ಬೇಯಿಸುತ್ತಾರೆ. ಬೆಂದಾದ ಮೇಲೆ ನೀರಿನ ಮೇಲೆ ತೇಲುವ ಎಣ್ಣೆಯನ್ನೆಲ್ಲ ಅಂಗೈಯಲ್ಲಿ ದೇವಿ ದೇವಿ ಕುಡಿಕೆಗೋ ಮಡಕೆಗೋ ತುಂಬಿಕೊಳ್ಳುತ್ತಾರೆ. ಎಷ್ಟೇ ತೆಗೆದರೂ, ನೀರಿನ ಮೇಲೆ ಎಣ್ಣೆಯ ನುಣುಪು ಕೊಂಚವೂ ಉಳಿಯದಂತೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಎಷ್ಟೇ ಪ್ರಯತ್ನಿಸಿದರೂ ಹೇಗೆ ನೀರಿನ ಮೇಲಿನ ಎಣ್ಣೆಯ ನುಣುಪು ಹೋಗುವುದಿಲ್ಲವೋ ಹಾಗೆ ಹೆಣ್ಣಿಗೆ ತವರು ಮನೆಯ ಆಸೆ ಹೋಗುವುದಿಲ್ಲ ಎಂಬುದು ಧ್ವನಿತವಾಗಿದೆ ಆದರೆ ಅಭಿವ್ಯಕ್ತಿಯ ಹೊಸತನ ಮನಸ್ಸನ್ನು ಆಕರ್ಷಿಸುತ್ತದೆ. ಗಾದೆಯ ಪೂರ್ವಾರ್ಧ ತೋರಿಕೆಗೆ ನೇರ ಹೇಳಿಕೆಯಂತೆ ಭಾಸವಾದರೂ, ಹಾಗಿರದೆ ಅದು ಷರತ್ತಿನ ಧಾಟಿಯಲ್ಲಿದೆ. ನೀರ ಮೇಲಿನ ಎಣ್ಣೆ ನುಣುಪು ತಪ್ಪಿದರೆ, ಹೆಣ್ಣಿಗೆ ತೌರುಮನೆಯ ಆಸೆ ತಪ್ಪುತ್ತದೆ. ಎನ್ನುತ್ತದೆ ಗಾದೆ. ಎಣ್ಣೆಯ ನುಣುಪು ಎಂದಿಗೂ ತಪ್ಪುವುದಿಲ್ಲ. ಹಾಗೆಯೇ ಹೆಣ್ಣಿಗೆ ತವರು ಮನೆ ಆಸೆ ತಪ್ಪುವುದಿಲ್ಲ. ಆಸೆಗೆ ಎಣ್ಣೆಯ ನುಣುಪು (ಜಿಡ್ಡು) ಸಂಕೇತವಾಗಿರುವುದು ಸೊಗಸಾಗಿದೆ"[೬] ತನ್ನ ಬದುಕಿನ ಆರಂಭದ ಕಾಲಕಳೆದ ತವರನ್ನು ಯಾರಿಗಾದರೂ ಮರೆಯಲು ಸಾಧ್ಯವೇ?

ಹೆಣ್ಣಿನ ಕುರಿತಂತೆ ಹಲವು ಗಾದೆಗಳು ನಮ್ಮ ಸುತ್ತಮುತ್ತಲು ಪ್ರಚಲಿತದಲ್ಲಿವೆ. ಮುಖ್ಯವಾಗಿ ತಾಯ್ತನವನ್ನೆ ಗ್ರಹಿಸುವುದಾದರೆ ಗಾದೆಗಳಲ್ಲಿ ತಾಯಿಗೆ ಹೆಚ್ಚಿನ ಮಹತ್ವಕೊಡಲಾಗಿದೆ. ಪ್ರಾಚೀನ ಕಾಲದಿಂದಲೂ ತಾಯ್ತನ ಒಂದು ಮೌಲ್ಯವಾಗಿ ಪ್ರಪಂಚದಾದ್ಯಂತ ಪ್ರಚಲಿತದಲ್ಲಿದೆ. ತಾಯ್ತನದ ಮಹತ್ವದ ಕುರಿತು ಅನೇಕ ಗಾದೆಗಳನ್ನು ನೋಡಬಹುದು.

ಹೀಗೆ ತಾಯಿಯ ಮಹತ್ವದ ಕುರಿತು ಅನೇಕ ಗಾದೆಗಳು ನಮಗೆ ಸಿಗುತ್ತವೆ. ನಮ್ಮ ಸಮಾಜದಲ್ಲಿ ತಾಯಿಗೆ. ಬೆಲೆ ಇದೆ. ಮಾತೆಯರು ಮಾನ್ಯರಾಗಿದ್ದಾರೆ. ಆದರೂ 'ತಾಮ್ರದ ದುಡ್ಡು ತಾಯಿ ಮಕ್ಕಳನ್ನು ಕೆಡಿಸಿತು' ಎಂಬ ಗಾದೆಯೂ ಹುಟ್ಟಿಕೊಂಡಿವೆ. ಮಕ್ಕಳ ಲಾಲನೆ ಪಾಲನೆ ಹೆಚ್ಚಾಗಿ ಹೆಣ್ಣಿನ ಮೇಲೆ ಹೋರಿಸಲಾಗಿದೆ. ಪುರುಷಪ್ರಧಾನ ಸಮಾಜದಲ್ಲಿ ಕುಟುಂಬದ ಯಜಮಾನನು ಪುರುಷನು ಆತ ದುಡಿಯಲು ಹೊರಗಡೆ ಹೋದರೆ, ತಾಯಿಯು ತನ್ನ

ಮಕ್ಕಳ ಪೋಷಣೆ ಮಾಡುವುದು ಸಾಮಾನ್ಯ. ಹಾಗಾಗಿ ಮಕ್ಕಳ ಮೇಲೆ ತಾಯಿಯ ಪ್ರಭಾವ ಹೆಚ್ಚು ಎಂದು ಹೇಳಲಾಗುತ್ತದೆ. ಆಕೆಯ ಗುಣಗಳೆಲ್ಲವೂ ಮಕ್ಕಳಲ್ಲಿ ಬರುತ್ತವೆ ಎಂದು ನಮ್ಮ ಜನಪದರು ನಂಬಿದ್ದಾರೆ. ಅದರಲ್ಲೂ ಮಗಳ ಮೇಲೆ ತಾಯಿಯ ಎಲ್ಲ ಗುಣಗಳು ಮೂಡಿರುತ್ತವೆ ಎಂದು ಹೇಳುತ್ತಾರೆ.

'ತಾಯಿಯಂತೆ ಶೀಲ ನಾಯಿಯಂತೆ ಬಾಲ' ಎಂದೂ 'ತಾಯಿಯಂತೆ ಮಗಳು ನೂಲಿನಂತೆ ಸೀರೆ' ಎನ್ನುವ ಗಾದೆಗಳು ತಾಯಿ ಮಗಳ ಸಾಮಾನ್ಯತೆಯನ್ನು ತಿಳಿಸುತ್ತವೆ. ಗಾದೆಗಳು ಒಂದೇ ತೆರನಾದ ವಿಚಾರದಿಂದ ರೂಪು ಪಡೆದವುಗಳಲ್ಲ. ಅವು ಸಮಯ - ಸಂದರ್ಭ ಗುಣ ಸ್ವಭಾವ, ಪರಿಸರ - ಪರಿಸ್ಥಿತಿಗಳ ಆಧಾರದ ಮೇಲೆ ಬೇರೆ ಬೇರೆ ನೀಲುವುಗಳನ್ನು ತಾಳುತ್ತವೆ. ''ಗಾದೆಗಳ ರಚನೆ ಮತ್ತು ಬಳಕೆಯ ನೆಲೆಗಳೇ ಹಲವಿರುವುದರಿಂದ ಅಂಗವ್ಯವಸ್ಥೆಯನ್ನು ಕುರಿತು ಒಂದು ದೃಷ್ಟಿಕೋನ ಇಲ್ಲಿಲ್ಲ. ಸ್ತ್ರೀಯರ ಕುರಿತು ಪ್ರಧಾನ ಅಧಿನ -ಸಮಾನ ನೆಲೆಗಳು ಇಲ್ಲಿ ದನಿ ಪಡೆದಿವೆ. ಒಮ್ಮೊಮೇ ಒಂದರೊಳಗೊಂದು ಸೋರಿಹೋಗಿವೆ. ಕಾವ್ಯಾದಿಗಳಂತ ಸಂಗೋಪನೆ ಮತ್ತು ವಕ್ತೃತ್ವಗಳು ಯಾರೋ ಕೆಲವರ ಕೈಯಲ್ಲಿ ಉಳಿಯದೆ ಜನ ಸಮೂಹದ ನಡುವೆಯೆ ಗಾದೆಗಳು ಉಳಿದು ಬಾಳಬೇಕಾಗಿರುವುದರಿಂದ ಹಿನ್ನಲೆಯಲ್ಲಿದ್ದ ಒಳಾಂಗಣದಲ್ಲಿದ್ದ ಕೆಲವು ಸ್ತ್ರೀಯರ ಪರಮಾಧಿಕಾರದ ನೆಲೆಗಳು ಸೆನ್ಸಾರ್‌ಗೂ ಒಳಗಾಗಬಹುದು. ಈ ಕಾರಣದಿಂದಾಗಿಯೂ ಸಾರ್ವಜನಿಕ ವಲಯಗಳನ್ನು ಶಕ್ತಿ ಕೇಂದ್ರಗಳನ್ನು ಆವರಿಸಿದ ಪುರುಷ ಕೇಂದ್ರಿತ ದೃಷ್ಠಿ ಹಿಡಿತ ಗಾದೆಗಳ ಮೇಲೆ ಹೆಚ್ಚುವ ಸಾಧ್ಯಾತೆಯೂ ಇದೆ. ಗಾದೆಗಳ ವಿಸ್ತೃತ ಅಧ್ಯಯನಗಳು ಗಾದೆಗಳ ಸಂರಚನೆ - ಸಂದರ್ಭಗಳಿಗೂ ಸ್ತ್ರೀ - ಪುರುಷರ ಬಲಾಬಲಗಳಿಗೂ ಇರುವ ಸಂದರ್ಭಗಳನ್ನು ಸ್ಪಷ್ಟಪಡಿಸಬಹುದು. ''[2] ಗಾದೆಗಳು ಹೆಣ್ಣಿನ ಬದುಕನ್ನು ಅವಳ ಸಂಕೀರ್ಣ ಸ್ವಭಾವವನ್ನು ಪ್ರಭಾವಕಾರಿಯಾಗಿ ಚಿತ್ರಿಸಿವೆ.

ಹೀಗೆ ತಾಯ್ತನದ ಗ್ರಹಿಕೆಗಳನ್ನು ಗಾದೆಗಳ ಮೂಲದಲ್ಲಿ ಹುಡುಕಿದಾಗ ಆಕೆಯ ಒಟ್ಟು ಬದುಕಿನ ಚಿತ್ರಣವನ್ನು ಕೊಡುತ್ತವೆ.ಇವು ಪ್ರಾಚೀನ ಕಾಲದಿಂದಲೂ ಪಳವಳಿಕೆಯಂತೆ ಸಾಗಿಬಂದ ತನ್ನೊಂದಿಗೆ ಮಾನವ ಬದುಕಿನ ರೀತಿಯನ್ನು ಹೊತ್ತು ತಂದಿವೆ. ಪ್ರಾಚೀನ ಕಾಲದಿಂದಲೂ ನಮ್ಮ ಸಮಾಜ ತಾಯಿಯನ್ನು ಗ್ರಹಿಸುವ ಬಗೆಯನ್ನು ಇವು ತಿಳಿಸಿ ಕೊಡುತ್ತವೆ. ಗಾದೆಗಳ ಮೂಲಕ ತಾಯ್ತನವನ್ನು ಅರ್ಥೈಸಿಕೊಳ್ಳಬಹುದು.

## ಟಿಪ್ಪಣಿ

1. 'ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ ' ಡಾ. ಸಿ.ಟಿ ರಮೇಶ ಪು. ೫೪೦
2. 'ನಮ್ಮ ಸುತ್ತಿನ ಗಾದೆಗಳು' ಲೇ- ಪ್ರೊ ಸುಧಾಕರ ಪು:೧೦
3. 'ಜೀ.ಶಂ ಪರಮಶಿವಯ್ಯ ಪು. ೫೧
4. 'ಜಾನಪದ ಸಾಹಿತ್ಯದಲ್ಲಿ ಸ್ತ್ರೀ ಪರಿಕಲ್ಪನೆ ' ವೆಂಕಟೇಶ ಸಿ.ಡಿ ಪು. ೧೬೩
5. 'ಜಾನಪದ ಆನ್ವಯಿಕತೆ' ಸಂ - ಡಾ. ಗಿ.ಆರ್. ತಿಪ್ಪೆಸ್ವಾಮಿ ಡಾ.ಟಿ.ಎಮ್.ಭಾಸ್ಕರ. ಪು-೪೬
6. ನಮ್ಮ ಸುತ್ತಿನ ಗಾದೆಗಳು ಲೇ-ಪ್ರೊ.ಸುಧಾಕರ ಪು- ೨೯
7. 'ಜಾನಪದ ಆನ್ವಯಿಕತೆ' ಸಂ - ಡಾ. ಗಿ.ಆರ್. ತಿಪ್ಪೆಸ್ವಾಮಿ ಡಾ.ಟಿ.ಎಮ್.ಭಾಸ್ಕರ. ಪು- ೪೮

# ಅಧ್ಯಾಯ:-6 ತಾಯ್ತನದ ಇಂದಿನ ಸ್ಥಿತಿ-ಗತಿ

- ತಾಯ್ತನದ ಸಂಘರ್ಷಗಳು
  - ದೈಹಿಕ ಸಂಘರ್ಷಗಳು
  - ಮಾನಸಿಕ ಸಂಘರ್ಷಗಳು
- ವಿವಾಹ ಪೂರ್ವ ತಾಯ್ತನ
- ಒಂಟಿ ತಾಯ್ತನ
- ಪ್ರನಾಳ ಶಿಶು / ಬಾಡಿಗೆ ತಾಯ್ತನ
- ಜಾಹಿರಾತಿನಲ್ಲಿ ತಾಯಿ
- ಮಾದರಿ ತಾಯಂದಿರು
- ಕಾನೂನು ಮತ್ತು ಯೋಜನೆಗಳು
- ತಾಯಂದಿರ ಮರಣ ಸಮಸ್ಯೆ

## ಅಧ್ಯಾಯ:-6

## ತಾಯ್ತನದ ಇಂದಿನ ಸ್ಥಿತಿ-ಗತಿಗಳು

ಸಮಾಜ ನಿಂತ ನೀರಲ್ಲ ಅದು ಚಲಿಸುತ್ತ ಬದಲಾಗುತ್ತ ಸಾಗುತ್ತದೆ. ಸಮಾಜದ ಬದಲಾವಣೆ ಎಂದರೆ ಮಾನವನ ಬದುಕಿನ ಬದಲಾವಣೆಯೇ ಆಗಿದೆ. ಆಧುನಿಕ ಕಾಲದಲ್ಲಿ ಬದುಕುತ್ತಿರುವ ಮಾನವ ಹಲವು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಕೊಂಡಿದ್ದಾನೆ.ಅದರಲ್ಲಿಯು ಪುರುಷಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಯನ್ನು ತನ್ನ ಗುಲಾಮಳಾಗಿ ಕಾಣಲಾಗಿದೆ. ಶತಮಾನಗಳಿಂದ ಹಲವು ಬಗೆಯ ಸಮಸ್ಯೆಯ ಎದುರಿಸುತ್ತಿರುವ ಮಹಿಳೆ ಆಧುನಿಕ ಕಾಲದ್ದಲ್ಲೂ ಹೊಸ ರೀತಿಯಲ್ಲಿ ಸುಳಿಗಳಲ್ಲಿ ತೊಳಲಾಡುತ್ತಿದ್ದಾಳೆ. ಶಿಕ್ಷಣ, ಉದ್ಯೋಗಗಳು ಆಕೆಯ ಬದುಕನ್ನು ಬದಲಾಯಿಸಿದರೂ ಹೊಸದಾಗಿ ಕಟ್ಟಿಕೊಂಡ ಆಕೆಯ ಬದುಕನ್ನು ಬೇರೆ ರೀತಿಯ ದಬ್ಬಾಳಿಕೆಗೆ ಗುರಿಯಾಗಿದೆ.

ಕುಟುಂಬದಿಂದ ಹೊರಬಂದ ಮಹಿಳೆ ಸಮಾಜದಲ್ಲಿ ಹಲವು ಬಗೆಯ ಕರ್ತವ್ಯಗಳನ್ನು ನಿಭಾಯಿಸುತ್ತಿದ್ದಾಳೆ. ಮನೆ , ಕುಟುಂಬ, ಮಕ್ಕಳ ಪಾಲನೆ- ಪೋಷಣೆಯ ಜೊತೆಗೆ ಸಮಾಜದ ಇತರ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಾಳೆ. ಸಮಾಜದಲ್ಲಿ ತಾನು ಯಾರು ? ಎಂಬುದನ್ನು ಗುರುತಿಸಿಕೊಳ್ಳಲು ಹೊರಟಿದ್ದಾಳೆ. ತನ್ನ ಅಸ್ತಿತ್ವದ ನೆಲೆಗಳನ್ನು ಹುಡುಕಲು ಹವಣಿಸುತ್ತಿದ್ದಾಳೆ. ಆದರೆ ಈ ಭರದಲ್ಲಿ ಆಕೆಯ ಬದುಕು ನರಕ ಸದೃಶ್ಯವಾಗಿದೆ. ಕುಟುಂಬ ಮತ್ತು ವಿವಾಹವೆಂಬ ಸಂಕೋಲೆಗಳನ್ನು ಬಿಡಿಸಿಕೊಳ್ಳಲು ಆಗದೆ ಹೊಸದನ್ನು ಸಂಪೂರ್ಣ ಒಪ್ಪಿಕೊಳ್ಳಲು ಆಗದೆ ದ್ವಿಮುಖದ ಜೀವನ ನಡೆಸುತ್ತಿದ್ದಾಳೆ. ಅದರಲ್ಲೂ ತಾಯಿಯ ಸ್ಥಿತಿ-ಗತಿಗಳು ಹಿಂದಿಗಿಂತಲೂ ಇಂದು ಹೆಚ್ಚು ಸಂಕೀರ್ಣಗೊಂಡಿರುವುದು ಗುರುತಿಸಬಹುದು.

ಇಂದಿನ ಬದುಕು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಬದುಕನ್ನು ವಿಭಿನ್ನವಾಗಿ ರೂಪಿಸಿಕೊಟ್ಟಿವೆ. ಅನಕ್ಷರತೆ ಕಾರಣವಾಗಿ ಮಹಿಳೆ ಶೋಷಣೆ ಒಳಗಾಗಿದ್ದ ಕಾಲವೊಂದಿತ್ತು. ಆದರೆ ಇಂದು ಶಿಕ್ಷಣವೇ ಕಾರಣವಾಗಿ ತಾಯಿಯನ್ನೊಳಗೊಂಡಂತೆ ಮಹಿಳೆಯ ಬದುಕು. ಇಂದು ಚಿಂತಾಜನಕವಾಗಿದೆ. ಇಂದು ಶಿಕ್ಷಣ ಆಕೆಗೆ ಸಮಾನವಾದ ಬದುಕನ್ನು ಕಲಿಸಿಕೊಟ್ಟಿದೆ. ಈ ಮೂಲಕ ತನ್ನ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು . ಅದರ ಜೊತೆಗೆ ಆಕೆಯ ಬದುಕನ್ನು ಇನ್ನೂ ಸಂಕೀರ್ಣತೆಯ ಕಡೆಗೆ ಸಾಗುವಂತೆ ಮಾಡುತಿದೆ.

ಪ್ರಾಚೀನ ಕಾಲದಿಂದಲೂ ಹಲವು ಸಮಸ್ಯೆಗಳನ್ನು ಎದುರಿಸುತ್ತಿರುವ ತಾಯಿ, ಹೆಜ್ಜೆ ಹೆಜ್ಜೆಗೂ ಪುರುಷ ಸಮಾಜದ ಸವಾಲುಗಳನ್ನು ಎದುರಿಸುತ್ತ ತನ್ನ ತಾಯ್ತನದ ಕರ್ತವ್ಯಗಳನ್ನು ಪಾಲಿಸುತ್ತಾ ಬಂದಿದ್ದಾಳೆ. ಈ ಕರ್ತವ್ಯಗಳು ಪುರುಷ ಸಮಾಜದ ನಿರ್ಮಾಣವೇ ಸರಿ. ಪುರುಷನ ತೆಕ್ಕೆಯಲ್ಲಿ ಮಹಿಳೆ ಹಲವು ಬಗೆಯ ಹಿಂಸೆಗಳಿಗೆ ಬಲಿಯಾಗಿದ್ದಾಳೆ. ಮಕ್ಕಳಿದ್ದರೂ ಇರದಿದ್ದರೂ ಆಕೆ ಎದುರಿಸುವ ಸವಾಲುಗಳು ಹಲವು. ವೇದಗಳ ಕಾಲದಲ್ಲಿ 'ಮಾತೃದೇವೋಭವ' ಎಂಬ ಮಾತು ಚಾಲ್ತಿಯಲ್ಲಿದ್ದರೂ, ಮಹಿಳೆಯನ್ನು ಕ್ಷುದ್ರಳಂತೆ ಕಂಡದ್ದು ಗಮನಿಸಬಹುದು. ಮಹಿಳೆಯರನ್ನು ಸ್ವತಂತ್ರಕ್ಕೆ ನೀಡಿದರೂ ಅದಕ್ಕೊಂದು ಮಿತಿ ಇತ್ತು. ಈ ಪ್ರವೃತ್ತಿ ವೇದಗಳ ನಂತರದ ದಿನಗಳಲ್ಲಿ ಇನ್ನೂ ಪ್ರಭಲಗೊಂಡಿತ್ತು

ಋಗ್ವೇದದ ಕಾಲದಲ್ಲಿ ಪುರುಷಪ್ರಾಧಾನ್ಯತೆಯ ಕುರುಹುಗಳನ್ನು ಕಾಣಬಹುದಾಗಿದೆ. ಪುರುಷರಿಂದ ರೂಪಿಸಲ್ಪಟ್ಟ ಧರ್ಮ ಸಂಹಿತೆಗಳು ತಾಯಂದಿರ ಸ್ಥಿತಿಯನ್ನು ಮತ್ತಷ್ಟು ಸಂಕೀರ್ಣತೆಯ ಕಡೆಗೆ ನೂಕಿದವು. ವಂಶಾವಳಿಯನ್ನು ಗುರುತಿಸಲು ಗಂಡು ಮಕ್ಕಳೇ ಬೇಕು ಎಂಬ ನಂಬಿಕೆ ಪ್ರಬಲವಾಗಿ ಬೇರೂರಿತು. ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಹಕ್ಕಿಲ್ಲ ಎಂಬುದನ್ನು ಸಾರಿದವು. ಹೆಣ್ಣು ಮಕ್ಕಳು ಶಿಕ್ಷಣ ಪಡೆಯದೆ ಕೇವಲ ಕುಟುಂಬದ ಚೌಕಟ್ಟಿನಲ್ಲಿ ಮಾತ್ರ ಕಾರ್ಯ ನಿರ್ವಹಿಸಲು ಕಟ್ಟಪ್ಪಣೆ ಮಾಡಲಾಯಿತು. ಮಹಿಳೆಯ ಅಭಿವೃದ್ಧಿಯನ್ನು ಧರ್ಮದ ಹೆಸರಿನಲ್ಲಿ ಚಿವುಟಿ ಹಾಕಲಾಯಿತು. ಹೆಣ್ಣಿನ ಆದ್ಯತೆ ಹೆತ್ತುಕೊಡುವಲ್ಲದೆ ಎಂಬುದನ್ನು ಪ್ರಚುರಪಡಿಸಲಾಯಿತು. ಕುಟುಂಬ - ವಿವಾಹ ಸಂಸ್ಥೆಗಳು ತಾಯಿಯನ್ನು ಸೃಷ್ಟಿಸುವ ಕಾರ್ಖಾನೆಗಳಾಗಿ ಮಾರ್ಪಟ್ಟವು. ಮಹಿಳೆಯನ್ನು ತಾಯಿಯಾಗಿ ಪರಿವರ್ತಿಸುವ , ಅದೇ ಬಂಧನದಲ್ಲಿ ಕಟ್ಟಿಹಾಕುವ ಕೊನೆಗೆ ಆಕೆ ಉಸಿರಿರುವ ವರೆಗೆ ತಾಯಿ ಕರ್ತವ್ಯವೊಂದೇ ನಿಭಾಯಿಸುವ ಬಹುದೊಡ್ಡ ಜವಾಬ್ದಾರಿಯನ್ನು ವ್ಯವಸ್ಥಿತವಾಗಿ ಆಕೆಯ ಮೇಲೆ ಹೇರಲಾಯಿತು.

ಈ ಹೇರಿಕೆಯನ್ನು ತಾಯಿಯಾದ ಮಹಿಳೆ ಯಾವ ಪ್ರಶ್ನೆ ಮಾಡಲಾರದೇ ದೈಹಿಕವಾಗಿ ಮಾನಸಿಕವಾಗಿ ಒಪ್ಪಿಕೊಂಡು ಬದುಕುತ್ತ ಸಾಗಿದಳು . ಇದಕ್ಕೆ ಪೂರಕವಾಗಿ ಹುಟ್ಟಿಕೊಂಡ ನಂಬಿಕೆ ಆಚರಣೆಗಳು ತಾಯಿಯನ್ನು ಹಾಗೂ ಆಕೆಯ ತಾಯ್ತನವನ್ನು ವೈಭವೀಕರಿಸುತ್ತಲೆ ಆಕೆ ಬದುಕನ್ನು ಪಾತಾಳಕ್ಕೆ ನೂಕಿದವು. ಇಂದು ಸಹ ತಾಯಿಯ ಸ್ಥಿತಿ-ಗತಿಗಳು ಈ ಪಾತಾಳದಡಿಯಲ್ಲಿ ಭದ್ರವಾಗಿ ನಿಂತಿವೆ.ಆಧುನಿಕ ಶಿಕ್ಷಣ ಇಂದಿನ ಮಹಿಳೆಯ ಬದುಕನ್ನು ಬದಲಾಯಿಸಿದರೂ ತಾಯಿಯ ಬದುಕನ್ನು ಮಾತ್ರ ಇನ್ನೂ ಸಂಕೀರ್ಣತೆಯ ಕಡೆಗೆ ತಳ್ಳಿದೆ. ಎಲ್ಲ ಸಮಸ್ಯೆಗಳಿಗೆ ಶಿಕ್ಷಣವೇ ರಾಮಬಾಣ ಎಂದು ಹೇಳಲಾಗುತ್ತದೆ.ಆದರೆ ತಾಯಿ ಎದುರಿಸುವ ಸಮಸ್ಯೆ ಮತ್ತು ಸವಾಲುಗಳು ಮಾತ್ರ ಶಿಕ್ಷಣದಿಂದ ಮತ್ತಷ್ಟು ಉಲ್ಬಣಗೊಂಡಿವೆ ಎಂದೇ ಹೇಳಬಹುದು.

ಇಪ್ಪತ್ತೊಂದನೆ ಶತಮಾನದಲ್ಲಿ ಕಾಲಿಟ್ಟ ನಮ್ಮ ತಾಯಂದಿರ ಸ್ಥಿತಿ - ಗತಿ ಗಮನಿಸಿದರೆ ನಿಜವಾಗಿ ಕ್ರೂರ ಸತ್ಯಗಳು ಎದುರಾಗುತ್ತವೆ. ಬ್ರಿಟೀಷರ ಆಗಮನದಿಂದ ದೇಶದಾದ್ಯಂತ ಶೈಕ್ಷಣಿಕ ಅಭಿವೃದ್ಧಿ ಆಗಿ ಹೆಣ್ಣು - ಗಂಡೆಂಬ ತಾರತಮ್ಯವಿಲ್ಲದೇ ಎಲ್ಲರ ಶಿಕ್ಷಿತರಾಗಲೂ ದಾಪುಗಾಲು ಹಾಕಿದರು. ಬ್ರಿಟಿಷರು ಕೊಟ್ಟ ಮಹಿಳೆ ಶಿಕ್ಷಣದ ಆದ್ಯತೆ ಅವರ ನಂತರವೂ ಭರದಿಂದ ಸಾಗಿತು. ಸರಕಾರ, ಸರಕಾರೇತರ ಸಂಸ್ಥೆಗಳು ಮಹಿಳೆಯ ಶಿಕ್ಷಣಕ್ಕೆ ಆದ್ಯತೆ ಕೊಡುವುದರ ಮೂಲಕ ಅವಳ ಬದುಕನ್ನು ಅಭಿವೃದ್ಧಿ ಪಡಿಸಲು ಹವಣಿಸಿದವು. ಆರ್ಯ ಸಮಾಜ, ಬ್ರಹ್ಮ ಸಮಾಜ ಕ್ರೈಸ್ತ ಸೇವಾ ಸಂಘಗಳು ಅಷ್ಟೇ ಅಲ್ಲ ಇಂಥ ಅನೇಕ ಶಕ್ತಿಗಳು ಮಹಿಳೆಯ ಶಿಕ್ಷಣಕ್ಕಾಗಿ ಶ್ರಮಿಸಿದವು. ಸಮಾಜದ ಪ್ರಗತಿಯಾಗಬೇಕಾದರೆ ಮಹಿಳೆಯರು ಶಿಕ್ಷಣ ಪಡೆಯುವುದು ಅನಿವಾರ್ಯ ಎಂಬ ಮಾತನ್ನು ಪ್ರಚುರ ಪಡಿಸಲಾಯಿತು. ಜಗತ್ತು ಆಧುನಿಕತೆಗೆ ಕಾಲಿಡುವ ಸಂಧರ್ಭದಲ್ಲಿ ಮಹಿಳೆ ಶಿಕ್ಷಿತಳಾಗಿ ಮಾರ್ಪಟ್ಟಳು.

ಶಿಕ್ಷಣ ಪಡೆದ ಮಹಿಳೆ ಇಂದು ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಪುರುಷನ ಎಲ್ಲ ಕ್ಷೇತ್ರಗಳಲ್ಲಿ ಸಮಾನವಾಗಿ ದುಡಿಯಲು ದಾಪುಗಾಲನ್ನಿಡುತ್ತಿದ್ದಾಳೆ. ಯಾವ ಕ್ಷೇತ್ರಗಳು ಪುರುಷರಿಗೆ ಮಾತ್ರ ಸೀಮಿತವಾಗಿದ್ದವೊ ಅವುಗಳಲ್ಲಿ ತನ್ನನ್ನು ತೊಡಗಿಸಿ ಕೊಂಡಿದ್ದಾಳೆ.

ದೈಹಿಕವಾಗಿ ಹಾಗೂ ಮಾನಸಿಕವಾಗಿ ಪುರುಷರಿಗಿಂತಲೂ ಕಡಿಮೆ ಇಲ್ಲ ಎಂಬುದನ್ನು ಸಾಬಿತುಪಡಿಸುತ್ತಿದ್ದಾಳೆ. ದೈಹಿಕ ಶ್ರಮವಿರಲಿ ಜ್ಞಾನಶಾಖೆಗೆ ಸಂಭಂದಿಸಿದ್ದಾಗಿರಲಿ ತನ್ನ ಬಲಿಷ್ಠತೆಯನ್ನು ತೋರಿಸುತ್ತಿದ್ದಾಳೆ.

ಆಧುನಿಕತೆಯ ಪರಿಣಾಮವಾಗಿ ತಾಯಿಯ ಬದುಕು ಇಂದು ಬದಲಾಗುತ್ತಿದೆ. ನಗರೀಕರಣ, ಕೈಗಾರೀಕರಣ, ಖಾಸಗಿಕರಣ, ಕಂಪ್ಯೂಟರೀಕರಣ, ಜಾಗತೀಕರಣದ ಭರದಲ್ಲಿ ತಾಯಿಯನ್ನೊಳಗೊಂಡ ಹೆಣ್ಣಿನ ಬದುಕು ತೊಳಲಾಟಕ್ಕೆ ಸಿಕ್ಕಿಕೊಂಡಿದೆ. ಪರಂಪರಾಗತವಾಗಿ ಬಂದ ಸಮಸ್ಯೆ ಮತ್ತು ಸವಾಲುಗಳಿಂದ ಪಾರಾದಂತೆ ಕಂಡರೂ ಅದರಿಂದ ಸಂಪೂರ್ಣ ಹೊರ ಬರಲಾರದೇ, ಶಿಕ್ಷಣ ಪಡೆದ ಇಂದಿನ ಹೆಣ್ಣಿಗೆ ಹೊಸ ಸವಾಲುಗಳು ಎದುರಾಗಿವೆ. ಹೊಸ ಸಮಸ್ಯೆಗಳು ಹೊಸ ರೀತಿಯಲ್ಲಿ ಸುತ್ತುವರೆದಿವೆ. ತಾನು ಆಯ್ಕೆ ಮಾಡಿಕೊಂಡ ವೃತ್ತಿ ಬದುಕು ನಿಭಾಯಿಸಲಾಗದೇ, ಪರಂಪರಾಗತವಾಗಿ ಬಂದ ತಾಯ್ತನವನ್ನು ನಿರಾಕರಿಸದೆ ತೊಳಲಾಟಕ್ಕೆ ಸಿಕ್ಕಿಕೊಂಡಿದ್ದಾಳೆ. ಮನೆಯಲ್ಲಿ ದುಡಿಯುವುದರ ಜೊತೆಗೆ ಹೊರಗಡೆ ದುಡಿಯುತ್ತಿದ್ದಾಳೆ. ಕುಟುಂಬವನ್ನು ನೋಡಿಕೊಳ್ಳುತ್ತ ಹೆತ್ತ ಮಕ್ಕಳ ಲಾಲನೆ - ಪಾಲನೆಯಲ್ಲಿ ಜೀವನವನ್ನು ಕಳೆಯುತ್ತಿದ್ದಾಳೆ. ಈ ಇಬ್ಬಗೆಯ ದುಡಿಮೆ ಆಕೆಯನ್ನು ಹಿಂದಿಗಿಂತಲೂ ಸಂಕೀರ್ಣಕ್ಕೆ ಸಿಕ್ಕಿಸಿದೆ. ಹೀಗಾಗಿ ಇಂದಿನ ತಾಯಿಯ ದುಡಿಮೆ ಬದಲಾದ ಪರಿಸರದಲ್ಲಿ ಇನ್ನೂ ಹೆಚ್ಚು ಗಂಭೀರವಾಗ ತೊಡಗಿದೆ.

ಸ್ತ್ರೀ ಶಿಕ್ಷಣ ಆಕೆಯನ್ನು ಮಾನಸಿಕವಾಗಿ ಬಲಿಷ್ಠಳಾಗಿ ಮಾಡಿತು ಹಲವು ಕ್ಷೇತ್ರಗಳಲ್ಲಿ ಪರಿಣಿತಿ ಪಡೆದು ಒಂದು ಕಡೆ ವೃತಿ ಇನ್ನೊಂದು ಕಡೆ ಕುಟುಂಬ ನಿರ್ವಹಣೆಯಿಂದ ಎರಡು ಮಗ್ಗಲಿನಿಂದ ಸವಾಲುಗಳು ಎದುರಾಗುತ್ತಿವೆ. ಪುರುಷ ಪ್ರಧಾನ ಮಾನಸಿಕತೆ ಸಂಪೂರ್ಣವಾಗಿ ಅಳಿದು ಹೋಗದೆ ಮನೆಯಲ್ಲಿ ಕುಟುಂಬ ಸದಸ್ಯರಿಂದ , ಹೊರಗಡೆ ದುಡಿಸಿಕೊಳ್ಳುವ ವರ್ಗದಿಂದ ತತ್ತರಿಸಿದ್ದಾಳೆ. ಆಧುನಿಕ ತಾಯಿಯ ಬದುಕು ಆಕೆಯ ಸ್ಥಿತಿ - ಗತಿ ಗಂಭಿರವಾಗಿ ಬೆಳೆದು ನಿಂತಿವೆ. ವರ್ಗ ತಾರತಮ್ಯ ಕಾರಣವಾಗಿ ಭಿನ್ನ ಭಿನ್ನ ಕ್ಷೇತ್ರಗಳಲ್ಲಿ ಭಿನ್ನ ನೆಲೆಗಳಲ್ಲಿ ಆಕೆಯ ಬದುಕು ದುಸ್ಥಿರವಾಗಿದೆ. ತಾನು ದುಡಿಯುವ ಕ್ಷೇತ್ರದಲ್ಲಿ ಎಷ್ಟೇ ಚುರುಕಾಗಿ ಇದ್ದರೂ ಮನೆ ಬಂದ ತಕ್ಷಣ ಮತ್ತೆ ಅದೇ ಚುರುಕಿನಿಂದ ಮನೆಯ ಕಾರ್ಯ ನಿರ್ವಹಿಸಬೇಕು ಎಂಬ ಮನೆಯವ ಅಭಿಲಾಷೆಯನ್ನು ಪೂರ್ಣ ಮಾಡಲು ಹರ ಸಾಹಸ ಪಡುತ್ತಾಳೆ. ದೈಹಿಕವಾಗಿ ಮಾನಸಿಕವಾಗಿ ಎಷ್ಟೇ ದಣಿದಿದ್ದರೂ ಅದನ್ನು ತೋರಿಸಿಕೊಳ್ಳದೇ ತನ್ನ ಕಾರ್ಯವನ್ನು ನಿರ್ವಹಿಸಬೇಕು ಎಂಬ ಇತ್ತಡ ತಾಯಿಯ ಮೇಲೆ ಸದಾ ಇದ್ದೆ ಇದೆ.

ಮನೆಗೆಲಸ, ಮಕ್ಕಳ ಲಾಲನೆ - ಪಾಲನೆ, ಓದು - ಬರಹ, ಇದರಲ್ಲಿ ಆಕೆಗೆ ಕ್ಷಣ ಹೊತ್ತು ಪುರುಸೊತ್ತು ಇಲ್ಲದೆ ಬಳಲಿಬಸವಳಿಯುತ್ತಾಳೆ. ಪುರುಷ ಪ್ರಧಾನ ಮಾನಸಿಕತೆಯಿಂದ ತೊಳಲಾಡುತ್ತಿರುವ ಇಂದಿನ ಮಹಿಳೆಯರು ಹಿಂದಿನದನ್ನು ಸಂಪೂರ್ಣ ಬಿಡಲಾಗದೇ ಹೊಸದನ್ನು ಪಡೆದುಕೊಳ್ಳಲಾಗದೆ ದ್ವಂದ್ಯತೆಯಲ್ಲಿದ್ದಾರೆ. ಆಧುನಿಕ ಸಂಧರ್ಭದಲ್ಲಿ ಶಿಕ್ಷಣ ಪಡೆದು ವೃತಿನಿರತಳಾದ ತಾಯಿ ಸಂಕಷ್ಟಕ್ಕೆ ಸಿಲುಕಿದ್ದಾಳೆ. ಶಿಕ್ಷಣ ಮಹಿಳೆಯ ಬದುಕನ್ನು ಅಭಿವೃದ್ಧಿ ಪಡಿಸಿದ ಇದರಲ್ಲಿ ಎರಡು ಮಾತಿಲ್ಲ. ಆದರೆ ನಾಣ್ಯದ ಇನ್ನೊಂದು ಮುಖ ಇರುವಂತೆ ಆಕೆಯ ಹೊಸ ಸಮಸ್ಯೆಯ ಹಲವು ಮುಖಗಳು ಇವೆ.

ಆಧುನಿಕತೆಯ ಸಂಧರ್ಭದಲ್ಲಿ ಮಹಿಳೆಯ ಸ್ಥಿತಿ- ಗತಿ ಸುಧಾರಿಸಲು ಶಿಕ್ಷಣ ಕಾರಣವಾದಂತೆ ದೇಶದ ಸಂವಿಧಾನವೂ ಸಹ ತಾಯಿಯನ್ನೊಳಗೊಂಡಂತೆ ಮಹಿಳೆಯ ಸ್ಥಿತಿಯನ್ನು ಸುಧಾರಿಸಲು ಸಹಾಯಕವಾಗಿದೆ. ಸಮಾಜದ ಯಾವುದೇ ಬಗೆಯ ತಾರತಮ್ಯ ಇರದೇ ಎಲ್ಲರೂ ಒಂದು ಜಾತಿ, ವರ್ಗ, ವರ್ಣ, ಲಿಂಗಭೇದ ವೆನ್ನದೆ ಸಮಾನತೆಯಿಂದ ಬಾಳಬೇಕು ಎಂಬ ಉದ್ದೇಶದಿಂದ ಡಾ. ಅಂಬೇಡ್ಕರ ಅವರು ಮಹಿಳೆಯರ ವಿಮೋಚನೆಗಾಗಿ ಹಲವು ಅನುಚ್ಛೇದಗಳನ್ನು ಸಂವಿಧಾನದಲ್ಲಿ ಅಳವಡಿಸಿದರು. ಇವು ಮಹಿಳೆಯರಿಗೆ ಸ್ವಾಭಿಮಾನದ ಬದುಕನ್ನು ಬದುಕಲು ಪೂರಕವಾಗಿವೆ.ಅದರಲ್ಲೂ ತಾಯಿಯಾದ ಹೆಣ್ಣು ತನ್ನ ಸ್ವಾಭಿಮಾನವನ್ನು ಬಿಡದೇ ತಂದೆಗೆ ಸಮಾನಾದ ಹಕ್ಕನ್ನು ಪಡೆಯುವಂತೆ ಮಾಡಿದೆ. ಸಂವಿಧಾನದ ಹದಿನಾಲ್ಕನೆಯ ಅನುಚ್ಛೇದ ಭಾರತದ ನಿವಾಸಿಗಳಾದ ಎಲ್ಲರಿಗೂ ಕಾನೂನು ಒಂದೇ ಎಂಬುದನ್ನು ಸಾರುತ್ತದೆ. ಅನುಚ್ಛೇದ ಹದಿನಾರು ಹೇಳುವ ಪ್ರಕಾರ ಸರಕಾರದ ಉದ್ಯೋಗದ ಅವಕಾಶ ನೀಡುತ್ತದೆ. ಅನುಚ್ಛೇದ ವೇತನ ಕೊಡಬೇಕು ಎನ್ನುತ್ತದೆ. ಅನುಚ್ಛೇದ ನಲವತ್ತೇರಡು

ಉದ್ಯೋಗಸ್ಥ ಮಹಿಳೆಯರಿಗೆ ಹೆರಿಗೆಯ ಸಂದರ್ಭದಲ್ಲಿ ವೇತನ ಸಹಿತ ರಜೆ ಕೊಟ್ಟು ಹೆರಿಗೆಗಾಗಿ ಇನ್ನಿತರ ಸೌಲಭ್ಯಗಳನ್ನು ಒದಗಿಸುತ್ತದೆ.

ಇವು ತಾಯಂದಿರ ಬದುಕನ್ನು ಉತ್ತಮಗೊಳಿಸಲು ಸಹಕಾರಿಯಾಗಿವೆ. ಉತ್ತರಾಧಿಕಾರತ್ವದ ನೆಲೆಯಲ್ಲಿಯೂ ಸಹ ತಾಯಂದಿರಿಗೆ ಆಸ್ತಿಯ ಹಕ್ಕನ್ನು ಕೊಡಲಾಗಿದೆ. ಕುಟುಂಬದ ಯಜಮಾನ ತಿರಿಕೊಂಡರೆ ಅವನ ಪಿತ್ರಾರ್ಜಿತ ಆಸ್ತಿಗೆ ಆತನ ಮಗ, ಮಗಳು ಅಷ್ಟೇ ಅಲ್ಲ ವಿಧವಾ ಪತ್ನಿ ಮತ್ತು ತಾಯಿಯು ಉತ್ತರಾಧಿಕಾರಿಗಳಾಗುತ್ತಾರೆ. ಹಿಂದು ದತ್ತು ಕಾಯ್ದೆಯಂತೆ ಮಕ್ಕಳಿಲ್ಲದ ಮಹಿಳೆಯರು ಮಗುವೂಂದನ್ನು ದತ್ತು ಪಡೆಯಬಹುದಾಗಿದೆ. ಪ್ರಸವಪೂರ್ವ ಲಿಂಗ ಪರೀಕ್ಷೆಗಳ ಕಾಯ್ದೆ ಕೂಡ ಎಲ್ಲಕ್ಕಿಂತ ಮುಖ್ಯವಾಗಿ ಬೇಡವಾದ ಹೆಣ್ಣು ಗರ್ಭವನ್ನು ಗರ್ಭಪಾತ ಮಾಡಿಸುವ ಪ್ರಯತ್ನವನ್ನು ತಡೆಗಟ್ಟುತ್ತದೆ. ಕಾರ್ಖಾನೆಗಳ ಕಾಯ್ದೆ ಕೂಡ, ಮಕ್ಕಳ ತಾಯಂದಿರಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸುತ್ತದೆ. ಕೆಲಸ ಮಾಡುವ ಸಂಧರ್ಭದಲ್ಲಿ ಮಕ್ಕಳನ್ನು ಸಂರಕ್ಷಣೆ ಮಾಡಲು ಶಿಶು ಮಂದಿರಗಳ ವ್ಯವಸ್ಥೆಗೆ ಒತ್ತು ಕೊಡುತ್ತದೆ. ಹೀಗೆ ಕಾನೂನು ಮೂಲಕವಾಗಿ ಮಹಿಳೆ ಅಷ್ಟೇ ಅಲ್ಲ ಅಭದ್ರವಾದ ತಾಯಿಯ ಬದುಕು ಭದ್ರಗೊಳ್ಳಲು ಅವಕಾಶ ಉಂಟಾಯಿತು.

ಹೀಗೆ ಆಧುನಿಕ ಸಂಧರ್ಭದಲ್ಲಿ ತಾಯಂದಿರ ಸ್ಥಿತಿ - ಗತಿಗಳು ಶಿಕ್ಷಣ ಮತ್ತು ಕಾನೂನುಗಳ ಮೂಲಕ ಬದಲಾವಣೆ ಹಂತ ತಲುಪಿವೆ. ಸ್ವತಂತ್ರದ ನಂತರ ಬಹುಮಟ್ಟಿಗೆ ಅವರ ಜೀವನ ಸುಧಾರಿಸಿವೆ. ಸಮಾನತೆಯ ಹಾದಿ ತುಳಿಯುತ್ತ ಸಾಗಿದೆ. ಆರ್ಥಿಕವಾಗಿ ಸ್ವಾವಲಂಬಿಯಾಗಿದ್ದಾಳೆ. ಆದರೂ ಸಹ ಪರಂಪರಾಗತವಾಗಿ ರೂಢಿಯಲ್ಲಿದ್ದ ಮಾನಸಿಕ ಸ್ಥಿತಿ ಆಕೆ ಇನ್ನೂ ಪರತಂತ್ರದಲ್ಲಿ ಇರಿಸಿದೆ. ಶಿಕ್ಷಣ ಕೇವಲ ಔಪಚಾರಿಕವಾಗಿ ಪಡೆದಂತೆ ತೋರುತ್ತದೆ. ಕಾನೂನುಗಳು ಕಡತಗಳಲ್ಲಿ ಮುಚ್ಚಿ ಹೋಗಿವೆ.

ಇವುಗಳ ಸಂಪೂರ್ಣ ಉಪಯೋಗವನ್ನು ನಮ್ಮ ತಾಯಂದಿರು ಇನ್ನೂ ಪಡೆದುಕೊಂಡಿಲ್ಲ. ಹೆಣ್ಣು ಮಕ್ಕಳು ತಮ್ಮ ತಾಯಿಯಾಗುವ ಬಯಕೆಯನ್ನು ತಮ್ಮ ಸ್ವಂತ ನಿರ್ಣಯದ ಮೂಲಕ

ಇಡೇರಿಸಿಕೊಳ್ಳುವ ಸ್ಥಿತಿಯಲ್ಲಿಲ್ಲ. ಜೊತೆಗೆ ಕುಟುಂಬದ ಒಳಗೂ ಮತ್ತು ಹೊರಗೂ ದುಡಿಯುವ ಮಹಿಳೆಯರು ಎದುರಿಸುವ ದೈಹಿಕ ಹಾಗೂ ಮಾನಸಿಕ ಸವಾಲುಗಳನ್ನು ಸೂಕ್ಷ್ಮವಾಗಿ ಗಮನಿಸಬೇಕಾಗಿದೆ. ಆಧುನಿಕತೆಯ ಭರದಲ್ಲಿ ತಾಯಿಯ ಸ್ಥಿತಿ - ಗತಿ ಯಾವ ಹಂತ ತಲುಪಿದೆ. ಹೊಸ ವಿಜ್ಞಾನ, ತಂತ್ರಜ್ಞಾನ ಹೇಗೆ ತಾಯಿ ದೇಹ ಮತ್ತು ಆಕೆಯ ಗರ್ಭಾಶಯವನ್ನು ಪರಿಣಾಮ ಬೀರಿವೆ ಎಂಬುದು ತಿಳಿಸಿಕೊಳ್ಳಬೇಕು. ಬಂಜೆತನ, ಬಾಡಿಗೆ ತಾಯ್ತನ, ಪ್ರಣಾಳ ಶಿಶು, ಹದಿಹರೆಯುವ ತಾಯ್ತನ, ವಿವಾಹ ಪೂರ್ವ ತಾಯ್ತನಗಳಂತ ಸಮಸ್ಯೆಗಳಿಗೆ ಸಿಲುಕಿಕೊಂಡ ಆಧುನಿಕ ತಾಯಂದಿರ ಸ್ಥಿತಿ - ಗತಿಗಳನ್ನು ಕುಲಂಕುಶವಾಗಿ ಅರಿತುಕೊಳ್ಳಬೇಕಾಗಿದೆ. ಈ ಮೂಲಕ ಆಕೆಯ ದೈಹಿಕ ಹಾಗೂ ಮಾನಸಿಕ ಸಂಘರ್ಷಗಳನ್ನು ಗುರುತಿಸುವುದು ಇಂದು ಸಂಘರ್ಷಗಳನ್ನು ಮುಖ್ಯವಾಗಿದೆ.

## ತಾಯ್ತನದ ಸಂಘರ್ಷಗಳು

ಪ್ರಾಚೀನ ಕಾಲದಿಂದಲೂ ಒಂದಿಲ್ಲ ಒಂದು ಬಗೆಯ ಶೋಷಣೆಗೆ ಬಲಿಯಾದ ಹೆಣ್ಣು, ತನ್ನ ಕುಟುಂಬದಲ್ಲಿಯೇ ತಾರತಮ್ಯಕ್ಕೆ ಒಳಗಾಗಿದ್ದಾಳೆ. ಗಂಡನ ಮನೆಯಲ್ಲಿ ಅಷ್ಟೇ ಅಲ್ಲ ತನ್ನ ತವರಲ್ಲಿಯೂ ಸಹ ಎರಡನೇ ದರ್ಜೆಯಲ್ಲಿ ಬದುಕುತ್ತಿದ್ದಾಳೆ. ಹೆಣ್ಣೊಬ್ಬಳ ಸಮಸ್ಯೆ ಪ್ರಾರಂಭವಾಗುವುದು ಆಕೆ ಹೆಣ್ಣು ಭ್ರೂಣವಾಗಿದ್ದಾಗಿನಿಂದಲೇ ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ ಎಂಬ ತಾರತಮ್ಯ ಬದುಕಿನ ಪ್ರತಿಹಂತದಲ್ಲಿ ಅನುಭವಿಸುತ್ತಾ ಬರುತ್ತಾಳೆ. ಇಂದಿನ ಸಂದರ್ಭದ ಹೆಣ್ಣಿನ ಬದುಕು ಚಿಂತಾಜನಕವಾಗಿದೆ ಅದರಲ್ಲಿಯೂ ಕುಟುಂಬದ ನಿರ್ವಹಣೆ ಮಾಡುವ ತಾಯಿ ಹೊರಗಡೆ ಮಾಡುವ ತಾಯಿ ಹೊರಗಡೆ ಸಾಮಾಜಿಕ ಕ್ಷೇತ್ರದಲ್ಲೂ ದುಡಿಯಲು ಮುಂದಗಿದ್ದಾಳೆ ಹೀಗಾಗಿ ದ್ವಿಮುಖವಾದ ಸಮಸ್ಯೆಗಳನ್ನು ಆಕೆ ಎದುರಿಸಬೇಕಾಗಿದೆ.

ಪುರುಷಪ್ರಧಾನ ಮಾನಸಿಕತೆ ಆಧುನಿಕ ಕಾಲದಲ್ಲೂ ಸಂಪೂರ್ಣವಾಗಿ ಬದಲಾಗಿಲ್ಲ. ಪುರುಷ ಗ್ರಹಿಕೆಯ ಸಮಾಜ ಹೆಣ್ಣನ್ನು ಹಲವು ಬಗೆಯ ಸವಾಲುಗಳನ್ನು ತಂದೊಡ್ಡಿದೆ ಕುಟುಂಬದ ಜವಾಬ್ದಾರಿ ಒಂದು ಕಡೆಯಾದರೆ ಹೊರಗಡೆಯ ದುಡಿತ ಇನ್ನೊಂದು ಕಡೆ ಈ ಎರಡು ಬಗೆಯ ಒತ್ತಡ ಆಕೆಯ ಮೇಲಿದೆ ಇದರ ಜೊತೆಗೆ ಗಂಡನ ಸಂಶಯ ದೃಷ್ಟಿ ಆಕೆಯನ್ನು ಘಾಸಿಗೊಳಿಸಿವೆ. ಹೆಣ್ಣು ಸಂಸಾರಕ್ಕೆ ಮಾತ್ರ ಸೀಮಿತವಾಗಿರಬೇಕು ಎನ್ನುವ ನಿಲುವ ಬದಲಾದರೂ ಹೊರಗಡೆ ದುಡಿಯುವ ಹೆಣ್ಣು ಮನೆಯನ್ನು ನಿರ್ಲಕ್ಷಿಸ ಕೂಡದು ಎಂಬ ಅಪೇಕ್ಷೆ ಇಟ್ಟುಕೊಳ್ಳಲಾಗಿದೆ. ಮನೆ ಮತ್ತು ಹೊರಗಡೆಯ ದುಡಿತದ ಸಮತೋಲನ ಎಲ್ಲ ಸಂದರ್ಭದಲೂ ಹೆಣ್ಣಾದವಳು ಕಾಯ್ದುಕೊಳ್ಳಬೇಕು ಎಂದು ನೀರಿಕ್ಷಿಸಲಾಗುತ್ತದೆ. ಕೂದಲು ಎಳೆಯಷ್ಟು ಹೆಚ್ಚು ಕಡಿಮೆಯಾದರೂ ಹೆಣ್ಣನ್ನು ದೂಷಿಸಲಾಗುತ್ತದೆ. ಸ್ವತ: ಹೆಣ್ಣಾದವಳೂ ಸಹ ಪಶ್ಚಾತಾಪಕ್ಕೆ ಒಳಗಾಗುತ್ತಾಳೆ. ಇಬ್ಬಗೆಯ ಬದುಕನ್ನು ಸಂಭಾಳಿಸುವಲ್ಲಿ ಹೆಣ್ಣಮಕ್ಕಳು ಅದರಲ್ಲಿ ತಾಯಂದಿರು ಹರಸಾಹಸ ಮಾಡುತ್ತಿದ್ದಾರೆ.

ನಮ್ಮ ಸಮಾಜದಲ್ಲಿ ಎಲ್ಲ ವರ್ಗದ ತಾಯಂದಿರು ಒಂದಿಲ್ಲ ಒಂದು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ದಿನ ಬೆಳಗಾದರೆ ಓಲೆ ಹೊತ್ತಿಸುವುದರಿಂದ ಹಿಡಿದು ರಾತ್ರಿ ಮಲಗುವಾಗ ದೀಪ ಆರಿಸುವವರೆಗೆ ಅವರ ಬದುಕು ಸಂಘರ್ಷಮಯವಾಗಿಯೇ ಸಾಗುತ್ತಿರುತ್ತದೆ. ಶ್ರೀಮಂತ ಮನೆಯ ತಾಯಂದಿರು ಮನೆಯ ಪುರುಷನ ಇಷ್ಟದ ವೃತ್ತಿಯನ್ನು ಮಾಡಬೇಕು ಎಂಬ ನಿರ್ಭಂಧ ಇದ್ದರೆ ಅದೇ ರೀತಿ ಬಡ ಮನೆಯ ತಾಯಿ ಕೂಲಿನಾಲಿ ಮಾಡುವುದರ ಮೂಲಕ ತನ್ನ ಹಾಗೂ ತನ್ನ ಕುಟುಂಬವನ್ನು ನಿರ್ವಹಿಸುತ್ತ ಗಂಡನಾದವನು ಕುಡುಕನಾದರೂ ಸರಿ, ವಿಷಯಲಂಪಟನಾದರೂ ಸರಿ ಆತನೋಂದಿಗೆ ದಿನ ನಿತ್ಯ ದೈಹಿಕ ಹಾಗೂ ಮಾನಸಿಕ ಸಂಘರ್ಷಕ್ಕೆ ಇಳಿಯುವುದು ಸರ್ವೇಸಾಮಾನ್ಯವಾಗಿದೆ. ಮಧ್ಯಮ ವರ್ಗದ ತಾಯಂದಿರು ಕೂಡ ತನ್ನತನವನ್ನು ಹುಡುಕುವ ನೆಪದಲ್ಲಿ ತಮ ಇಡೀ ಬದುಕನ್ನು ಸಂಘರ್ಷದಲ್ಲಿ ಕಳೆಯುತ್ತಾರೆ. ಇಂದು ನಮ್ಮ ತಾಯಂದಿರು ಎದುರಿಸುವ ಸಂಘರ್ಷಗಳನ್ನು ಎರಡು ಬಗೆಯಲ್ಲಿ ಕಾಣಬಹುದಾಗಿದೆ.

- ದೈಹಿಕ ಸಂಘರ್ಷ
- ಮಾನಸಿಕ ಸಂಘರ್ಷ

- <u>ದೈಹಿಕ ಸಂಘರ್ಷ</u>

ನಮ್ಮ ಸಮಾಜದಲ್ಲಿ ತಾಯಂದಿರು ಹಲವು ಬಗೆಯ ದೈಹಿಕ ಸಂಘರ್ಷಗಳಿಂದ ಆವರಿಸಲ್ಪಟ್ಟಿದ್ದಾರೆ. ಏಕೆಂದರೆ ಮಹಿಳೆಯನ್ನು ಮುಖ್ಯವಾಗಿ ದೇಹ ಕೇಂದ್ರಿತವಾಗಿಯೇ ಗುರುತ್ತಿಸಲಾಗುತ್ತದೆ ಹೆಣ್ಣಿಂದಗರ್ಭಾಶಯ ಗರ್ಭಾಶಯವೆಂದ ಹೆಣ್ಣು ಎಂಬ ನಿಟ್ಟಿನಲ್ಲಿ ಕಾಣಲಾಗುತ್ತದೆ. ಈ ಗ್ರಹಿಕೆ ಪಿತೃಪ್ರಧಾನ ವ್ಯವಸ್ಥೆಯ ನೆಲೆಯಿಂದಲೇ ಬಂದದ್ದಾಗಿದೆ. ಮನೆಯ ನಾಲ್ಕು ಗೊಡೆಗಳಲ್ಲಿ ಬದುಕುವ ತಾಯಂದಿರು ಗಂಡ, ಮನೆ, ಮಕ್ಕಳು ಎಂದ ತನ್ನ ಬದುಕನ್ನು ಸಮರ್ಪಿಸಿದರು ಆಕೆಗೆ ಅನಾರೋಗ್ಯ ಉಂಟಾದಾಗ ಶ್ರೀಘ್ರವಾಗಿ ವೈದ್ಯಕೀಯ ತಪಾಸಣೆ ನಡೆಸುವುದಿಲ್ಲ. ಕಾರಣ ಆಕೆ ಹೆಣ್ಣು ಊಟದ ತಾರತಮ್ಯದಿಂದ ಹಿಡಿದು ಮನೆಯ ಆಸ್ತಿ ಹಂಚಿಕೆಯಲ್ಲಿಯೂ ತಾರತಮ್ಯವನ್ನು ಎದುರಿಸುತ್ತಿದ್ದಾಳೆ ತಾಯಂದಿರು ತಾಯಿಯ ಗರ್ಭದಲ್ಲಿ ಹೆಣ್ಣು ಶಿಶು ಇದೆ ಎಂದು ಗೊತ್ತಾದರೆ ಸಾಕು ಅದನ್ನು ಚಿವುಟಿ ಹಾಕಲು ಪ್ರಯತ್ನಿಸಲಾಗುತ್ತದೆ.

ಈ ಸಂದರ್ಭದಲ್ಲಿ ತಾಯಿಯ ಜೀವನಕ್ಕೆ ಕುತ್ತು ಬಂದರೂ ಸರಿ ಹಿಂಜರಿಯುವುದಿಲ್ಲ. ಈ ವ್ಯವಸ್ಥೆ ಆಧುನಿಕರೆಂದು ಕರೆಸಿಕೊಳ್ಳುವ ನಮ್ಮ ಮಧ್ಯ ರಾಜಾರೋಶವಾಗಿ ನಡೆಯುತ್ತಿರುವುದು ನಾಚಿಕೆಯ ವಿಷಯ ತಾಯಿಯಾಗಲಿರುವ ಗರ್ಭಿಣಿ ಮಹಿಳೆಯರು ಅಪೌಷ್ಠಿಕತೆಯಿಂದ ಬಳಲುತ್ತಿದ್ದಾರೆ. ಅನಾರೋಗ್ಯ ತಾಯಿಂದ ಆರೋಗ್ಯವಂತ ಸಮಾಜ ನಿರ್ಮಾಣವಾಗಬೇಕಾದರೆ ತಾಯಂದಿರು ಆರೋಗ್ಯವಂತರಾಗಿರಬೇಕು. ಕೇವಲ ತಾಯಿ ಆಗುವ

ಸಂದರ್ಭದಲ್ಲಿ ಮಾತ್ರ ಹೆಣ್ಣು ಮಕ್ಕಳ ಆರೋಗ್ಯದ ಕಡೆ ನಿಗಾ ವಹಿಸಲಾಗುತ್ತದೆ. ಆದರೆ ಹಣ್ಣಿನ ಜನನದಿಂದಲೆ ಆಕೆಯ ಆರೋಗ್ಯದ ಕಡೆ ಗಮನ ಕೊಡಬೇಕು ನಮ್ಮ ಸಮಾಜ ಪುರುಷ ಪ್ರಧಾನ ಗ್ರಹಿಕೆಯಿಂದ ಕೂಡಿದ್ದಾಗಿದ್ದರಿಂದ ನಮ್ಮ ಹೆಣ್ಣು ಮಕ್ಕಳಿಗೆ ಗಂಡುಮಕ್ಕಳ ಸರಿಸಮಾನವಾಗಿ ಆಹಾರ ಕೊಡದೆ ತಾರತಮ್ಯ ಮಾಡುವುದರಿಂದ ನಮ್ಮ ಹೆಣ್ಣುಮಕ್ಕಳು ಹಲವು ದೈಹಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಇದರ ಪರಿಹಾರಕ್ಕಾಗಿ ಸರಕಾರದ ವತಿಯಿಂದ ಆರೋಗ್ಯ ಇಲಾಖೆ ರೂಪು ಪಡೆದಿದ್ದು ಗಮನಿಸಬಹುದು ಆದರೆ '' ಸ್ತ್ರೀಯು ಮಾನವ ಜನಾಂಗವನ್ನು ರೂಪಿಸುವ ಮಾಧ್ಯಮವಾಗಿ ರುವುದರಿಂದ ಅದರ ಆರೋಗ್ಯ ಕಡೆ ಗಮನಹರಿಸಬೇಕಾಗಿದೆ ಎಂಬ ಆಲೋಚನೆಯೂ ಆರೋಗ್ಯಾಭಿವೃದ್ಧಿ ಚಿಂತನೆಯ ಹಿನ್ನೆಲೆಯಲ್ಲಿದ್ದು ಅದಕ್ಕನುಗುಣವಾಗಿ ತಾಯ್ತನದ ಹಂತದಲ್ಲಿನ ಅವಳ ದೈಹಿಕ ಮಾನಸಿಕ ಸ್ವಾಸ್ಥ್ಯಕ್ಕೆ ಗಮನಹರಿಸಲಾಯಿತು ಅಪ್ರಾಪ್ತ ವಯಸ್ಸಿನ ತಾಯ್ತನ, ಅಂತರವಿಲ್ಲದ ತಾಯ್ತನ ಇವು ಹುಟ್ಟುವ ಮಕ್ಕಳ ಸ್ಥಿತಿಗತಿಯನ್ನು ನಿರ್ಧರಿಸುವುದರಿಂದ ಅವುಗಳ ಕುರಿತಂತೆ ಕಡಿವಾಣ ಹಾಕಲು ಪ್ರಯತ್ನಿಸಲಾಯಿತು ಒಟ್ಟಿನಲ್ಲಿ ಹೆಣ್ಣು ತಾಯಿಯಾಗಿ ಮಾತ್ರ ಸಮಾಜಕ್ಕೆ ಅಮೂಲ್ಯವಾಗಿ ಕಂಡು ಬರುವುದು ಆರೋಗ್ಯದ ಸಂದರ್ಭದಲ್ಲಿಯೂ ವ್ಯಾಪಿಸಿತು. ಪರಿಣಾಮವಾಗಿ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಎಂಬ ನೆಲೆಯಿಂದಲೇ ಮಹಿಳೆಯ ಕಲ್ಯಾಣವನ್ನು ಅಧಿಕೃತಗೊಳಿಸಲಾಯಿತು. ಉಳಿದಂತೆ ಒಬ್ಬ ಮಾನವ ಜೀವಿಯಾಗಿ ಆಕೆಯ ಆರೋಗ್ಯ ನಿರೀಕ್ಷೆ ಹಾಗೂ ಲಿಂಗ ತಾರತಮ್ಯದ ಕಾರಣದಿಂದ ಅದು ಸೃಷ್ಟಿಗೊಳ್ಳುವ ನೆಲೆಯ ಕುರಿತಂತೆ ಯಾವುದೇ ಗಮನಾರ್ಹ ಚರ್ಚೆ ಕಾರ್ಯಕ್ರಮ ರೂಪುಗೊಳ್ಳಲಿಲ್ಲ. ''[೧] ಅಂದರೆ ಮಹಿಳೆಯನ್ನು ಉತ್ಪಾದಕ ಘಟಕವಾಗಿ ಮಾತ್ರ ಪ್ರಾಮುಖ್ಯತೆ ಕೊಡಲಾಯಿತೆ ಹೊರತು, ಮಾನವೀಯ ನೆಲೆಯಲ್ಲಿ ಕಾಣಲೇ ಇಲ್ಲ. ಅದೇನೆ ಇದ್ದರೂ ನಮ್ಮ ತಾಯಂದಿರ ಅನಾರೋಗ್ಯಕ್ಕೆ ಹಲವಾರು ಕಾರಣಗಳಿವೆ ಅವುಗಳಲ್ಲಿ ಮುಖ್ಯವಾದವುಗಳೆಂದರೆ.

* ಪುರುಷ ಪ್ರಧಾನ ಮಾನಸಿಕತೆ
* ಲಿಂಗ ತಾರತಮ್ಯ
* ಮೂಢ ನಂಬಿಕೆಗಳು ಗೊಳ್ಳು ಆಚರಣೆಗಳು
* ವಿವಾಹ ಮತ್ತು ಕುಟುಂಬಕ್ಕೆ ಬದ್ಧರಾಗಿರಬೇಕು ಎಂಬ ಗ್ರಹಿಕೆ
* ಶಿಕ್ಷಣದ ಕೊರತೆ ಮತ್ತು ಆರ್ಥಿಕ ಕೊರತೆ
* ಮನೆಯ ಒಳ ಮತ್ತು ಹೊರಗಡೆಯ ಅವಿರತವಾಗಿ ದುಡಿಯುವುದು
* ತಾಯ್ತನವೆಂಬುದು ಸ್ತ್ರೀಯ ಧರ್ಮ ಇದು ನೆರವೇರಲೇಬೇಕು ಎಂಬ ಕಟ್ಟಪ್ಪಣೆ.

ಇಂಥಹ ಹಲವು ವಿಷಯಗಳು ನಮ್ಮ ತಾಯಂದಿರಿಗೆ ಅನಾರೋಗ್ಯದ ಕಡೆ ನೂಕುತ್ತಿವೆ. ನಮ್ಮ ಸಮಾಜದಲ್ಲಿ ಬಹುತೇಕವಾಗಿ ಕುಟುಂಬಗಳೇ ನಮ್ಮ ತಾಯಂದಿರಿಗೆ ಹಿಂಸೆ ಕೊಡುವ ತಾಣಗಳಾಗಿವೆ. ಶಿಕ್ಷಣ, ಉದ್ಯೋಗ ಪಡೆದು ಇಂದು ಸಮಾನತೆಯ ಹೋರಾಟಕ್ಕೆ ಇಳಿದರೂ ಆಕೆಯ ಮೇಲಿನ ಶೋಷಣೆ ತಪ್ಪಿಲ್ಲ. ಹಲವು ಸಂಘರ್ಷಕ್ಕೆ ಇಡಾದ ನಮ್ಮ ತಾಯಂದಿರು ಹಲವು ರೋಗಗಳಿಗೆ ಬಲಿಯಾಗುತ್ತಿದ್ದಾರೆ. "ದಕ್ಷಿಣ ಭಾರತದ ನಾಲ್ಕು ರಾಜ್ಯಗಳಲ್ಲಿ ಮಹಿಳಾ ಆರೋಗ್ಯದ ದೃಷ್ಟಿಯಿಂದ ಕರ್ನಾಟಕ ಕೊನೆಯ ಸ್ಥಾನದಲ್ಲಿದೆ. ಇಲ್ಲಿನ ಶೇ. ೩೦ ರಷ್ಟು ಮಹಿಳೆಯರು ಪ್ರತಿದಿನ ತಾವು ತ್ತಿನ್ನಬೇಕಾದ ಸರಾಸರಿ ಆಹಾರದಲ್ಲಿ ಅರ್ಧದಷ್ಟು ಕೂಡ ಪಡೆಯಲಾರದ ಸ್ಥಿತಿಯಲ್ಲಿ ಇದ್ದಾರೆ. ಪುರುಷರ ಆರೋಗ್ಯಕ್ಕೆ ಸಿಗುವ ನಿಗಾ ಹೆಣ್ಣು ಮಕ್ಕಳ ಆರೋಗ್ಯಕ್ಕೆ ಸಿಕ್ಕುವುದಿಲ್ಲ ಎಂಬುದು ಸರ್ವವಿಧಿತ ಹಣಗಳಿಸುವ ಮಹಿಳೆ ಕೂಡ ಸಾಮಾನ್ಯವಾಗಿ ಅದನ್ನು ತನ್ನ ಮಕ್ಕಳ ಆರೋಗ್ಯದ ಹಾಗೂ ಶಿಕ್ಷಣಕ್ಕೆ ಬಳಸುತ್ತಾಳೆ. ತನ್ನ ಆರೋಗ್ಯದ ಕಡೆಗೆ ಕಾಳಜಿ ಮಾಡುವಷ್ಟು ಸಮಯ ಹಾಗೂ ಹಣ ಹೆಚ್ಚಿನ ಮಹಿಳೆಯರಲ್ಲಿ ಇರುವುದಿಲ್ಲ."[೨] ಇದು ಲಿಂಗ ತಾರತಮ್ಯ ಸ್ತ್ರೀ ಪುರುಷರ ಮಾನಸಿಕತೆಯಲ್ಲಿ ಹುದುಗಿಕೊಂಡಿರುವುದಕ್ಕೆ ಸಾಕ್ಷಿ. ಇದು ನೇರವಾಗಿ ನಮ್ಮ ತಾಯಂದಿರ ಆರೋಗ್ಯವನ್ನು ಪ್ರಭಾವಿಸಿದೆ. ಗರ್ಭಿಣಿ ಹೆಣ್ಣು ಮಕ್ಕಳ ನಾನಾ ರೀತಿಯ ಸೊಂಕುಗಳಿಗೆ ಬಲಿಯಾಗುತ್ತಾರೆ. ರಕ್ತಹಿನತೆ, ಗರ್ಭಪಾತ, ಹೆರಿಗೆಯ ಸಂದರ್ಭಗಳು ತಾಯಂದಿರ ಜೀವಕ್ಕೆ ಕುತ್ತಾಗಿವೆ. ಸಮಾಜಕ್ಕೆ ಬೇಕಾಗಿರುವುದು ಆರೋಗ್ಯವಂತ ಮಗು ಆದರೆ ಮಗುವನ್ನು ಜನ್ಮಕೊಡುವ ತಾಯಿಯ ಆರೋಗ್ಯ ನಿರ್ಲಕ್ಷಿಸಲಾಗುತ್ತದೆ. ಇನ್ನೊಂದೆಡೆ ಹೆಣ್ಣಿನ ಗರ್ಭವು ಇಂದು ವೈದ್ಯರ ಪರಿಕ್ಷಾ ಕೇಂದ್ರವಾಗಿದೆ. ಹಾನಿಕಾರಣವಾದ ಮಾತ್ರೆಗಳನ್ನು ರಾಜಾರೋಷವಾಗಿ ಮಾರುವುದು ಗರ್ಭ ನೀರೋಧಕ ಮಾತ್ರೆಗಳ ಬಳಕೆ ಅಡ್ಡ ಪರಿಣಾಮ ಹೀಗೆ ಮುಂತಾದ ಕಾರಣಗಳು ಆಕೆಯ ದೇಹವನ್ನು ಜಾಲಾಡಿವೆ.

ಬೇಡವಾದ ಗರ್ಭಕ್ಕೆ ಅವೈಜ್ಞಾನಿಕ ರೀತಿಯನ್ನು ಬಳಸುವುದು ತಾಯಿಯ ಪ್ರಾಣಕ್ಕೆ ಸಂಚಕಾರ ತರುತ್ತದೆ. ಸಾಮಾನ್ಯವಾಗಿ ಇಂದು ಕಂಡು ಬರುವ ಸಾಮಾನ್ಯ ರೋಗಗಳು ನಮ್ಮ ತಾಯಂದಿರನ್ನು ದೈಹಿಕವಾಗಿ ಛಿದ್ರವಿಛಿದ್ರಮಾಡಿವೆ "ನಮ್ಮ ದೇಶದಲ್ಲಿ ಹೆಚ್ಚಾಗಿರುವ ತಾಯಿಯರ ಮರಣ ಸಂಖ್ಯಾ ಪ್ರಮಾಣಕ್ಕೆ ಮೊಟ್ಟ ಮೊದಲ ಐದು ಕಾರಣಗಳೆಂದರೆ ಕ್ರಮವಾಗಿ , ಬಸಿರು ಹಾಗೂ ಹೆರಿಗೆಯ ನಂತರದ ರಕ್ತಸ್ರಾವ, ರಕ್ತ ಹೀನತೆ , ರಕ್ತನಂಜೇರುವಿಕೆ ಹೇರಿಗೆಯ ನಂತರದ ಸೋಂಕುಗಳು ಮತ್ತು ಗರ್ಭಪಾತಗಳಾಗಿವೆ."[೩] ಇವು ನಮ್ಮ ತಾಯಂದಿರೆ ಸಾವಿಗೆ ದೂಡುವ ಅಸ್ತ್ರಗಳಾಗಿವೆ. ಅದಕ್ಕಾಗಿ ನಮ್ಮ ಜನಪದರು ಹೆತ್ರೊ ಸತ್ರೊ ಎಂದು ಉಧ್ಗಾರ ತೆಗೆಯುತ್ತಾರೆ ತಾಯಿಯಾಗುವುದೆಂದರೆ. ಮರುಜನ್ಮ ಪಡೆದಂತೆ ಎನ್ನುತ್ತಾರೆ. ಸಾಮಾನ್ಯವಾಗಿ ನಮ್ಮ ತಾಯಂದಿರಿಗೆ ರೋಗಗಳನ್ನು ಎರಡು ಬಗೆಯಾಗಿ ಗುರುತ್ತಿಸಬಹುದು.

1 ಗರ್ಭ ನಿರೋಧಕ ಔಷಧಿ ಶಸ್ತ್ರಚಿಕಿತ್ಸೆಯಿಂದಾಗುವ ಆರೋಗ್ಯ ಸಮಸ್ಯೆ

2 ಬಸಿರು ಸಂಭಂದಿ ರೋಗಗಳು

3 ಸಾಮಾನ್ಯವಾಗಿ ಕಾಡುವ ರೋಗಗಳು

ಆಧುನಿಕ ಕಾಲದಲ್ಲಿ ತಾಯಂದಿರು ಗರ್ಭ ನಿರೋಧಕ ಔಷದಿಗಳನ್ನು ಬಳಸುತ್ತಿದ್ದಾರೆ ಇವುಗಳ ಬಳಕೆಯಿಂದ. ಹಲವು ರೋಗ ಬಗೆಯ ತೊಂದರೆಯನ್ನು ಅನುಭವಿಸುವಂತಾಗಿದೆ. ತಾಯಂದಿರ ಆರೋಗ್ಯ ಹಿತದೃಷ್ಟಿಯಿಂದ ಯಾವುದೇ ಬಗೆಯ ಗರ್ಭ ನಿರೋಧಕವನ್ನು ವೈದ್ಯರ ಸಲಹೆ ಇಲ್ಲದೆ ಬಳಸಬಾರದು ಆದರೆ ಕುಟುಂಬದಲ್ಲಿ ಮಹಿಳೆಯರ ಹಿತಾಸಕ್ತಿಯನ್ನು ಕಡೆಗಣಿಸಿ ತಮಗೆ ಬೇಕೆಂದಾಗ ಔಷಧಿಗಳನ್ನು ಬಳಸುವ ಪುರುಷರು ಆಕೆಯು ಆರೋಗ್ಯವನ್ನು ಸಂಪೂರ್ಣವಾಗಿ ಕಡೆಗಣಿಸುತ್ತಾರೆ. ಸಂತಾನ ನಿರೋಧಕ ಶಸ್ತ್ರ ಚಿಕಿತ್ಸೆಯನ್ನು ಪುರುಷರಿಗೆ ತೊಂದರೆಗಳಿಲ್ಲಲ್ಲ ಮಾಡಬಹುದಾಗಿದೆ ಮಹಿಳೆಯರಿಗೆ ಸಂತಾನ ನಿರೋಧಕ ಶಸ್ತ್ರ ಚಿಕಿತ್ಸೆಗೆ ಒಳಪಡಿಸುವುದರಿಂದ ಅವರು ಶಕ್ತಿಹೀನತೆಯಿಂದ ಬಳಲುತ್ತಾರೆ.

ತಾಯಂದಿರು ಸಂತಾನ ನಿರೋಧಕ ಶಸ್ತ್ರಚಿಕಿತ್ಸೆ ಗರ್ಭನಿರೋಧಕಗಳಿಗೆ ಗರ್ಭನಿರೋಧಕ ಚುಚ್ಚುಮದ್ದು ಮುಂತಾದವುಗಳನ್ನು ಬಳಸುವುದರಿಂದ ಅವರ ದೇಹದ ಮೇಲೆ ಹಲವು ದುಷ್ಪರಿಣಾಮ ಉಂಟಾಗುತ್ತದೆ. ಇವು ತಾಯಿಯ ನಿಶ್ಯಕ್ತತೆಗೆ ಕಾರಣವೂ ಆಗಿವೆ. ತಾಯಂದಿರ ನೋವು, ಸಮಸ್ಯೆಗಳು ಹಲವು ಆದರೆ ದುರದುಷ್ಟ ವಶಾತ ಅದಕ್ಕೆ ಹೆಚ್ಚಿನ ಗಮನವನ್ನು ಕುಟುಂಬದವರು ಕೊಡುವುದಿಲ್ಲ. ತಾಯಿಯ ಅನಾರೋಗ್ಯಕ್ಕೆ ಕುಟುಂಬ, ಸಮಾಜ ಹಾಗೂ ನಮ್ಮ ಸಂಸ್ಕೃತಿಕ ಬದುಕು ಕಾರಣವಾಗಿದೆ ಎನ್ನಬಹುದು. ಸಾಮಾಜಿಕ ಆಚರಣೆಗಳು ಗೊಡ್ಡು ಸಂಪ್ರದಾಯಗಳು, ಪೂರ್ವಾಗ್ರಹಪಿಡಿತದಿಂದ ಕೂಡಿದ ಆಲೋಚನೆಗಳು ತಾಯಿಯನ್ನು ಆರೋಗ್ಯದ ವ್ಯಾಪ್ತಿಯಿಂದ ಹೊರಗುಳಿಯುವಂತೆ ಮಾಡಿವೆ.

ಒಬ್ಬ ಆರೋಗ್ಯವಂತ ತಾಯಿಂದ ಮಾತ್ರ ಆರೋಗ್ಯವಂತ ಮಗುವಿನಿಂದ ಜನನ ಸಾಧ್ಯ. ಹಾಗೇ ಆರೋಗ್ಯವಂತ ಮಗುವಿನಿಂದ ಮಾತ್ರ ಸದೃಡ ಸಮಾಜ ನಿರ್ಮಾಣ ಮಾಡಲು ಸಾಧ್ಯ ಎಂಬುವುದನ್ನು ಮನದಟ್ಟು ಮಾಡಿಕೊಳ್ಳಬೇಕು ನಮ್ಮಲ್ಲಿ ತಾಯಂದಿರ ಆರೋಗ್ಯವನ್ನು ಎಷ್ಟರ ಮಟ್ಟಿಗೆ ನಿರ್ಲಕ್ಷಿಸಲಾಗುತ್ತದೆ ಎಂದರೆ "ರಾಷ್ಟ್ರೀಯ ಕುಟುಂಬ ಆರೋಗ್ಯ ಸರ್ವೇಕ್ಷಣೆಯ ಪ್ರಕಾರ ೧೯೯೦ರ ದಶಕದ ಮೊದಲ ಅರ್ಧದ ಅವದಿಯಲ್ಲಿ ಸುಮಾರು ೧,೧೧,೦೦೦ ಮಹಿಳೆಯರು ಪ್ರತಿವರ್ಷ ಬಸಿರು ಮತ್ತು ಹೆರಿಗೆಗೆ ಸಂಭಂದಿಸಿದ ಕಾರಣಗಳಿಂದ ಮರಣವನ್ನಪ್ಪುತ್ತಿದ್ದುದು ವರದಿಯಾಗಿದೆ. ಇತ್ತೀಚಿನ ಇನ್ನಿತರ ವರದಿಗಳ ಪ್ರಕಾರ ಈ ರೀತಿ ಪ್ರತಿವರ್ಷ ಸಾಯುವ ಮಹಿಳೆಯರ ಸಂಖ್ಯೆ ೧,೨೫,೦೦೦ಕ್ಕೆ ಏರಿದೆ. ವಿಶ್ವಬ್ಯಾಂಕಿನ ಇನ್ನೊಂದು ವರದಿಯಂತೆ ನಮ್ಮ ದೇಶದ ಬಸುರಿಯರಲ್ಲಿ ಸುಮಾರು ೮೮% ಮಂದಿ ರಕ್ತಹೀನತೆಯಿಂದ ಬಳಲುತ್ತಿದ್ದು, ಇದು ನಮ್ಮ ದೇಶದ ಮಹಿಳೆಯರ ಆರೋಗ್ಯ ಹಾಗೂ ಆಹಾರ ಪೋಷಣಾ

ಸ್ಥಿತಿಗಳಿಗೆ ಹಿಡಿದ ಕೈಗನ್ನಡಿಯಾಗಿದೆ.ಬಸುರಿನ ಅವಧಿಯಲ್ಲಿ ಹಾಗೂ ಹೆರಿಗೆಯಲ್ಲಿ ಸಾಯುವ ಮಹಿಳೆಯರಲ್ಲಿ ಶೇಕಡಾ ೨೦ ಕ್ಕಿಂತ ಹೆಚ್ಚು ಮಂದಿ ರಕ್ತಹೀನತೆಯಿಂದ ಸಾಯುತ್ತಾರೆ ಎಂಬುದನ್ನು ಇಲ್ಲಿ ಗಮನಿಸಬೇಕು. ಅಷ್ಟೇ ಅಲ್ಲದೆ, ಬಸಿರು ಮತ್ತು ಹೆರಿಗೆಯ ನಂತರದ ಅವಧಿಯಲ್ಲಿ ರಕ್ತಸ್ರಾವದಿಂದ ೨೩%ರಷ್ಟು ಮಹಿಳೆಯರು ಸಾವಿಗೆ ತುತ್ತಾಗುತ್ತಾರೆ ಎನ್ನುವುದೂ ನಮ್ಮ ಮಹಿಳೆಯರ ಆರೋಗ್ಯ ಎಷ್ಟರ ಮಟ್ಟಿಗೆ ನಿರ್ಲಕ್ಷಿಸಲ್ಪಟ್ಟಿದೆ ಎಂಬುದನ್ನು ಎತ್ತಿತೋರುತ್ತದೆ "[೪] ಇದರಿಂದ ನಮ್ಮ ತಾಯಂದಿರ ಆರೋಗ್ಯದ ಸ್ಥಿತಿ ಹೇಗಿದೆ ಎಂಬ ಊಹಿಸಿಕೊಳ್ಳಬಹುದಾಗಿದೆ.

ಒಂದು ಹೆಣ್ಣು ಮಗು ಹುಟ್ಟಿತೆಂದರೆ ಸಾಕು ಆ ಮನೆ ಎಲ್ಲ ಬಗೆಯ ಸೌಲತ್ತುಗಳಿಂದ ವಂಚಿತಳಾಗಿಯೆ ಬೆಳೆಯುತ್ತಾಳೆ. ಲಿಂಗ ತಾರತಮ್ಯವೆಂಬ ಭೂತ ಆಕೆಯ ಜೀವನವನ್ನು ವ್ಯಾಪಿಸಿ ಆಕೆ ತಾಯಿ ಆಗಬೇಕು ಎಂಬ ಉದ್ದೇಶದಿಂದಲೇ ಬೆಳೆಸಲಾಗುತ್ತದೆ. ಆದರೆ ಆರೋಗ್ಯವನ್ನು ಸಂಪೂರ್ಣವಾಗಿ ಕಡೆಗಣಿಸಲಾಗುತ್ತದೆ. ಆದರೆ ಆರೋಗ್ಯವನ್ನು ಸಂಪೂರ್ಣವಾಗಿ ಕಡೆಗಣಿಸಲಾಗುತ್ತದೆ. ಉತ್ತಮವಾದ ಆಹಾರದ ಕೊರತೆಯಿಂದ ಜೀವನ ಪರ್ಯಂತ ಅನಾರೋಗ್ಯಕ್ಕೂ ಅಪೋಷಣೆಗೂ ತುತ್ತಾಗುವ ಅಪಾಯಗಳನ್ನು ಹೊತ್ತುಕೊಂಡೇ ಹುಟ್ಟುತ್ತವೆ. ಹೀಗೆ ಸ್ತ್ರೀಯರ ಅನರೋಗ್ಯದ ವಿಷವರ್ತುಲ ಒಂದು ತಲೆಮಾರಿನಿಂದ ಇನ್ನೊಂದಕ್ಕೆ ಮುಂದುವರೆಯುತ್ತಲೇ ಹೋಗುತ್ತದೆ.''[೫] ಹೀಗಾಗಿ ತಾಯಂದಿರ ದೈಹಿಕ ಆರೋಗ್ಯದ ಸಂಘರ್ಷಗಳು ಸಾಗುತ್ತಲೇ ಇವೆ.

ಮಹಿಳೆಯ ಅನಾರೋಗ್ಯಕ್ಕೆ ಕಾರಣವಾಗುವ ಹಲವು ಮುಖ್ಯ ಕಾರಣಗಳಲ್ಲಿ ಆಕೆ ತಾಯಿಯಾಗುವ ಪ್ರಕ್ರೀಯೆಯು ಒಂದಾಗಿದೆ. ನಮ್ಮ ತಾಯಂದಿರು ಅದರಲ್ಲಿಯೂ ಬಡಕುಟುಂಬದ ತಾಯಂದಿರ ಆರೋಗ್ಯ ಸಮಸ್ಯೆ ಇನ್ನೂ ಹೆಚ್ಚಾಗಿಯೇ ಇವೆ. ಸಾಮಾನ್ಯವಾಗಿ ತಾಯಂದಿರಿಗೆ ಕಾಡುವ ರೋಗಗಳೆಂದರೆ ಗರ್ಭಾಶಯಕ್ಕೆ ತಗಲುವ ಸೋಂಕುಗಳು. ಇದು ನಮ್ಮ ತಾಯಂದಿರಲ್ಲಿ ವ್ಯಾಪಕವಾಗಿ ಹರಡು ರೋಗವಾಗಿದೆ. ತಿಂಗಳಿಗೆ ಬರುವ ಮುಟ್ಟಿನ ಪರಿಣಾಮವಾಗಿ ಹೊಟ್ಟೆ, ಬೆನ್ನು ನೋವು, ಕೈಕಾಲುಗಳ ಸೆಳೆತದಿಂದ ಜರ್ಜರಿತಳಾಗುತ್ತಾಳೆ. ಸೋಂಕು ತಗಲುವ ಮುಖ್ಯಕಾರಣ ಲೈಂಗಿಕ ಸಂಪರ್ಕ. ಗರ್ಭ ನೀರೋಧಕಗಳ ಬಳಕೆಯು ಕಾರಣವಾಗಬಹುದಾಗಿದೆ.ಹೆಚ್,ಐ,ವಿ ಯಂತಹ ಭಯಂಕರ ರೋಗಗಳು ತನಗೂ ತನ್ನ ಹುಟ್ಟುವ ಮಗುವಿಗೂ ರೋಗ ತಗಲುವ ಸಾಧ್ಯತೆ ಹೆಚ್ಚಾಗಿಯೇ ಇರುತ್ತದೆ. ಅದಲ್ಲದೆ ಗರ್ಭಕೋಶಕ್ಕೆ ಆಗುವ ಕ್ಯಾನ್ಸರ ಸ್ತನ ಕ್ಯಾನ್ಸರಗಳಂತಹ ಪೂರಕ ರೋಗಗಳು ಕೂಡ ನಮ್ಮ ತಾಯಂದಿರನ್ನು ಕಾಡುತ್ತಿದೆ.

ಬಹುತೇಕವಾಗಿ ತಾಯಂದಿರು ತಮ್ಮ ಆರೋಗ್ಯವನ್ನು ಕಡೆಗಣಿಸುತ್ತಾರೆ. ಆರೋಗ್ಯದಿಂದ ಬದುಕಬೇಕು ಎಂಬ ಸಾಮಾನ್ಯ ಅರಿವು ಇದ್ದರೂ ಅದನ್ನು ಕಡೆಗಣಿಸುತ್ತಾರೆ ಕುಟುಂಬದ ಎಲ್ಲ ಸದಸ್ಯರ ಆರೋಗ್ಯ ನೋಡಿಕೊಳ್ಳುವ ತಾಯಿ ಸ್ವತ: ತನ್ನ ಆರೋಗ್ಯದ ಕುರಿತು ಗಂಭೀರವಾಗಿ

ಆಲೋಚಿಸದಿರುವುದು ವಿಪರ್ಯಾಸವೇ ಸರಿ. ತನ್ನ ದಿನ ನಿತ್ಯ ಜೀವನ ಕ್ರಮ ಹಾಗೂ ಆಹಾರ ಸೇವಿಸುವ ಕ್ರಮದ ಕಡೆ ಗಮನ ಕೊಡಬೇಕು. ಸ್ವಚ್ಛತೆಯ ಬಗ್ಗೆ ಜಾಗ್ರತಳಾಗಬೇಕು. ತಾನು ಸ್ವಸ್ಥಳಾಗಿದ್ದರೆ ತನ್ನ ಮಗು, ಕುಟುಂಬ, ಸಮಾಜ ಸ್ವಸ್ಥವಾಗಿರಲು ಸಾದ್ಯ ಎಂಬುದನ್ನು ಎಲ್ಲರೂ ಅರಿತು ಕೊಳ್ಳಬೇಕು ಆ ಮೂಲಕ ತಾಯಂದಿರಿಗೆ ಅವಕಾಶ ಕಲ್ಪಿಸಿಕೊಡಬೇಕು. ಅನಾದಿ ಕಲದಿಂದಲೂ ಮಹಿಳೆಯರ ಸಂಘರ್ಷಗಳು ಜೀವನದ ಎಲ್ಲ ನೆಲೆಗಳಲ್ಲಿ ಕಂಡು ಬಂದಿದೆ ವ್ಯಯಕ್ತಿಕವಾಗಿ ಸಾಮುದಾಯಿಕವಾಗಿಯೂ ಮಹಿಳೆಯರಲ್ಲಿ ಅನೇಕ ಬಗೆಯ ಬದಲಾವಣೆ ಕಂಡರೂ ಸಾಂಪ್ರದಾಯಿಕ, ಮೌಢ್ಯದ ಬದುಕನ್ನು ತ್ಯಜಿಸಿದರೂ, ಹಿಂದಿನಿಂದ ಬಂದ ಸಾಮಾಜಿಕ ವ್ಯವಸ್ಥೆಯಿಂದ ಸಂಪೂರ್ಣವಾಗಿ ಹೊರಬರಲಾರದೆ ಹಲವು ಬಗೆಯ ಸಮಸ್ಯೆಗಳಿಗೆ ಗುರಿಯಾಗುತ್ತಿದಾಳೆ. ಮಹಿಳೆ ತಾಯಿಯಾಗಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಂಕಟಕ್ಕೆ ಬಲಿಯಾಗಿ ತತ್ತರಿಸಿ ಹೋಗಿದ್ದಾಳೆ.

ಗ್ರಾಮೀಣ ತಾಯಂದಿರ ದೈಹಿಕ ಸಂಘರ್ಷಗಳು ನಗರ ಸಮುದಾಯದ ತಾಯಂದಿರ ಬದುಕನ್ನು ಆವರಿಸಿಕೊಂಡಿರುವುದು ದುಷ್ಕಕರ ಆಧುನಿಕ ಕಾಲದಲ್ಲಿ ಮಹಿಳೆ ತಾಯಿಯಾಗಿ ಸಬಲೆ ಅಲ್ಲ ಅಬಲೆಯಾಗಿಯೇ ಬದುಕುತ್ತಿದ್ದಾಳೆ ಹಳ್ಳಿಗಳಲ್ಲಿ ತಾಯಂದಿರ ಸ್ಥಿತಿ ಚಿಂತಾಜನಕವಾದರೆ ನಗರಗಳಲ್ಲಿ ಇನ್ನೊಂದು ಬಗೆಯ ಚಿಂತೆ ಕಾಡುತ್ತಿದೆ ನೀರಿನ ಅಭಾವ, ಕಳಪೆ ಪರಿಸರ, ಕಳಪೆ ಆಹಾರ, ಹಣದ ಕೊರತೆ, ವೈದ್ಯಕೀಯ ಸೌಲಭ್ಯಗಳ ಕೊರತೆಯಿಂದಾಗಿ ಹಳ್ಳಿಯಲ್ಲಿರುವ ತಾಯಂದಿರ ಆರೋಗ್ಯ ಹದೆಗೆಡುತ್ತಿದ್ದರೆ, ನಗರದ ತಾಯಂದಿರು ಸಹ ಪರಿಸರ ಮಾಲಿನ್ಯ, ಉದ್ಯೋಗದ ಒತ್ತಡ, ಮನೆಗೆಲಸದ ಆಯಾಸ, ಮಕ್ಕಳ ಮಧ್ಯ ಅಂತರ ವಿರಲು ಬಳಸುವ ಕುಟುಂಬ ಯೋಜನೆಗಳ ಅನಿಯಮಿತ ಬಳಕೆಯಿಂದಾಗಿ ಮತ್ತು ತಾಯಿಯಾದವಳು ತನ್ನ ಕುಟುಂಬವನ್ನು ನೋಡಿಕೊಳ್ಳುವುದರಲ್ಲಿ ನಿರತಳಾಗಿ ತನ್ನ ದೈಹಿಕ ಆರೋಗ್ಯವನ್ನು ನಿರ್ಲಕ್ಷಿಸುವುದು ಸರ್ವೇ ಸಾಮಾನ್ಯವಾಗಿ ಕಂಡು ಬರುತ್ತದೆ.

ಮನೆಯಲ್ಲಿ ಮಕ್ಕಳ ಲಾಲನೆ, ಪಾಲನೆ, ಪೋಷಣೆ, ಸ್ವಚ್ಛತೆ, ಅಡಿಗೆ, ಮನೆಗೆಲಸ ಹೀಗೆ ಹಲವು ಬಗೆ ಕೌಟುಂಬಿಕ ಕಾರ್ಯಗಳಲ್ಲಿ ತಲ್ಲಿನಳಾಗಿ ತಾಯಿ ತನ್ನ ಆರೋಗ್ಯವನ್ನು ಕಡೆಗಣಿಸುತ್ತ ಸಾಗಿದ್ದಾಳೆ. "ಸ್ತ್ರೀ ಅಮ್ಮ ನಾಗುವ ಪ್ರಕ್ರಿಯೆ ಜಗತ್ತಿನ ಅದ್ಭುತಗಳಲ್ಲೊಂದು ಅತೀವ ನೋವು, ಅತೀವ ಸಂತೋಷಗಳೆರಡೂ ಮೇಳೈಸಿರುವ ಜನನದ ಸಮಯದ ವಿಶಿಷ್ಟಭವನೆ ಸ್ತ್ರೀ ಗೆ ಬೇಡದ ಗರ್ಭಪಾತಗಳು, ಅಸುರಕ್ಷಿತ ಹೆರಿತ - ತಯ್ತನ, ಮಾತೃ ಮರಣ ಹೀಗೆ ವಿವಿಧ ರೂಪಗಳಲ್ಲಿ ಶಾಪವಾಗಿಯೇ ಪರಿಣಮಿಸಿದೆ. ವಿಶ್ವದ ಪ್ರತಿ ೬೩೦೦ ಹುಡುಗಿಯರಿಗೆ ಹೋಲಿಸಿ ನೋಡಿದರೆ ಪ್ರತಿ ೭೦ ಭಾರತೀಯ ಹುಡುಗಿಯರಲ್ಲಿ ಒಬ್ಬರು ಗರ್ಭಧರಿಸುವಿಕೆಯಿಂದ ಸಾವನ್ನಪ್ಪುತ್ತಾರೆ. ಅಷ್ಟೇ ಅಲ್ಲ, ಅಮ್ಮ ನಾಗುವ ಅರ್ಹತೆಗೆ ದೇಹ -ಮನಸ್ಸುಗಳು ಏರುವ ಮೊದಲೇ ತಾಯ್ತನದ ನೋವುಗಳಿಗೆ ತುತ್ತಾಗುತ್ತಾರೆ. "[೬] ಎಂಬುದನ್ನು ಗನನಿಸಬೇಕು

• <u>ಮಾನಸಿಕ ಸಂಘರ್ಷ</u>

ದೈಹಿಕ ಅನಾರೋಗ್ಯದಿಂದ ಮಾನಸಿಕ ಅನಾರೋಗ್ಯಕ್ಕೆ ಆಸ್ಪದ ಕೊಡುತ್ತದೆ. ದೇಹ ಆರೋಗ್ಯದಿಂದ ಇದ್ದರೆ ನಮ್ಮ ಮನಸಿಕ ಸ್ಥಿತಿಯೂ ಆರೋಗ್ಯವಗಿರುತ್ತದೆ. ಹೆಣ್ಣಿರಲಿ ಗಂಡಿರಲಿ ಆತನ ಏಳಿಗೆ ಅವನ ಆರೋಗ್ಯದ ಮೇಲೆ ನಿಂತಿರುತ್ತದೆ. ನಮ್ಮ ತಾಯಂದಿರು ದೈಹಿಕವಾಗಿ ಆರೋಗ್ಯ ಸಮಸ್ಯೆಯನ್ನು ಎದುರಿಸುವ ಹಾಗೆ ಮಾನಸಿಕ ಆರೋಗ್ಯ ಸಮಸ್ಯೆಯನ್ನು ಎದುರಿಸುತ್ತಿದ್ದಾಳೆ. ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವ ತಾಯಂದಿರನ್ನು ಹಾಗೂ ಕುಟುಂಬದ ಜೊತೆಗೆ ಹೊರಗಡೆ ದುಡಿಯುವ ತಾಯಿಯ ಮನಸ್ಥಿತಿಯನ್ನು ಕುಟುಂಬದ ಇತರ ಸದಸ್ಯರು ಗಮನಿಸುವುದೇ ಇಲ್ಲ ಯಾವುದೇ ವ್ಯಕ್ತಿಯ ಮಾನಸಿಕ ಬೆಳವಣಿಗೆ ವ್ಯಕ್ತಿತ್ವ ವಿಕಾಸ ಆ ವ್ಯಕ್ತಿ ಬದುಕುವ ಪರಿಸರ ಸಮಾಜದ ಮೇಲೆ ನಿಂತಿರುತ್ತದೆ.

ಮೊದಲ ಸಲ ತಾಯಿ ಆಗುತ್ತಿರುವ ಹೆಣ್ಣಿನ ಮಾನಸಿಕ ಸ್ಥಿತಿ ವಿಷಮ ಸ್ಥಿತಿಯಲ್ಲಿರುತ್ತದೆ. "ತಾನೇ ತಾಯಿಯಾಗುತ್ತಿರುವುದರಿಂದ, ಹಿಂದೆ ತನ್ನ ತಾಯಿಯ ಜೊತೆ ಇದ್ದ ಸಂಬಂಧಗಳು ಬದಲಾಗುತ್ತವೆ. ಬಸಿರಿನ ಪ್ರಾರಂಭದಲ್ಲಿ ಕಾಣಿಸಿಕೊಳ್ಳುವ ಅನೇಕ ಅಹಿತಕರ ದೈಹಿಕ ಬದಲಾವಣೆಗೆ ಮನಸ್ಸಿನ ಸಂದಿಗ್ದತೆಯೂ ಕಾರಣವಾಗುತ್ತದೆ. ಬಸಿರು ಬೆಳೆದು ಪ್ರಸವ, ಹೆರಿಗೆ ಬೇನೆ, ಮಗುವಿನ ಆರೋಗ್ಯ, ತಾಯಿಯಾಗಿ ಸಮರ್ಪಕ ರೀತಿಯಲ್ಲಿ ಮಗುವನ್ನು ಸಾಕಲಗುವುದೋ ಇಲ್ಲವೋ ಎಂಬ ಅನೇಕ ಚಿಂತೆಗಳು ಕಾಡುತ್ತವೆ. ಗರ್ಭಧರಿಸಿದ ಕಾಲದಲ್ಲಿ ಲೈಂಗಿಕ ಜೀವನದಲ್ಲಿ ಏರುಪೇರಾಗಿ ವೈವಾಹಿಕ ಸಂತೃಪ್ತಿ ಕಡಿಮೆಯಾಗುತ್ತದೆ. ಪ್ರಸವ ತ್ರಾಸದಾಯಕ ಮತ್ತು ನೋವನ್ನುಂಟು ಮಾಡುವ ಘಟನೆ ಸುಲಭವಾಗಿ ಪ್ರಸವವಾಗದೆ ಬಹಳ ಅನುಭವಿಸುವುದು, ಸರಿಯಾದ ತಿಳುವಳಿಕೆ ಇಲ್ಲದಿರುವುದು ಮುಂತಾದವು ಹುಟ್ಟುವ ಮಗುವಿನ ಬಗ್ಗೆ ತಾಯಿಗೆ ಅಹಿತಕರ ಭಾವನೆ ಮೂಡಿಸಬಹುದು. ಪ್ರಸವಾನಂತರ ಮಾನಸಿಕ ವಿಕ್ಷಿಪ್ತಿ ಉಂಟಾಗುವ ಸಾಧ್ಯತೆಯು ಇದೆ. "[1] ಎನ್ನುತ್ತಾರೆ. ಮನೋವಿಜ್ಞಾನಿಗಳು ನಮ್ಮ ತಾಯಂದಿರು ಮನಸಿಕವಾಗಿ ಹಲವು ಬಗೆಯ ತೋಂದರೆಗಳನ್ನು ಅನುಭವಿಸುತ್ತಿದ್ದಾರೆ. ಹಿಂದಿಗಿಂತಲೂ ಇಂದು ತಾಯಂದಿರು ಹೆಚ್ಚು ಮಾನಸಿಕ ಒತ್ತಡಕ್ಕೆ ಸಿಲುಕಿದ್ದಾರೆ. ಈ ಮಾನಸಿಕ ಸಂಘರ್ಷಕ್ಕೆ ಪ್ರಮುಖ ಕಾರಣಗಳೆಂದರೆ

* ದೈಹಿಕ ಅನಾರೋಗ್ಯ
* ಮಗುವಿನ ಆರೈಕೆಯ ಭಾವ ಸಂಪೂರ್ಣವಾಗಿ ತಾಯಿಯ ಮೇಲೆ ಹಾಕುವುದು
* ಕುಟುಂಬದ ಒಳ ಮತ್ತು ಹೊರಗಿನ ಒತ್ತಡದ ಕೆಲಸ ಕಾರ್ಯಗಳು
* ಇತರ ಸಾಮಾಜಿಕ ಕಾರ್ಯಗಳಲ್ಲಿ ಭಾಗಿಯಾಗಲು ಸಮಯ ಸಿಗದೇ ಇರುವುದು
* ಮಕ್ಕಳ ಅನಾರೋಗ್ಯ ಹಾಗೂ ಇತರ ಅಹಿತಕರ ನಡೆತೆಗೆ ತಾಯಿಯನ್ನೆ ದೂರುವುದು
* ನಮ್ಮ ಸಂಸ್ಕೃತಿ .ತಾಯ್ತನಕ್ಕೆ ಕೊಟ್ಟ ಅತಿಯಾ ಪ್ರಾಮುಖ್ಯತೆ
* ಗಂಡು ಮಗುವನ್ನೆ ಹೆರಬೇಕು ಎಂಬ ನಮ್ಮ ಸಮಾಜ ಬಲವಾದ ಒತ್ತಡ

ಇಂದಿನ ಕಾಲದ ತಾಯಿ ಒಬ್ಬ ಸಶಕ್ತ ತಾಯಿ ಎಂಬಂತೆ ಮೇಲ್ನೋಟಕೆ ಕಂಡು ಬರುತ್ತಿದೆ. ಆಧುನಿಕ ಸಂದರ್ಭದಲ್ಲಿ ಹಲವು ಕ್ಷೇತ್ರಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿರುವ ತಾಯಿ ತನ್ನ ಮಕ್ಕಳೊಂದಿಗೆ ಮನೆಗೆಲಸವನ್ನೊಳಗೊಂಡು ವೃತಿಯನ್ನು ನಿಭಾಯಿಸಬೇಕಾಗಿದೆ. ಹೆಣ್ಣುಮಗಳು ಮೈನೆರೆಯುವ ದಿನದಿಂದಲೇ ಆಕೆ ತಾಯಿ ಆಗುವ ಅರ್ಹಳು ಎಂದು ಗ್ರಹಿಸಲಾಗಿದೆ. ತಾಯಿಯ ಜವಾಬ್ದಾರಿಗಳನ್ನು ಹೊರಲು ತಯಾರಿರಬೇಕು ತಾಯ್ತನದ ಭಾವಗಳಾದ ಸಹನೆ, ತಾಳ್ಮೆ, ಪ್ರೀತಿ, ವಿಶ್ವಾಸ,ಗಳಂತಹ ಗುಣಗಳು ಆಕೆಗೆ ಇರಲೇಬೇಕು.ಹಳ್ಳಿಗಳಲ್ಲಿ ನಮ್ಮ ತಾಯಂದಿರು ಮನೆಗೆಲಸಗಳೊಂದಿಗೆ ಕೃಷಿಕಾರ್ಯ, ದನಕರುಗಳ ಪಾಲನೆ - ಪೋಷಣೆ, ಹಳ್ಳಿ - ನಗರಗಳಲ್ಲಿಯೂ ಮನೆಯ ಒಳ ಮತ್ತು ಹೊರಗೆ ದುಡಿಯುತ್ತಿದ್ದಾರೆ. ಈ ಒತ್ತಡ ಕಾರಣವಾಗಿ ತಾಯಂದಿರ ದೈಹಿಕವಾಗಿ ಜರ್ಜರಿತರಾಗುತ್ತಿದ್ದಾರೆ. ಆಧುನಿಕತೆ ಮಹಿಳೆಗೆ ಎದುರಾಗುವ ಸವಾಲುಗಳಲ್ಲಿ ತಾಯಂದಿರಿಗೆ ಸಭಂದಿಸಿದ ಸಮಸ್ಯೆಗಳು ಮುಖ್ಯವಾಗಿವೆ ವಿಲಾಸಿ ಜೀವನಕ್ಕೆ ತನ್ನನ್ನು ಒಡ್ಡಿಕೊಳ್ಳುತ್ತಿರುವ ಆಧುನಿಕ ಬದುಕು ಮಕ್ಕಳಿಗಿಂತಲೂ ತನ್ನ ಬದುಕೆ ಮುಖ್ಯ ಎಂದು ಬಗೆಯುತ್ತಿರುವ ತಾಯಂದಿರ ಮನೋಭಾವನೆ, ಮಿತಿಮಿರಿದ ಸ್ವಾತಂತ್ರ್ಯದ ಕಲ್ಪನೆ ಅಗಣಿತ ಗರ್ಭ ಪಾತಕ್ಕೆ ನೂಕುತ್ತಿದೆ ಗಂಡು - ಹೆಣ್ಣು ಇಬ್ಬರೂ ಸೇರಿ ಇಟ್ಟಹೆಜ್ಜೆಯನ್ನು ಕೆವಲ ತಾಯಿಯನ್ನು ಮಾತ್ರ ದೋಷಿಸಲಾಗುವ ಸಮಾಜದ ಧೋರಣೆ ತಾಯಂದಿರನ್ನು ಮಾನಸಿಕವಾಗಿ ಘಾಸಿಗೊಳಿಸುತ್ತಿದೆ.

ಮುರಿದು ಬಿದ್ದ ಮದುವೆಯಿಂದ ತಾಯಿಯಾಗಲಿರುವ ಅಥವಾ ಆಗಿರುವ ಮಹಿಳೆಯರು ಅನುಭವಿಸುವ ಭಾವನಾತ್ಮಕ ಯಾತನೆಗಳು ಹೇಳತಿರದು ಅತ್ಯಾಚಾರಕ್ಕೆ ಒಳಗಾದ ಪರಿಣಾಮವಾಗಿ ತಾಯಿಯಾಗಲಿರುವ ಹೆಣ್ಣು ಸಮಾಜದ ದೃಷ್ಟಿಯಲ್ಲಿ ಅಪರಾಧಿಯಾಗಿ ನಿಲ್ಲುತ್ತಾಳೆ. ಈ ಸಂಧರ್ಭದಲ್ಲಿ ತಾಯಿ ಮಾನಸಿಕ ತೊಳಲಾಟಕ್ಕೆ ಸಿಕ್ಕಿಕೊಳ್ಳುತ್ತಾಳೆ. ತಾನು ಮಾಡದ ತಪ್ಪಿಗಾಗಿ ಘೋರ ನರಕಯಾತನೆ ಅನುಭವಿಸಬೇಕಾಗುತ್ತದೆ. ಪಾರಂಪರಿಕವಾಗಿ ಸಾಗಿಬಂದ ಪುರುಷ ಪ್ರಧಾನ ಸಮಾಜದಲ್ಲಿ ಗಂಡು ಮಗುವಿನ ಜನನ ಅನಿವಾರ್ಯ ಎಂಬಂತೆ ಪ್ರತಿಬಿಂಬಿಸಲಾಗಿದೆ. ಬೆಡವಾದ ಹೆಣ್ಣುಮಗುವನ್ನು ಹೆತ್ತ ತಾಯಿಯ ಮಾನಸಿಕ ಸಂಕಟ ಹೇಳತಿರದು. "ಮಾನೆ (೧೯೧೯) ಭಾರತೀಯ ಮಹಿಳೆಯ ಮಾನಸಿಕ ಆರೋಗ್ಯವನ್ನು ಸಾಮಾಜಿಕ - ಸಾಂಸ್ಕೃತಿ ದೃಷ್ಟಿಕೋನದಿಂದ ವಿಶ್ಲೇಷಿಸಿದ್ದಾರೆ ಅವರ ಪ್ರಕಾರ ತಾಯ್ತನದ ಕಟು ವಾಸ್ತವ, ಹೆಣ್ಣಿನ ಸ್ಥಾನ ಅವಳು ತಾಯಿಯಾದಾಗ ಅದರಲ್ಲೂ ಗಂಡುಮಗುವನ್ನು ಹೆತ್ತಾಗ, ಮೇಲೇರುತ್ತದೆ. ತಾಯಿಯರು ಸದಾ ತ್ಯಾಗ ಮಯಿಯಾಗಿರಬೇಕು ಎಂದು ಸಮಾಜ ನಿರೀಕ್ಷಿಸುತ್ತದೆ. ಭಾರತೀಯ ಕುಟುಂಬಗಳಲ್ಲಿ ತಾಯಿ - ಮಗ ನ ಸಂಭಂಧ, ರೋಗಗ್ರಸ್ಥ ಎನ್ನುವಷ್ಟು ಹತ್ತಿರವಾಗಿರುತ್ತದೆ. ತಾಯಿಯರು ಮಗ ಇನ್ನೋಬ್ಬ ಹೆಣ್ಣನ್ನು ಪ್ರೀತಿಸುವುದನ್ನು ಸಹಿಸಲಾರದಷ್ಟು ಸಾಮಿಪ್ಯ ಹೊಂದಿರುತ್ತಾರೆ ಮದುವೆ ಮತ್ತು ತಯ್ತನ ಹೆಣ್ಣಿನ ಪ್ರಥಮ ಪಾತ್ರ ಎನಿಸಿರುವುದರಿಂದ ಅವರಲ್ಲಿ ಯಾವ ರೀತಿಯ ವ್ಯತ್ಯಯವಾಡರೂ ಅದು ಸಮಸ್ಯೆಗೆ ಕಾರಣವಾಗುತ್ತದೆ ಹೀಗಾಗಿ ಅವಿವಾಹಿತೆ

ವಿಚ್ಛೇದಿತೆ, ಗಂಡ ಬಿಟ್ಟವಳು, ವಿಧವೆ, ಮಕ್ಕಳಿಲ್ಲದವಳು ದೈಹಿಕ ಮಾನಸಿಕವಾಗಿ ಅಪಾಯದಲ್ಲಿರುತ್ತರೆ. ಸಮಾಜ ಉತ್ತಮ ಪತ್ನಿ ಉತ್ತಮ ಮಾತೆ ಎನ್ನುವುದಕ್ಕೆ ಎಷ್ಟೋಂದು ಮಹತ್ವ ನೀಡುತ್ತದೆಂದರೆ ಈ ಪಾತ್ರಗಳು ಮನಸ್ಸಿನ ಮೇಲೆ ಅಗಾಧ ಒತ್ತಡ ಹೇರುತ್ತವೆ. "[6] ಇದನ್ನು ಗಮನಿಸಿದಾಗ ತಾಯಿ ಆಗದೇ ಇರುವ ಹೆಣ್ಣು ಒಂದು ಬಗೆಯ ಯಾತನೆ ಅನುಭವಿಸಿದರೆ ತಾಯಿಯಾದವಳು ನಾನಾ ಬಗೆಯ ಮಾನಸಿಕ ಯಾತನೆ ಎದುರಿಸಬೇಕಾಗುತ್ತದೆ. ಎಂಬುದು ಗಮನಕ್ಕೆ ಬರುತ್ತದೆ. ನಮ್ಮ ಸಂಸ್ಕೃತಿಯಲ್ಲಿ ತಾಯಿಯನ್ನು ಎಷ್ಟು ಬಗೆಯಲ್ಲಿ ವೈಭವೀಕರಿಸಿದೆ ಎಂದರೆ ಅವಳು ದಿನನಿತ್ಯ ಕುಟುಂಬ ಮತ್ತು ಸಮಾಜ ಅಪೇಕ್ಷಿಸಿದಂತೆ ಬದುಕ ವೀರಳಾಗಿ ಸದಾ ಸಿದ್ಧಳಿರುವಂತೆ ತೋರಿಸಿಕೊಳ್ಳುತ್ತಾಳೆ.

ಪ್ರೀತಿ, ತ್ಯಾಗ, ಮಮತೆಗಳಂತಹ ಭಾವವನ್ನು ಸದಾ ತನ್ನ ಮಡಿಲಲ್ಲಿ ತುಂಬಿಕೊಂಡಿ ನಡೆದಾಡುತ್ತಾಳೆ. ತನ್ನ ಅಂತರಂಗದಲ್ಲಿನ ಬೇಸರ ದು:ಖ ಅಭಿಲಾಶೆಗಳನ್ನು ಹತ್ತಿಕ್ಕಿ ಆಂತರಿಕವಾಗಿ ಮಾನಸಿಕ ಖಿನ್ನತೆಗೆ ಒಳಗಾಗುತ್ತಾಳೆ. ಹೆಣ್ಣಾದವಳು ಗರ್ಭದಲ್ಲಿ ಮಗುವನ್ನು ಹೊತ್ತು ಕೊಂಡು ಯಾತನಕೆ ಒಳಗಾಗಿ ಕೊನೆಗೆ ತನ್ನ ಇಡೀ ಜೀವಮಾನವೆಲ್ಲ ಒಂದಿಲ್ಲ ಒಂದುಬಗೆಯ ಮಾನಸಿಕ ಸಂಘರ್ಷಕ್ಕೆ ಬಲಿಯಾಗುತ್ತಾ ಸಾಗುತ್ತಾಳೆ. ಈ ಬಗೆಯ ಖಿನ್ನತೆಗಳು ಮುಖ್ಯವಾಗಿ ತಾಯಂದಿರು ಹೊಂದಲು ಕಾರಣವೆಂದರೆ ಅವರ ದೇಹದಲ್ಲಿ ನಡೆಯುವ ಕೆಲ ವಿಶಿಷ್ಠ ಕ್ರೀಯೆಗಳು "ವೈದ್ಯಕೀಯ ಮಾದರಿಗಳು ಮಹಿಳೆ ಜೈವಿಕವಾಗಿ ಖಿನ್ನತೆಯಿಂದ ಬಳಲುವ ದುರ್ಬಲತೆ ಹೊಂದಿದ್ದಾಳೆ ಎನ್ನುತ್ತದೆ. ಹಾರ್ಮೋನುಗಳು ಏರುಪೇರಾಗುವ ಅವಸ್ಥೆಗಳು ಉದಾಹರಣೆಗೆ ಋತುಸ್ರಾವ, ಋತುಬಂಧ, ಹೆರಿಗೆಯಾದಾಗ ಮಹಿಳೆಯರಲ್ಲಿ ಖಿನ್ನತೆಯ ಸಂಭವ ಹೆಚ್ಚು. ಮಹಿಳೆಯ ಪ್ರಜನನ ಚಕ್ರದಲ್ಲಿ ಋತುಬಂಧ ಮತ್ತು ಹೆರಿಗೆಯನ್ನು ಮುಖ್ಯವಾಗಿ ಆಪತ್ಕಾಲವೆಂದು ಗುರುತಿಸಲಾಗಿದೆ "[7] ಅದಕ್ಕಾಗಿ ತಾಯಂದಿರು ಮನಸಿಕವಾಗಿ ನೆಮ್ಮದಿಯಿಂದಿರುವುದು ದೈಹಿಕವಾಗಿ ಆರೋಗ್ಯವಂತರಾಗಿರುವುದು ಅತ್ಯಂತ ಮುಖ್ಯವಾಗಿದೆ.

ನಮ್ಮ ಸಮಾಜದ ಹೆಣ್ಣಿಗೆ ಸ್ಥಾನವಿಲ್ಲ, ಅದಕ್ಕಾಗಿ ಹೆಣ್ಣು ಹುಟ್ಟಿದರೆ ಮೂಗು ಮುರಿಯುವವರೆ ಹೆಚ್ಚು, ಸಮಾಜ ಕುಟುಂಬದ ಗೌರವ ದೊರೆಯಬೇಕಾದರೆ ಗಂಡು ಮಗುವನ್ನು ಹೊತ್ತು ಕೊಡಬೇಕು ಎಂಬ ಮನಸಿಕ ಸ್ಥಿತಿ ನಮ್ಮ ತಾಯಂದಿರಿಗೆ ಒತ್ತಡವನ್ನು ಹೆರುತ್ತದೆ ಒಂದರ ನಂತರ ಇಂದು ಹೆಣ್ಣು ಹುಟ್ಟಿದರೆ ಮುಗಿದೇ ಹೋಯಿತು ಆ ತಾಯಿಯ ಬದುಕು ನರಕ ಸದೃಶ್ಯವಾಗಿ ಬಿಡುತ್ತದೆ

ಗಂಡನಾದವನ್ನು ಮನೆಯಲ್ಲಿ ಅತ್ತೆ - ಮಾವ ಹಾಗೂ ಇತರ ಸದಸ್ಯರು ಹೆಣ್ಣು ಹಡೆದ ತಾಯಿಗೆ ಜರಿಯುತ್ತಾರೆ. ಕೆಲವೊಮ್ಮೆ ಹೊಡೆಯುವುದು, ಬೈಯ್ಯುವುದು, ಗೌರವಕೊಡದೆ ಹೋಗುವುದು ವ್ಯಂಗ್ಯವಾಗಿ ಮರನಾಡುವುದು, ಕಟ್ಟುಪಾಡು ಹೇರುವುದು, ಗೋಳಾಡಿಸುವುದು, ಹೀಗೆ ನಾನಾ ಬಗೆಯ ದೈಹಿಕ ಹಾಗೂ ಮಾನಸಿಕ ಯಾತನೆಗಳನ್ನು ನಮ್ಮ ತಾಯಂದಿರು ಅನುಭವಿಸಬೇಕಾಗುತ್ತದೆ. ಕೆಲಸ ಗರ್ಭಪಾತಕ್ಕೆ ಪ್ರೇರೆಪಿಸುವುದು ಅವಿರಿತವಾಗಿ

ದುಡಿಸಿ ಕೊಳ್ಳುವುದು ಸಾಮಾನ್ಯವಾಗಿರುತ್ತದೆ. ಕುಟುಂಬದಲ್ಲಿ ನಡೆಯುವ ಇಂತಹ ಯಾತನಾ ಪೂರ್ಣವಾದ ಜೀವನದ ಪ್ರತಿಫಲವಾಗಿ ನಮ್ಮ ತಾಯಂದಿರು ಮಾನಸಿಕ ನೆಮ್ಮದಿಯನ್ನು ಕಳೆದುಕೊಳ್ಳುತ್ತಾರೆ.

**ವಿವಾಹ ಪೂರ್ವ ತಾಯ್ತನ**

ಈ ಭೂಮಿಯ ಮೇಲೆ ಮನುಷ್ಯ ಜನ್ಮ ತಾಳಿದ್ದ ದಿನದಿಂದ ಹಲವು ಬಗೆಯ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಬದುಕುತ್ತ ಬಂದಿದ್ದಾನೆ, ಕಾಲ ಉರುಳಿದಂತ ತನ್ನ ಬದುಕನ್ನು ಬದುಕುವ ಪದಗದತಿಗಳನ್ನು ಬದಲಾಯಿಸುತ್ತ, ಕೆಲ ಸಲ ಅನುಸರಿಸುತ್ತಾ ಸಾಗಿದ್ದಾನೆ. ಮಾನವನ ಹುಟ್ಟಿನ ಪ್ರಾರಂಭದ ಹಂತದಲ್ಲಿ ವಿವಾಹಯೆಂಬ ಕಲ್ಪನೆಯಾಗಲೀ ಸಂಸ್ಥೆಯಾಗಲೀ ಹುಟ್ಟಿಕೊಂಡಿರಲಿಲ್ಲ. ಮಾನವ ಸಮಾಜ ಜೀವಿಯಾಗಿ ಬದುಕಲು ಪ್ರಾರಂಭಿಸಿದ ನಂತರವೇ ಈ ವಿವಾಹದ ಕಲ್ಪನೆ ಹುಟ್ಟಿದೆ ಎಂದು ತಾಪಿಧರ್ಮರಾವ ಅವರು ಅಭಿಪ್ರಾಯ ಪಡುತ್ತಾರೆ. ಹಾಗೇ ಮುಂದುವರೆದು ಪುರುಷ ಪ್ರಧಾನ ಗ್ರಹಿಕೆಗಳು ಮಹಿಳೆಯ ಮೇಲೆ ಹೇರಲಾಯಿತು. ಅವಳು ಪುರುಷನ ಅಧಿನಳಾದಳು ವಿವಾಹ ಎಂಬ ಭಂಧನದ ಮೂಲಕ ಹೆಣ್ಣು ಸಂಪೂರ್ಣವಾಗಿ ಗಂಡನ ಅಧಿನದಲ್ಲಿ ಬದುಕ ಬೇಕಾಯಿತು. ಮಕ್ಕಳನ್ನು ಪಡೆಯಲು ವಿವಾಹ ಅನಿವಾರ್ಯ ವಿರದ ಕಾಲವೊಂದಿತ್ತು.

ತಾಪಿಧರ್ಮರಾವ ಅವರ ಪ್ರಕಾರ "ಪುರಾತನ ಮಾನವರಿಗೆ ಸಂತಾನದ ಕಾರಣ ಗೊತ್ತಿರಲಿಲ್ಲ ಯಾವಗಲೋ ಜೊತೆಗೂಡಿದರೆ ಮತ್ತ್ಯಾವಾಗಲೋ ಸಂತನವುಂಟಾಗುತ್ತದೆ. ಮನುಷ್ಯರಲ್ಲಾದರೂ, ಪ್ರಾಣಿಗಳಲ್ಲಾದರೂ, ಪಕ್ಷಿಗಳಲ್ಲಾದರೂ, ಈ ಎರಡು ಕಾರ್ಯಗಳಿಗೂ ನಡುವೆ ಅವಧಿಯಿರುತ್ತದೆ ಆದ್ದರಿಂದ ಸಂತಾನಕ್ಕೆ ಆ ಜೊತೆಗೂಡುವಿಕೆ ಸಂತಾನವುಂಟಾಗುವಿಕೆ ಎಂಬವು ಬೇರೆ ಬೇರೆ ಕಾರ್ಯಗಳು, ಸಂಬಂಧವಿಲ್ಲದ್ದವು. ಆಗಿನ ಮನುಷ್ಯರು ತಿಂದಂತೆಯೇ ಕುಡಿದಂತೆಯೇ ಜೊತೆಗ ೂಡುತ್ತಿದ್ದರು. ಅದರೊಂದಿಗೆ ಆತೃಷೆ ತೀರಿಹೋಗುತ್ತಿತ್ತು ಆ ಕ್ರಿಯೆಯನ್ನು ಮರೆತು ಬಿಡುತ್ತಿದ್ದರು. ಅಷ್ಟೇ ಹೊರತು ಅದರೊಂದಿಗೆ ಈ ಸಂತಾನವನ್ನು ಗಂಟುಹಾಕಲಾರದಾದರ. "[09]ಹೀಗಿರುವಾಗ ವಿವಾಹಕ್ಕೂ ಮಕ್ಕಳಿಗೂ ಸಂಭಂಧ ಕಲ್ಪಿಸಲು ಸಾದ್ಯವಿಲ್ಲ ಆದರೆ ಸಮಾಜ ಬದಲಾದಂತೆ ಮಾನವನು ಅನೇಕ ಕಟ್ಟುಪಾಡನ್ನು ಹಾಕಿಕೊಂಡು ಬದುಕಲು ಆರಂಭಿಸಿದನು.

ಪುರುಷನ ಅಧೀನಕ್ಕೆ ಒಳಗಾದ ಮಹಿಳೆಯರು ವಿವಾಹಯೆಂಬ ಬಂಧಿಖಾನೆ ಸೇರಿದರು. ತಾಯ್ತನವೆಂಬುದು ಪ್ರಕೃತಿಯ ಸಹಜ ಕ್ರಿಯೆಯಾದರೂ, ಬಂಜೆತನಕ್ಕೆ ಗಂಡು - ಹೆಣ್ಣು ಇಬ್ಬರೂ ಕರಣರಾದರೂ ಹೆಣ್ಣಿಗೆನೇ ಬಂಜೆಯೆಂದು ದೂಷಿಸಲಾಯಿತು. ಇನ್ನೊಂದು ಮುಖ್ಯ ವಿಷಯವೆಂದರೆ ತಾಯ್ತನವೆಂಬುದನ್ನು ಸಂಪೂರ್ಣವಾಗಿ ಮಹಿಳೆಯ ಮೇಲೆ ಹೇರಲಾಯಿತು ತಾಯಿ ಆದವಳು ಮಾತ್ರ ಪರಿಪೂರ್ಣ ಹೆಣ್ಣು ಎಂದು ಪಾರಂಪರಿಕವಾಗಿ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಗ್ರಹಿಸುತ್ತಾ ಬಂದಿದ್ದಾರೆ. ಒಂದು ಕಡೆ ತಾಯ್ತನಕ್ಕೆ ಮಹತ್ವಕೊಟ್ಟರು ಇನ್ನೊಂದೆಡೆ ವಿವಾಹದ ಪರಿಣಾಮ ತಾಯ್ತನಕ್ಕೆ ಮಾತ್ರ ಪ್ರಾಮುಖ್ಯತೆ ಇರುವುದು ಗಮನಿಸಬೇಕು ತಾಯ್ತನವೆಂಬುದು ಒಂದು ಆದರ್ಶವಾದರೂ ವಿವಾಹವಿಲ್ಲದ ತಾಯ್ತನ ಲೋಕನಿಂದೆಗೆ ಗುರಿಯಾಯಿತು. ವಿವಾಹ

ನೋಡಲಾಯಿತು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತಾಯಿಯಾಗಲೂ ಗಂಡಿನ ಪಾಲು ಇದ್ದರೂ ದೋಷಣೆ ಮಾತ್ರ ಹೆಣ್ಣಿಗೆನೆ ವಿವಾಹಪೂರ್ವ ತಾಯ್ತನ ಹೆಣ್ಣಿನ ಪಾಲಿನ ನರಕವೆಂದೆ ಹೇಳಬಹುದು. ಅತ್ಯಾಚಾರ ಅನೈತಿಕ ಸಂಭಂಧ ಕಾರಣವಾಗಿ ವಿವಾಹ ಪೂರ್ವದಲ್ಲಿ ತಯಿಯಾದರೆ ಸಮಾಜ ಅದನ್ನು ಒಪ್ಪದೆ ಆಕೆಯನ್ನು ಸಮಾಜ ವಕ್ರ ದೃಷ್ಟಿಯಿಂದ ನೋಡುತ್ತದೆ. ಒಂದು ನೆಲೆಯಲ್ಲಿ ತಾಯ್ತನವೆಂಬುದು ಆದರ್ಶೀಕರಣಗೊಂಡರೆ ಇನ್ನೊಂದೆಡೆ ಅದೇ ತಾಯ್ತನ ತಿರಸ್ಕಾರಕ್ಕೆ ಕಾರಣವೂ ಆಗಿದೆ.ಇಂಥ ಸವಾಲುಗಳನ್ನು ತಾಯಿಯಾದವಳು ಕಾಲದಿಂದ ಕಾಲಕ್ಕೆ ಅನುಭವಿಸುತ್ತ ಬಂದಿದ್ದಾಳೆ.

ಅತ್ಯಾಚಾರಕ್ಕೆ ಒಳಗಾದ ಅವಿವಾಹಿತ ತಾಯಿಯಾದರೆ ಆಕೆಯ ಬದುಕು ತುಂಬ ಹೀನವಾಗಿ ಬಿಡುತ್ತದೆ. ಹೆಣ್ಣಿನ ಮೇಲೆ ನಡೆಯುವ ಬಲತ್ಕಾರದ ಪರಿಣಮವಾಗಿ ಆಕೆ ಶೀಲ ಕಳೆದುಕೊಂಡವಳು ಎಂಬ ನಿಂದನೆಗೆ ಗುರಿಯಾದರೆ ತಾಯಿಯಾಗುವ ಸಂಧರ್ಭ ಬಂದರೆ ಇಲ್ಲಿ ಅಪರಾಧ ಎಸನಿದ ಗಂಡು ರಾಜರೋಷವಾಗಿ ಬದುಕುವನು. ಆದರೆ ತನ್ನದಲ್ಲದ ಅಪರಾಧವನ್ನು ಒಪ್ಪಿಕೊಂಡು ಸಮಾಜದ ನಿಂದನೆಗೆ ಗುರಿಯಾಗುತ್ತಾಳೆ ಈ ವಿವಾಹಪೂರ್ವ ತಾಯಿ ಇದು ಪುರುಷ ಪ್ರಧಾನ ಗ್ರಹಿಕೆಯ ದಬ್ಬಾಳಿಕೆ ಎಂದು ಹೇಳಬಹುದು ಕೆಲ ಸಂದರ್ಭದಲ್ಲಿ ಗಂಡುಹೆಣ್ಣು ಸ್ವಇಚ್ಛೆಯಿಂದ ಸೇರಿದರೂ ವಿವಾಹವಿಲ್ಲದ ಲೈಗಿಂಕತೆಯನ್ನು ನಮ್ಮ ಸಮಾಜ ಒಪ್ಪುವುದಿಲ್ಲ. ಈ ಕಾರಣಕ್ಕಾಗಿ ವಿವಾಹಪೂರ್ವ ತಾಯ್ತನ ಸಂಪೂರ್ಣವಾಗಿ ನೀಷೆಧಿಸಲಾಗಿದೆ. ಆದರೂ ಪ್ರಾಚೀನ ಕಾಲದಿಂದಲೂ ನಿಯೋಗ ಪದ್ಧತಿ ಇದ್ದದ್ದು ಕಂಡು ಬರುತ್ತದೆ ಇಂದು ಆಧುನಿಕ ಕಾಲದಲ್ಲಿ ಬಾಡಿಗೆ ತಾಯ್ತನ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ ಕಾನೂನಾತ್ಮಕವಾಗಿ ಒಪ್ಪಿಕೊಳ್ಳಲಾಗಿದೆ.

ನಿಯೋಗ ಪದ್ಧತಿ "ಭಾರತೀಯ ಸಂಸ್ಕೃತಿಯಲ್ಲಿ ಪಾತಿವ್ರತ್ಯವು ಸ್ತ್ರೀ ಜೀವನ ಮೌಲ್ಯವಾಗಿ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ನಮ್ಮ ಪವಿತ್ರ ಗ್ರಂಥಗಳೆನ್ನಿಸಿಕೊಂಡ ರಾಮಾಯಣ, ಮಹಾಭಾರತ, ಉಪನಿಷತ್ತುಗಳನ್ನು ಅವಲೋಕಿಸಿದರೆ. ಈ ಪಾತಿವ್ರತ್ಯದ ಕಲ್ಪನೆ ಸಂಧರ್ಭಕ್ಕನುಗುಣವಾಗಿ ಬದಲಾಗುತ್ತಾ ಬಂದಿರುವುದನ್ನು ನೋಡಬಹುದು. ಮಹಾಭಾರತದಲ್ಲಿ ಅಂಬಿಕೆ, ಅಂಬಾಲಿಕೆ, ದಾಸಿ, ಕುಂತಿ, ಮಾದ್ರಿಯರ ನಿಯೋಗ ಪ್ರಸ್ತಾಪವಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಸತ್ಯಕಾಮನ ಗುರುಗಳು ಅವನ ತಂದೆಯ ಬಗ್ಗೆ ಕೇಳಿದಾಗ ಅವನ ತಾಯಿ ತಾರುಣ್ಯದಲ್ಲಿ ನಾನು ಅನೇಕರೊಂದಿಗೆ ಬೆರೆತಿದ್ದೆ. ಆದ್ದರಿಂದ ನಿನ್ನ ತಂದೆ ಯರೋ ನನಗೆ ತಿಳಿಯದು. ನೀನು ಜಾಸಾಲಿಯ ಮಗ ಜಾಬಾಲಸತ್ಯಕಾಮ ಎನ್ನುತ್ತಾಳೆ. ಒಬ್ಬನೇ ಪತಿ ಎಂಬ ನಿರ್ಬಂಧವಿರದಿದ್ದ ಕಾಲದಲ್ಲಿಯೂ ಅವರನ್ನು ಪತಿತೆಯರೆಂದ ಭಾವಿಸದೇ ಅವರ ಕಾಮ ಸ್ವಾತಂತ್ರ್ಯವನ್ನು ಶ್ರೇಷ್ಠಮುನಿಗಳೂ ಮನ್ನಿಸಿದ್ದರು. ಯೋಗ್ಯ ಸಂತಾನಾಪೇಕ್ಷೆಯಿಂದ ಬೇಕಾದ ಕಡೆಗೆ ಹೋಗುವುದುನ್ನೂ ಧಾರ್ಮಿಕ ವಿಧಿ ಎಂದು ಪರಿಗಣಿಸಲಾಗಿತ್ತು "೧೧ ಆದರೆ ಕಾಲ ಬದಲಾದಂತೆ ಪುರುಷರ ಸ್ವಾಧಿನಕ್ಕೆ ಬಂದ ಕುಟುಂಬ, ಸಮಾಜವೂ ವಿವಾಹವೆಂಬ

ಕಟ್ಟುಪಾಡಿಗೆ ಸಿಕಿಸಲಾಯಿತು. ಪಾತಿವ್ರತ್ಯದ ಹೆಸರಿನಲ್ಲಿ ಹೆಣ್ಣನ್ನು ಶೋಷಿಸಲು ಪ್ರಾರಂಭಿಸಿದರು ವಿವಾಹವೆಂಬುವುದು ಹೆಣ್ಣಿನ ಪಾತಿವ್ರತ್ಯವನ್ನು ಕಾಟಾಡು ರೂಪಿಸಿದ ಒಂದು ವ್ಯವಸ್ಥೆಯಾಗಿ ಬೆಳೆಯಿತು.

ಹೆಣ್ಣಿಗೆ ವಿವಾಹವೇ ಜೀವನದ ಪರಮ ಗುರಿ ವಿವಾಹವಾದವಳು ಮಾತ್ರ ತಾಯಿಯಾಗಲು ಅರ್ಹಳು ಇಲ್ಲವಾದಲ್ಲಿ ಅಂದರೆ ವಿವಾಹ ಪೂರ್ವ ತಾಯ್ತನವೆಂಬುದು ಆಕೆಗೆ ವ್ಯಭಿಚಾರಣಿಯ ಪಟ್ಟಕ್ಕೆ ತಂದು ನಿಲ್ಲಿಸುತ್ತದೆ. ಆದರೆ ಒಂದು ವಿಷಾದದ ಸಂಗತಿಯೆಂದರೆ ಈ ನಿರ್ಭಂಧಗಳಲ್ಲವೂ ಸ್ತ್ರೀಯರಿಗೆ ಮಾತ್ರ ಅನ್ವಯವಾಗಿದ್ದು ಪುರುಷರಿಗೆ ಇದು ಅನ್ವಯಿಸುವುದಿಲ್ಲ ಎಂಬಷ್ಟು ಅವರು ಮುಕ್ತರಾಗಿರುತ್ತಾರೆ. ವಿವಾಹ ಮಹಿಳೆಯು ಜೀವನದ ಗುರಿಯಾಗಿದ್ದು ನಂತರ ತಾಯ್ತನವೇ ಆಕೆಗೆ ಪರಿಪೂರ್ಣತೆ ತಂದು ಕೊಡುತ್ತದೆ ಎಂದು ಗ್ರಹಿಸಲಾಗಿದೆ.

## ಹದಿಹರೆಯದ ತಾಯ್ತನ

ಆಧುನಿಕ ಸಮಾಜದಲ್ಲಿ ಮಹಿಳೆಯರು ಅನುಭವಿಸುತ್ತಿರುವ ಸವಾಲುಗಳಲ್ಲಿ ಹದಿಹರೆಯದ ತಾಯ್ತನವೂ ಒಂದಾಗಿದೆ. ಹೆಣ್ಣು ಮಗಳೊಬ್ಬಳು ತನ್ನ ಹನ್ನೊಂದನೆ ವಯಸ್ಸಿನಿಂದ ಹಿಡಿದು ಹದಿನೆಂಟನೆ ವಯಸ್ಸಿನ ಒಳಗೆ ತಾಯಿಯಾದರೆ ಹದಿಹರೆಯದ ತಯ್ತನವೆಂದು ಕರೆಯುವರು. ಈ ಸಮಸ್ಯೆ ನಮ್ಮ ದೇಶದಲ್ಲಿ ಅಷ್ಟೇ ಅಲ್ಲ ಅಭಿವೃದ್ಧಿ ಹೊಂದಿದ ಹೊಂದುತ್ತಿರುವ ರಾಷ್ಟ್ರಗಳಲಿಯೂ ಕಂಡು ಬರುತ್ತದೆ. ನಮ್ಮ ದೇಶದಲ್ಲಿ ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿತ್ತು ಎಂಬ ಕಲ್ಪನೆಯಿದೆ. ಹೆಣ್ಣುಮಗ ಹುಟ್ಟಿದ ದಿನದಿಂದಲೇ ಆಕೆಯ ಮದುವೆಯ ಕುರಿತಂತೆ ಚಿಂತನೆಗಳು ಪ್ರಾರಂಭವಾಗುತ್ತವೆ. ಇಲ್ಲಿ ತಮ್ಮ ಮಗಳನ್ನು ಬೇಗ ಮದುವೆ ಮಾಡಿ ಕೈ ತೊಳೆದುಕೊಳ್ಳಲಾಗುತ್ತದೆ. ಕೇವಲ ಆಕೆಗೆ ಹನ್ನೆರಡು ಅಥವಾ ಹದಿಮೂರನೆ ವಯಸ್ಸಿಗೆ ಮದುವೆ ಮಾಡಲಾಗುತ್ತದೆ. ಈ ವಯಸ್ಸಿಗೆ ಮದುವೆಯಾದ ಬಾಲಕಿಯರು ಬೇಗ ತಾಯಿಯಾಗುತ್ತಾರೆ. ಈ ಬಾಲಕಿಯ ದೇಹ ತಾಯಿಯಾಗಲೂ ಇನ್ನೂ ಸಶಕ್ತ ಗೊಳಿಸುತ್ತದೆ. ಕೆಲ ಸಲ ಜೀವಕ್ಕೂ ಕುತ್ತು ಬರುವುದುಂಟು ಇದಕ್ಕೆ ಮುಖ್ಯ ಕಾರಣಗಳೆಂದರೆ ಲೈಂಗಿಕತೆಯ ಬಗ್ಗೆ ಸರುಯಾದ ಮಾಹಿತಿ ಇಲ್ಲದಿರುವುದು ಅನಕ್ಷರತೆ, ಅಜ್ಞಾನ, ಗರ್ಭನಿರೋಧಕಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದೇ ಇರುವುದು. ಬಾಲ್ಯದಲ್ಲಿಯೇ ವಿವಾಹ ಕೈಗೊಳ್ಳುವುದು ಹೀಗೆ ನಾನಾ ಕಾರಣಗಳಿಂದಾಗಿ ಹದಿಹರೆಯದ ವಯಸ್ಸಿನಲ್ಲಿ ತಾಯಿಯಾಗುತ್ತಾಳೆ.

ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆ ಮಾಹಿತಿ ಪ್ರಕಾರ ೨೦೧೬ ಗ೨೦೧೭ರಲ್ಲಿ ಬಾಲಕಿಯರು ಗರ್ಭ ಧರಿಸಿದ ಪ್ರಮಾಣದಲ್ಲಿ ಶೇ ೪.೮೬ ರಿಂದ ೭.೦೧ಕ್ಕೆ ಏರಿಕೆಯಾಗಿರುವುದು ಧೃಢಪಟ್ಟಿರುವುದು ಕಳವಳಿಕಾರಿ ಸಂಗತಿ ಎನ್ನಬಹುದು. ಬಾಲ್ಯವಿವಾಹ ಪದ್ಧತಿಯೇ ಈ ಹದಿಹರೆಯದ ತಾಯ್ತನಕ್ಕೆ ಕಾರಣವಾದರೂ ಆಟ ಆಡುವ ಪುಟ್ಟ ಬಾಲಕಿಯರ ಮೇಲೆ ಜರುಗುವ ಅತ್ಯಾಚಾರಗಳು, ಕೌಟುಂಬಿಕ ಮೌಢ್ಯಗಳು, ಆರ್ಥಿಕ ಸಂಕಷ್ಟಗಳು ಬಡತನ ಹೀಗೆ ಹಲವು

ಕಾರಣದಿಂದ ಇಂದು ಹದಿಹರೆಯದ ತಾಯ್ತನದಿಂದ ನಮ್ಮ ಪುಟ್ಟ ಬಾಲಕಿಯರು ಹಲವು ಶಾರರೀಕ ಮತ್ತು ಮಾನಸಿಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ನಮ್ಮ ಬೆಳೆದು ಬಂದ ಪಿತೃಪ್ರಧಾನ ವ್ಯವಸ್ಥೆಯಿಂದಾಗಿ ಹೆಣ್ಣು ಮಕ್ಕಳನ್ನು ಒಬ್ಬ ವ್ಯಕ್ತಿಯೆಂದು ಬಗೆಯದೆ, ಮಕ್ಕಳನ್ನು ಹೆರುವ ವಿಷಯದಲ್ಲಿ ಆಕೆಯ ಅಭಿಪ್ರಾಯಕ್ಕೆ ಪ್ರಾಮುಖ್ಯತೆ ನೀಡದ ಬೇಗ ತಾಯಿಯಾಗುವಂತೆ ಮಾಡಲಾಗುತ್ತದೆ.

## ಹದಿಹರೆಯದ ತಾಯ್ತನದ ಸವಾಲುಗಳು

- ಬಾಲಕಿಯ ಶಿಕ್ಷಣ ಮಧ್ಯದಲ್ಲಿಯೆ ಮೊಟಕುಗೊಳ್ಳುತ್ತದೆ.
- ಆಕೆಯ ಬದುಕು ಕೌಟುಂಬಿಕ ಸಂಕಷ್ಟಕ್ಕೆ ಇಡಾಗುತ್ತದೆ.
- ಸಾಮಾಜಿಕವಾಗಿ ಅಭಿವೃದ್ಧಿ ಹೊಂದಲಾರರು
- ಆರ್ಥಿಕವಾಗಿ ಹಿಂದುಳಿಯುವಂತಾಗುತ್ತದೆ.
- ಆರೋಗ್ಯದ ಸಮಸ್ಯೆ ಎದುರಿಸಬೇಕಾಗುತ್ತದೆ.
- ಮಾನಸಿಕ ಅನಾರೋಗ್ಯ ಎದುರಿಸಬಹುದಾಗುತ್ತದೆ.
- ಹುಟ್ಟುವ ಮಕ್ಕಳು ಅನೇಕ ಅರೋಗ್ಯ ಸಮಸ್ಯೆ ಎದುರಿಸುತ್ತವೆ ಇದರಿಂದ ಕೆಟ್ಟ ಪರಿಣಾಮ ತಾಯಿಯ ಮೇಲೆ ಆಗುವುದು
- ಹೆರಿಗೆ ಸಮಯದಲ್ಲಿ ಸಂಕೀರ್ಣ ಸಮಸ್ಯೆ ಉಲ್ಬಣಿಸಬಹುದು
- ತಾಯಿಯ ಜೀವಕ್ಕು ಕುತ್ತಾಗುವ ಸಂಭವ ಹೆಚ್ಚಾಗಿರುತ್ತವೆ
- ಎದೆಹಾಲು ಉಣಿಸುವ ಸಮಸ್ಯೆ ಆಗಬಹುದು
- ಅಕಾಲಿಕ ಹೆರಿಗೆಯಾಗಬಹುದು ಇದರಿಂದ ಮಗುವಿನ ಸಂಪೂರ್ಣ ಬಳವಳಿಗೆ ಆಗುವುದ್ದಿಲ್ಲ

ಹೀಗೆ ಹದಿಹರೆಯದ ತಾಯ್ತನದಿಂದ ಸಮಸ್ಯೆಗಳು ನಮ್ಮ ತಾಯಂದಿರು ಅನುಭವಿಸುತ್ತಿದ್ದಾರೆ. ದೈಹಿಕವಾದ ಸಮಸ್ಯೆಗಳು ಆಕೆಯನ್ನು ಜರ್ಜರಿತಗೊಳಿಸಿವೆ ರಕ್ತಹಿನದಿಂದ ಬಳಲುವುದು ಸೊಂಟನೋವು, ಮುಟ್ಟಿನ ತೊಂದರೆ, ಗರ್ಭಾಶಯದ ಸೊಂಕುಗಳು, ಸ್ತನ ಕ್ಯಾನ್ಸರ, ಹೀಗೆ ಹಲವು ರೋಗಗಳ ಆಕೆಯ ದೇಹವ ಹಿಂಡಿ ಸಾವನ್ನಪ್ಪುವಂತೆ ಮಾಡಿವೆ.ಇದರೊಂದಿಗೆ ಮಾನಸಿಕವಾಗಿ ಬಿನ್ನತೆಗೆ ಒಳಗಾಗಿ ತನ್ನ ಅಭಿವೃದ್ಧಿ ಬಗ್ಗೆ ಆಲೋಚಿಸದೆ, ಕುಟುಂಬ ಮಕ್ಕಳ ನಡುವೆ ಇಡೀ ಜೀವನ ಕಳೆದು ತನ್ನ ತನದ ಅಸ್ತಿತ್ವ ಇಲ್ಲದೆ ಸಮಯಕ್ಕೆ ಮೊದಲೇ ವೃದ್ಧಳಾಗುವ ಎಲ್ಲ ಸಂದರ್ಭಗಳು ಬಂದೊದಗಿವೆ. ಆಟಆಡಿ, ಕುಣಿದು ಕುಪ್ಪಳಿಸುವ ಮಗುವಿನ ಕೈಯಲ್ಲಿ ಇನ್ನೊಂದು ಮಗುಕೊಟ್ಟು ಕುಟುಂಬದ ಜವಾಬ್ದಾರಿಯೆಲ್ಲ ಆಕೆಯ ಮೇಲೆ ಹೆರಿ ಹಲವು ಸಮಸ್ಯೆಗಳನ್ನು ಎದುರಿಸುವಂತೆ ಮಾಡಲಾಗಿದೆ.

## ಪರಿಹಾರೋಪಾಯಗಳು

- ಹದಿಹರೆಯದ ತಾಯ್ತನ ಸಮಸ್ಯೆ ನಿವಾರಣೆಯಾಗಬೇಕಾದರೆ ಬಾಲ್ಯವಿವಾಹ ಪದ್ಧತಿಗಳು
  ಜರಗದಂತೆ ನೋಡಿಕೊಳ್ಳಬೇಕು ಇದಕ್ಕಾಗಿ ಸರಕಾರ ಹಾಗೂ ಸರಕಾರೇತರ ಸಂಘ ಸಂಸ್ಥೆಗಳು ಸಕ್ರಿಯವಾಗಬೇಕು
- ಕುಟುಂಬ ಆಕೆಯ ಬೆಂಬಲಕ್ಕೆ ನಿಂತು ದೈಹಿಕ ಹಗೂ ಮಾನಸಿಕ ತೋಳಲಾಟಕ್ಕೆ ಸಿಕ್ಕಿಕೊಳ್ಳದ ರೀತಿಯಲ್ಲಿ ನೋಡಿಕೊಳ್ಳಬೇಕು
- ಹದಿಹರೆಯದ ವಯಸ್ಸಿನಲ್ಲಿ ತಾಯಿಯಾದ ಬಾಲಕಿಗೆ ಸೂಕ್ತ ವೈದ್ಯಕೀಯ ಪರೀಕ್ಷೆ ನಡೆಸಿ ಆಕೆಯ ಆರೋಗ್ಯ ಚನ್ನಾಗಿ ನೋಡಿಕೊಳ್ಳಬೇಕು
- ಸೂಕ್ತವಾದ ಪೌಷ್ಟಿಕ ಆಹಾರ ದೊರೆಯುವಂತೆ ಮಾಡಬೇಕು
- ಮಾದಕ ದ್ರವ್ಯಗಳಂಥ ವಸ್ತುವಿನ ಸೇವನೆಯಿಂದ ದೂರ ಇಡಬೇಕು
- ಮೂಢನಂಬಿಕೆಗಳಿಂದ ಗೊಡ್ಡು ಆಚರಣೆಗಳಿಂದ ದೂರ ಇರಬೇಕು

ಹೀಗೆ ಹಲವು ಹದಿಹರೆಯದ ತಾಯಂದಿರ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕು. ಆಧುನಿಕ ಸಂದರ್ಭದಲ್ಲಿ ಈ ಸಮಸ್ಯೆ ಉಲ್ಬಣಗೊಂಡು ಬಾಲಕಿಯರ ಜೀವನ ಹಾಳಾಗದಂತೆ ನೋಡಿಕೊಳ್ಳಬೇಕು. ಬಾಲ್ಯದಲ್ಲಿಯೇ ವಿವಾಹ ಮಾಡುವ ತಂದೆ ತಾಯಿಯರು ಜಾಗ್ರತರಾಗಬೇಕು ಹೇಗಾದರೂ ಮಾಡಿ ತಮ್ಮ ಮಗಳ ಮದುವೆ ಮಾಡಿ ಜವಾಬ್ದಾರಿಯಿಂದ ಕಳಚಿಕೊಂಡರೆ ಸಾಕು ಎಂಬ ಗ್ರಹಿಕೆ ತೊಲಗಬೇಕು. ಬೇಗ ಮದುವೆ ಮಾಡುವುದು ಪ್ರತಿಷ್ಠೆಯ ಸಂಕೇತವೆಂದು ತಿಳಿಯುವವರು ಇದ್ದಾರೆ ಬಾಲ್ಯವಿವಾಹ ಕಾನೂನು ಜಾರಿಯಲ್ಲಿದ್ದರೂ ಇಂಥ ವಿವಾಹಗಳು ರಾಜರೋಷವಾಗಿ ನಡೆದ ಇವೆ.

## ಒಂಟಿ ತಾಯ್ತನ

ತಾಯಿಯಾದವಳು ಕಾರಣಾಂತರಗಳಿಂದ ತನ್ನ ಮಕ್ಕಳನ್ನು ಏಕಾಂಗಿಯಾಗಿ ಲಾಲನೆ ಪಾಲನೆ ಪೋಷಣೆ ಮಾಡುವುದಕ್ಕೆ ಒಂಟಿ ತಾಯ್ತನವೆಂದು ಕರೆಯಬಹುದು. ಆಧುನಿಕ ಸಮಾಜದ ಒಂಟಿ ತಾಯಂದಿರ ಸಂಖ್ಯೆ ಹೆಚ್ಚಾಗುತ್ತಿದೆ ಇದೊಂದು ಮಹಿಳಾ ಸಮಸ್ಯೆ ಎಂದೇ ಬಗೆಯ ಬಹುದಾಗಿದೆ. ಗಂಡ ಹೆಂಡತಿ ತಮ್ಮ ಕೌಟುಂಬಿಕ ಕಲಹದಿಂದಲೋ ಹಾಗೂ ವಿಚ್ಛೇದಿತಗೊಂಡ ಕಾರಣದಿಂದಲೋ, ಗಂಡನ ಮರಣದಿಂದಲೋ ಮಕ್ಕಳ ತಾಯಿಯು ತಾನು ಏಕಾಂಗಿಯಾಗಿ ಮಕ್ಕಳನ್ನು ಪೋಷಿಸುವ ಸಂಧರ್ಭ ಒದಗಿಬರುತ್ತದೆ.

'ಎತ್ತು ಏರಿಗೆಳೆಯಿತು ಕೋಣ ನೀರಿಗೆಳೆಯಿತು' ಎಂಬ ಗಾದೆಯಂತೆ ಗಂಡಹೆಂಡಿರಲ್ಲಿ ವಿರಸ ಉಂಟಾಗಿ ಇಬ್ಬರು ದೂರವಾಗಿ ಮಕ್ಕಳನ್ನು ತಾಯಿಯ ಪೋಷಣೆಗೆ ಒಪ್ಪಿಸಿ ಗಂಡನಾದವನು ಹಾಯಾಗಿದ್ದು ಬಿಡುವ ಅನೇಕ ಘಟನೆಗಳು ನಮ್ಮ ಸಮಾಜದಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ಮಕ್ಕಳ ಲಾಲನೆ ಪಾಲನೆ ಮತ್ತು ರಕ್ಷಣೆ, ಪ್ರೀತಿ ವಿಶ್ವಾಸವನ್ನು ಇಬ್ಬರೂ ಸೇರಿ ನಿರ್ವಹಿಸಬೇಕು ಆದರೆ ಆಧುನಿಕ ಸಂದರ್ಭದಲ್ಲಿ ವಿವಾಹ ವಿಚ್ಛೇದನದಿಂದ ಮಕ್ಕಳು ತಂದೆಯಿಲ್ಲದೆ, ತಾಯಿ ಮಕ್ಕಳನ್ನು ಪೋಷಿಸಲು ಪಡಬಾರದ ಕಷ್ಟ ಪಡಬೇಕಾಗುತ್ತದೆ. ಕುಟುಂಬದಲ್ಲಿ ತಂದೆ ತಾಯಿಯ ಕೌಟುಂಬಿಕ ಕಲಹ ವಿಚ್ಛೇದನೆಯಲ್ಲಿ ಪೂರ್ಣಗೊಳ್ಳುತ್ತದೆ. ತಂದೆ ತಾಯಿಯ 'ಜಗಳದಲ್ಲಿ ಕೂಸು ಬಡವಾಯಿತು'. ಎಂಬುದು ನಿಜವಾದರೂ ಒಂಟಿಯಾಗಿ ಮಕ್ಕಳನ್ನು ಪೋಷಿಸುವಲ್ಲಿ ತಾಯಿಯು ಬಸವಳಿದು ಹೋಗುತ್ತಾಳೆ.

ಇಂದು ವಿವಾಹ ವಿಚ್ಛೇದನಗಳು ಹೆಚ್ಚಾಗುತ್ತಿವೆ. ಇದರಿಂದ ತಾಯಿ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಸಾಮಾಜಿಕವಾಗಿ ಧಿಕ್ಕರಿಸಲ್ಪಟ್ಟವಳು ಎಂಬ ಭವನೆ ಅವಳಲ್ಲಿ ಮೂಡಬಹುದು ತನ್ನ ಹಗೂ ಮಕ್ಕಳ ಭವಿಷ್ಯದ ಕುರಿತು ಆಕೆಗೆ ಹಲವು ಬಗೆಯ ಆರ್ಥಿಕ ಸಾಮಾಜಿಕ ಸವಾಲುಗಳು ಎದುರಾಗುತ್ತವೆ. ತಾನು ಸ್ವಾವಲಂಬಿಯಾಗಿದ್ದರೂ ಸುರಕ್ಷತೆಗಾಗಿ ತವರಿನ ಆಶ್ರಯ ಪಡೆಯುವುದು ಆಕೆಗೆ ಅನಿವಾರ್ಯವಾಗುತ್ತದೆ. ಹಾಗೆ ಮುಂದುವರೆದು ಮಕ್ಕಳನ್ನು ಪೋಷಿಸಿ ಬೆಳೆಸಿದ ನಂತರ ಅವರು ದೊಡ್ಡವರಾದ ಮೇಲೆ ಮತ್ತೆ ತಾನು ಒಬಂಟಿಯಾದೆ ಎಂಬ ಒಂಟಿತನದ ಸಮಸ್ಯೆ ಎದುರಾಗುತ್ತದೆ ಮರುಮದುವೆ ಯಾದರೂ ಸಮಸ್ಯೆ ತಪ್ಪಿದ್ದಲ್ಲ ಏಕೆಂದರೆ ಮುಂದೆ ಕೈ ಹಿಡಿಯುವವನು ತನನ್ನು ಹಾಗೂ ತನ್ನ ಮಕ್ಕಳನ್ನು ಚನ್ನಾಗಿ ನೋಡಿಕೊಳ್ಳುತ್ತಾನೆ ಎಂಬ ಭರವಸೆ ಆಕೆಗೆ ಇರುವುದಿಲ್ಲ. ಮಕ್ಕಳು ಸಹ ಎರಡನೇ ಅಪ್ಪನನ್ನು ಒಪ್ಪಿಕೊಳ್ಳದೇ ಹೋಗಬಹುದು.

ಒಂಟಿತಾಯಿಯಾಗಿ ಬದುಕುವ ಇನ್ನೊಂದು ಮುಖ್ಯ ಸಂಧರ್ಭವೆಂದರೆ ತನ್ನ ಗಂಡನನ್ನು ಕಳೆದುಕೊಂಡು ಮಕ್ಕಳನ್ನು ಏಕಾಂಗಿಯಾಗಿ ಸಲಹಿಕೊಳ್ಳುವುದು. ಹಿಂದಿನ ಕಾಲದಿಂದ ವಿಧವೆಯಾದ ತಾಯಿಯು ಹಲವು ಸವಾಲುಗಳನ್ನು ಎದುರಿಸುತ್ತಾ ಬಂದಿದ್ದಾಳೆ. ಗಂಡ ಸತ್ತರೆ ಹೆಂಡತಿಯೂ ಸಾಯಬೇಕು ಎಂಬ 'ಸತೀ ಪದ್ಧತಿ ' ಅಚರಣೆ ಜಾರಿಯಲ್ಲಿ ಇದ್ದದ್ದು ಮಹಿಳೆಯರ ಒಂಟಿ ಬದುಕು ಬದುಕಲು ಇರುವ ಸಾಮಾಜಿಕ ಅಡೆ ತಡೆಗಳನ್ನು ಸಾದಕ ಪಡಿಸುತ್ತದೆ, ಆದುನಿಕ ಕಾನೂನು 'ವಿಧವಾ ವಿವಾಹ'ವನ್ನು ಬೆಂಬಲಿಸಿದರೂ ನಮ್ಮ ಸಮಾಜ ಅದನ್ನು ಸಂಪೂರ್ಣವಾಗಿ ಒಪ್ಪಿಕೊಂಡಿಲ್ಲ. ವಿಧವೆಗೆ ಮಕ್ಕಳಿದ್ದರಂತು ಇನ್ನೊಂದು ಮದುವೆಗೆ ಕುಟುಂಬದವರಾಗಲೀ ಸಮಜದವರಾದಲೀ ಒಪ್ಪುವುದೇ ಇಲ್ಲ ಕೆಲ ಸಂಧರ್ಭದಲ್ಲಿ ಒಪ್ಪಿದರೂ ತಾನೆಲ್ಲಿ ಸ್ವಾರ್ಥಿ ಆಗಿದ್ದೇನೆ ಎಂಬ ಅಪರಾಧಿ ಮನೋಭಾವ ಬೆಳೆಸಿಲೆಕೊಳ್ಳುವುದು, ತನ್ನ ಮಕ್ಕಳು ಎರಡನೇ ತಂದೆಯನ್ನು ಯಾವ ಬಗೆಯಲ್ಲಿ ಸ್ವೀಕರಿಸುತ್ತಾರೆ ಎಂಬ ಗುಮಾನಿ ಮತ್ತು ಆತ ತನ್ನ ಮಕ್ಕಳನ್ನು ತಂದೆ ಸ್ಥಾನ ತುಂಬಿ ಕೊಡುವ ಕುರಿತು ಸಂಶಯಗಳು ವಿಧವಾ ತಾಯಂದಿರನ್ನು ಕಾಡುತ್ತವೆ.

ಮಕ್ಕಳನ್ನು ಬೆಳೆಸುವಲ್ಲಿ ಹಲವು ಸವಾಲುಗಳನ್ನು ಒಂಟಿ ತಾಯಂದಿರು ಎದುರಿಸಬೇಕಾಗುತ್ತದೆ. ನಮ್ಮ ಸಮಾಜದಲ್ಲಿ ಹಲವು ಮಹಿಳೆಯರು ಒಂಟಿ ತಾಯಂದಿರಾಗಿ ಬದುಕುತ್ತಿದ್ದಾರೆ. ರಾಮಾಯಣದಲ್ಲಿ ಬರುವ ಸೀತೆ ತನ್ನ ಅವಳಿ ಮಕ್ಕಳನ್ನು ಒಂಟಿ ತಾಯಿಯಾಗಿಯೇ ಪಾಲನೆ ಮಾಡಿದಾಳೆ ವಿವಾಹ ವಿಚ್ಛೇದನ ಕಾರಣವಾಗಿಯೇ ಕುಟುಂಬ ಕಲಹದಿಂದಾಗಿಯೇ, ಗಂಡನನ್ನು ಕಳೆದುಕೊಂಡದ್ದಕ್ಕಾಗಿಯೇ ಹಲವು ಮಹಿಳೆಯರು ಒಂಟಿ ತಾಯಂದಿರಾಗಿ ತನ್ನ ತಯ್ತನವನ್ನು ಧಾರೆ ಎರಯುತ್ತಿದ್ದಾರೆ. ಉದಾಹರಣೆ ಎಂಬಂತೆ ಬಲಿವುಡನಲ್ಲಿ ಹಲವು ನಟಿಯರು ಒಂಟಿ ತಯಂದಿರಾಗಿ ತಂದೆಯ ಸ್ಥನವನ್ನು ತಯಿಯೇ ತುಂಬಿ ಮಕ್ಕಳನ್ನು ಸಶಕ್ತವಾಗಿ ಸಾಕಿ ಬೆಳೆಸಿದ್ದನ್ನು ಗಮನಿಸಬಹುದು.

ಕರಣಾಂತರದಿಂದ ಸಿಂಗಲ ಮದರ ಅಗಿ ತಮ್ಮ ಮಕ್ಕಳನ್ನು ಉತ್ತಮ ರೀತಿಯಲ್ಲಿ ಸಾಕುತ್ತಿದ್ದಾರೆ. ಕರಿಷ್ಮಾ ಕಪೂರ ತನ್ನ ಇಬ್ಬರು ಮಕ್ಕಳನ್ನು ಒಂಟಿ ತಾಯಿಯಗಿ ಪೋಷಿಸುತ್ತಿದ್ದಾಳೆ. ಖ್ಯಾತನಟ ಸೈಫ ಅಲಿ ಖಾನ ಅವರ ಮೊದಲ ಹೆಂಡತಿ ಅಮೃತಾ ಸಿಂಗ ಇಬ್ಬರು ಮಕ್ಕಳನ್ನು ಒಂಟಿಯಾಗಿ ಸಲಹುತ್ತಿದ್ದಾರೆ. ಖ್ಯಾತ ನಟಿಯರಾದ ಕರಿಷ್ಮಾ ಮತ್ತು ಕರೀನಾ ಕಪೂರ ಇಬ್ಬರನ್ನು ಅವರ ತಾಯಿ ಬಬಿತಾ ಕಪೂರ ತನ್ನ ಗಂಡನಾದ ನಟ ರಣದೀರ ಕಪೂರ ನಿಂದ ಬೇರೆಯಗಿಯೇ ಪಲನೆ ಪೋಷಣೆ ಮಾಡಿದ್ದಾಳೆ ಕನ್ನಡ ಖ್ಯಾತ ನಟಿ ಶೃತಿ ಕೂಡ ಒಂಟಿತಾಯಿ ಆಗಿರುವುದು ಗಮನಿಸಬಹುದು.

ಒಂಟಿ ತಯ್ತನದ ಸವಾಲುಗಳನ್ನು ಎದುರಿಸಬೇಕಾದರೆ ತಾಯಿಯಾದ ಮಹಿಳೆ ತಾನೊಬ್ಬಳು ವ್ಯಕ್ತಿ, ತನಗೂ ತನ್ನದೇ ಅದ ಅಸೆ ಅಕಾಂಕ್ಷೆ ಇವೆ ಎಂಬುದನ್ನು ಮರೆಯಬಾರದು. ತಾನು ಶಿಕ್ಷಣವನ್ನು ಪಡೆದು ಆರ್ಥಿಕವಾಗಿ ಸ್ವಾಲಂಬನೆಯಾಗಿ ಬದುಕಬೆಕು. ಸಮಜದ ಟೀಕೆಗಳಿಗೆ ಬೆಲೆಕೊಡದೆ ತನ್ನ ಹಾಗೂ ತನ್ನ ಮಕ್ಕಳ ಹಿತ ದೃಷ್ಟಿಯಿಂದ ಮುಂದಿನ ಹೆಜ್ಜೆಗಳನ್ನಿಡಬೇಕು. ವೈಯಕ್ತಿಕವಾಗಿ, ಸಾಮಾಜಿಕವಾಗಿ ಎಲ್ಲವನ್ನು ಎದುರಿಸಿ ನಿಲ್ಲುವ ಧೈರ್ಯ ತಂದುಕೊಳ್ಳುವುದು ಮುಖ್ಯ. ಮುಖ್ಯವಾಗಿ ಹೇಳಬೇಕೆಂದರೆ ತಾಯಿ ಯಾರೆ ಆಗಿ ರಲೀ ಅಂದರೆ ಅತ್ಯಾಚಾರಕ್ಕೆ ಬಲಿಯಾದ ತಾಯಿ ಇರಬಹುದು, ವಿವಹ ಪೂರ್ವ ತಾಯಿ ಯಾಗಿರಬಹುದು. ಹಾಗೂ ವಿಧಿವಶಾತ ಗಂಡನನ್ನು ಕಳೆದುಕೊಂಡ ವಿಧವಾ ತಾಯಂದಿರಾಗಿರಬಹುದು. ಇವರೆಲ್ಲರನ್ನು ಮಾನವೀಯತೆಯ ದೃಷ್ಠಿಯಿಂದ ಕಾಣಬೇಕು ಆಕೆಯ ತಾಯ್ತನಕ್ಕೆ ನಾವು ಬೆಲೆ ಕೊಡಲೇ ಬೇಕು ಸಾಮಾಜಿಕವಾಗಿ ಕೌಟುಂಬಿಕವಗಿ ಈ ತಾಯಂದಿರಿಗೆ ಗೌರವ ದೊರೆತಾಗ ಮಾತ್ರ ಅವರು ಮನಸಿಕವಾಗಿ ನೆಮ್ಮದಿ ಹೊಂದಲು ಸಾದ್ಯ.

## ಪ್ರಣಾಳ ಶಿಶು

ಆಧುನಿಕ ಕಾಲ ದಂಪತಿಗಳಲ್ಲಿನ ಬಂಜೆತನ ನಿವಾರಿಸಲು ಹಲವು ವೈಜ್ಞಾನಿಕ ತಂತ್ರಗಳನ್ನು ಬಳಸಲಾಗುತ್ತಿದೆ. ಅಂತಹ ತಂತ್ರಗಳಲ್ಲಿ ಮುಖ್ಯವೂ ಪ್ರಚಲಿತವೂ ಅದ ತಂತ್ರಕ್ಷಾವೆಂದರೆ ಪ್ರಣಾಳಶಿಶು ತಂತ್ರ. ಸಂತಾನ ಇಲ್ಲದೆ ಕೊರಗುವ ಹಾಗೂ ನೈಸರ್ಗಿಕವಾಗಿ

ಅಂದರೆ ಸಹಜವಾಗಿ ಗರ್ಭಧಾರಣೆಯಾಗದೆ ಇರುವಾಗ ವೈದ್ಯರು ಪ್ರಣಾಳ ಶಿಶುತಂತ್ರದಿಂದ ಗರ್ಭಕಟ್ಟುವ ಹಾಗೆ ಮಾಡುತ್ತಾರೆ. ಇದು ವೈದ್ಯಕೀಯ ಕ್ಷೇತ್ರದಲ್ಲಿ ಹೊಸ ಆವಿಷ್ಕಾರವೆಂದೆ ಹೇಳಬಹುದು. ಈ ತಂತ್ರಜ್ಞಾನದಲ್ಲಿ ಅಂಡಾಣು ಮತ್ತು ವೀರ್ಯಾಣುಗಳೆರಡನ್ನೂ ದೇಹದಿಂದ ಹೊರತೆಗೆದು ಪ್ರಯೋಗಾಲಯದ ಪ್ರಣಾಳದಲ್ಲಿ ಬೆರೆಸಿ ತಾಯಿಯ ಗರ್ಭದ ಹೊರಗೆ ಫಲಿತಗೊಳ್ಳುವ, ಹಾಗೆ ನೋಡಿಕೊಳ್ಳಲಾಗುತ್ತದೆ ಅದಕ್ಕಾಗಿ ಇದನ್ನು ಪ್ರಣಾಳ ಶಿಶು ಎಂದು ಕರೆಯುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾದ ಅಂಶವೆಂದರೆ ಇಲ್ಲಿ ಅಂಡಾಣುವು ಮಹಿಳೆಯ ಗರ್ಭದಲ್ಲಿ ಫಲಿತಗೊಳ್ಳದೆ, ಹೊಸ ತಂತ್ರಜ್ಞಾನ ಬಳಸಿ ಗಾಜಿನ ಬಟ್ಟಲನು ಬಳಸಿ ವೈದ್ಯರ ಪ್ರಯೋಗಾಲಯದಲ್ಲಿ ಫಲಿಸುವಂತೆ ಮಾಡಲಾಗುತ್ತದೆ. ನಂತರ ಫಲಿತಗೊಂಡ ಭ್ರೂಣವನ್ನು ಹೆಣ್ಣಿನ ಗರ್ಭಾಶಯಕ್ಕೆ ಬಿಡಲಗುತ್ತದೆ. ಈ ರೀತಿ ಗರ್ಭ ಕಟ್ಟಿಕೊಳ್ಳಲು ಅವಕಾಶ ಮಾಡಿಕೊಡುವುದೇ ಈ ಪ್ರಣಾಳಶಿಶು ತಂತ್ರಜ್ಞಾನ ಎಂದು ಹೇಳಬಹುದು.

ಈ ತಂತ್ರಗರಿಕೆ ಆಧುನಿಕ ಕಾಲದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಹೆಣ್ಣುಮಕ್ಕಳಲ್ಲಿ ಕಾಣಿಸಿಕೊಳ್ಳುವ ಹಲವು ಬಗೆಯ ಸಮಸ್ಯೆಯಿಂದ ಅಂಡನಾಳದ ಮುಲಕ ವೀರ್ಯಾಣು ಸಾಗ ಲು ಸಮರ್ಥ ಇಲ್ಲದಾಗ, ಪತಿಯಲ್ಲಿ ತಂದೆಯಾಗಳು ಕೆಲ ಸಮಸ್ಯೆಗಳಿದ್ದಾಗ, ಸಮಯಕ್ಕೆ ಸರಿಯಾಗಿ ಅಂಡಾನು ಬಿಡುಗಡೆ ಅಗದೆ ಹೋದಾಗ ಹೆಣ್ಣುಮಕ್ಕಳ ಗರ್ಭಕ್ಕೆ ಸಂಭಂದಿಸಿದಂತೆ ಹಲವು ತೊಂದರೆಗಳನ್ನು ಅನುಭವಿಸುವಾಗ ಹೀಗೆ ಹಲವು ಸಂಧರ್ಭಗಳಲ್ಲಿ ಪ್ರಣಾಳಶಿಶು ತಂತ್ರಗಾರಿಕೆಯನ್ನು ಬಳಸಲಗುತ್ತದೆ. ಈ ತಂತ್ರಗರಿಕೆ ತಾಯಂದಿರಿಗೆ ವರದಾನವಾದರೂ ಇದಕ್ಕೆ ತಗಲುವ ವೆಚ್ಚ ಲಕ್ಷಗಟ್ಟಲೆಯಾಗಿರುತ್ತದೆ. ಆಧುನಿಕ ಕಾಲದ ಹೆಣ್ಣುಮಕ್ಕಳ ಶ್ರೀಮಂತರಾಗಿದ್ದರೆ ಮತ್ರ ಬಂಜೆ ಎಂಬ ಶಬ್ದದಿಂದ ಮುಕ್ತಿ ಪಡೆಯಲು ಸಾದ್ಯ. ಹಾಗೆ ನೋಡಿದರೆ ಬಂಜೆತನವೆಂಬುದು ಶಾಪವೆನಲ್ಲ ಅದು ಕೂಡ ಒಂದು ಬಗೆಯ ಇತರ ಸಾಮಾನ್ಯ ರೋಗದಂತೆ, ಮಕ್ಕಳಾಗದೆ ಇರುವುದನ್ನು ಸೂಕ್ತ ಕಾರಣ ಹುಡುಕಿ ಅದನ್ನು ಚಿಕಿತ್ಸೆ ಪಡೆಯುದರ ಮೂಲಕ ಪರಿಹಾರ ಕಂಡುಕೊಳ್ಳಬಹುದು ಆದರೆ ಇಂದು ದೇಶದಲ್ಲಿ ಮಕ್ಕಳಾಗದೇ ಇರುವ ಹೆಣ್ಣು ಮಕ್ಕಳನ್ನು ಬಂಜೆ ಎಂದು ಹಿಯಾಳಿಸಿ ನುಡಿಯುವವರೆ ಹೆಚ್ಚು ಪೂರ್ವ ಜನ್ಮದಲ್ಲಿ ಪಾಪ ಮಾಡಿದರೆ ಮಕ್ಕಳಾಗುವುದಿಲ್ಲ, ಮಕ್ಕಳು ಪೂರ್ವ ಜನ್ಮದ ಪುಣ್ಯದ ಫಲ ಎಂದು ಹೇಳುವವರೇ ಹೆಚ್ಚು, ಅದಕ್ಕಾಗಿ ಪೂಜೆ ಪುನಸ್ಕಾರ, ತಂತ್ರ ಮಂತ್ರ ಮಾಟ ಮಾಡುವುದು, ಉಪವಾಸ ಮಾಡುವುದು ಮೂಢನಂಬಿಕೆಗಳನ್ನು ಅನುಸರಿಸುವುದು ಸಾಮಾನ್ಯವಾಗಿದೆ. ಆಧುನಿಕ ತಾಯಂದಿರು ಇದರಿಂದ ಹೊರಬರಬೇಕು ಮಕ್ಕಳನ್ನು ಪಡೆಯಲೇ ಬೇಕು ಎಂಬ ಉತ್ಕಟ ಇಚ್ಛೆ ಇದ್ದರೆ ವೈಜ್ಞಾನಿಕವಾಗಿ ಆಲೋಚಿಸಿ ಮುಂದು ವರೆಯಬೇಕು ಅದನ್ನು ಬಿಟ್ಟು ಮೂಢ ನಂಬಿಕೆಗಳನ್ನು ನಂಬಿ ತಮ್ಮ ಸಮಯ ಮತ್ತು ಹಣವನ್ನು ವ್ಯರ್ಥವಾಗಿ ಕಳೆದುಕೊಂಡು ಜೀವನದಲ್ಲಿ ನಿರಾಶೆ ತುಂಬಿಕೊಂಡು ಬಾಳುತ್ತಿರುತ್ತಾರೆ. ಆಧುನಿಕ ತಾಯಂದಿರು ಈ ಬಗೆಯ ಸವಾಲುಗಳನ್ನು ಎದುರಿಸುತ್ತಿದ್ದಾರೆ. ವೈದ್ಯಿಕೀಯ ಕ್ಷೇತ್ರವೂ ಸಹ ತಾಯಂದಿರಿಗೆ ಶೋಷಣೆಗೆ ಇಡು ಮಾಡುತ್ತದೆ.

ಆಧುನಿಕ ತಂತ್ರಜ್ಞಾನವೂ ಹೆಣ್ಣಿನ ಗರ್ಭಾಶಯವನ್ನ ಮುಖ್ಯವಾಗಿಟ್ಟುಕೊಂಡ ಹಲವು ರೀತಿಯಲ್ಲಿ ಶೋಷಿಸುತ್ತದೆ "ಹೆಣ್ಣಿನ ಬಸಿರನ್ನು ಪ್ರಧಾನವಾಗಿರಿಸಿಕೊಂಡು ವೈದ್ಯಕೀಯ ಪ್ರಾಯೋಗಿಕ ಪರೀಕ್ಷೆಗಾಗಿ ಅನೈತಿಕ ನೆಲೆಗಳಲ್ಲಿ ಭಾರತದ ಬಡ ಹೆಣ್ಣು ಮಕ್ಕಳನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುವ ಕುರಿತು ಇಂದಿನ ಹಲವು ಸಮೀಕ್ಷೆಗಳು ಬೆಳಕು ತೋರುತ್ತಿವೆ. ೨೦೦೨ರಲ್ಲಿ ಬಾಡಿಗೆ ತಾಯಂದಿರ ಹಕ್ಕನ್ನು ಕಾನೂನುಬದ್ಧಗೊಳಿಸಿದ ನಂತರ ಭಾರತದ ಅನೇಕ ಬಡಹೆಣ್ಣು ಮಕ್ಕಳು ಹಣಗಳಿಕೆಯ ಮಾರ್ಗವಾಗಿ ಇದನ್ನು ಬಳಸಿಕೊಳ್ಳುತ್ತಿದ್ದಾರೆ. ಇದು ಒಂದು ರೀತಿಯಲ್ಲಿ ನಿಜವೂ ಹೌದು ಅದರೆ ಬಡತನ, ಅಸಹಾಯಕತೆಗಳು ನಮ್ಮ ಹೆಣ್ಣು ಮಕ್ಕಳೊಂದ ಏನೆಲ್ಲ ಕೃತ್ಯಗಳನ್ನು ಮಾಡಿಸುತ್ತದೆ, ಎಂಬುದಕ್ಕೆ ಅನೇಕ ಅದಾಹರಣೆಗಳು ನಮ್ಮ ಮುಂದಿವೆ "[೧೨] ಈ ಹಿನ್ನೆಲೆಯಲ್ಲಿ ಗಮನಿಸಿದಾಗ ನಮ್ಮ ಆಧುನಿಕ ವೈದ್ಯಕೀಯ ಕ್ಷೇತ್ರ ನಮ್ಮ ತಯಂದಿರನ್ನು ತಮಗೆ ಬೇಕಾದ ರೀತಿಯಲ್ಲಿ ಶೋಷಣೆಗೆ ಗುರಿಮಾಡಿ ಹಣಗಳಿಸುವ ಸಾಧನವಾಗಿ ಮಾಡಿಕೊಂಡಿರುವುದು ಸತ್ಯ.

ಇಂದು ನಮ್ಮ ತಾಯಂದಿರು ರಾಜಾರೋಷವಾಗಿ ಮಾರುಕಟ್ಟೆಯಲ್ಲಿ ಮಾರುತ್ತಿದ್ದಾರೆ. ಇವರ ಪರಿಣಾಮವಾಗಿ ತಾಯಂದಿರು ಹಲವು ರೋಗಗಳಿಗೆ ತುತ್ತಾಗುತ್ತಿರುವುದು ಕಂಡು ಬರುತ್ತಿದೆ. ಇಲ್ಲಿ ಮುಖ್ಯವಾಗಿ ಗಮನಿಸಬಹುದಾದ ಅಂಶವೆಂದರೆ "ಮಹಿಳೆ ವೈದ್ಯರಂಗದ ಪ್ರಯೋಗ ಪಶುವಾಗಿದ್ದಾಳೆ. ಸಂತಾನ ನಿರೋಧಕಗಳು ಭಾರತದಲ್ಲಿ ಬಳಕೆಯಾಗುತ್ತಿದ್ದು ಮಹಿಳೆಯನ್ನು ಅತಿ ಸಂತಾನದಿಂದ ಮುಕ್ತಗೊಳಿಸಿವೆ ನಿಜ. ಆದರೆ ವಿದೇಶಗಳಲ್ಲಿ ನಿಷೇದಿತವಾದ ನಾರಪ್ಲಾಂಟ ಮೊದಲಾದ ಸಂತಾನ ನಿರೋಧಕಗಳಿಂದ ಮಹಿಳೆಯ ಆರೋಗ್ಯದ ಮೇಲೆ ದುಷ್ಪರಿಣಾಮವುಂಟಾಗುತ್ತಿದೆ ಏಡ್ಸ ಜಾಹಿರಾತುಗಳು ಪುರುಷ ಕೇಂದ್ರಿತವಾಗಿದ್ದು ಕಾಂಡೊಮ ಧರಿಸಿ ಏಡ್ಸನಿಂದ ತಪ್ಪಿಸಿಕೊಳ್ಳಿ ಎಂದು ಕೇವಲ ಪುರುಷರ ಸಂರಕ್ಷಣೆಯನ್ನು ಮಾಡಲಾಗುತ್ತಿದೆಯೇ ಹೊರತು ಮಹಿಳೆಯ ರಕ್ಷಣೆಯತ್ತ ವಿಜ್ಞಾನ ಗಮನ ಹರಿಸುತ್ತಿಲ್ಲ "[೧೩] ಅದಕ್ಕಾಗಿ ನಮ್ಮ ತಾಯಂದಿರು ಜಾಗರೂಕರಾಗುವುದು ಮುಖ್ಯವಾಗಿದೆ.

<u>ಬಾಡಿಗೆ ತಾಯ್ತನ</u>

ಆಧುನಿಕ ವಿಜ್ಞಾನದ ಪರಿಣಾಮವಾಗಿ ಇಂದು ಬಾಡಿಗೆ ತಾಯ್ತನದವೆಂಬ ಪರಿಕಲ್ಪನೆ ಬೆಳೆದು ವಿಶೇಷವಾಗಿದೆ. ಜಗತ್ತಿನಾದ್ಯಂತ ಇಂದು ಬಾಡಿಗೆ ತಾಯ್ತನ ಎನ್ನುವುದು ಸಾಮಾನ್ಯವಾಗಿ ತನ್ನ ಅಸ್ತಿತ್ವ ಪಡೆಯುತ್ತಿದೆ ನಮ್ಮ ದೇಶದಲ್ಲಿಯೂ ಇದು ಬಹು ವ್ಯಾಪಕವಾಗಿ ಬೆಳೆಯುತ್ತ ನಡೆದಿದೆ. ಬಾಡಿಗೆ ತಾಯಿ ಎಂದರೆ ಹೆಸರೆ ಹೇಳುವಂತೆ ಇಲ್ಲಿ ಮತ್ತೊಬ್ಬರ ಮಗುವನ್ನು ತನ್ನ ಗರ್ಭದಲ್ಲಿ ಬೆಳೆಯಲು ಅವಕಾಶ ಕೊಟ್ಟು ಪ್ರತಿಯಾಗಿ ತನಗೆ ಬೇಕದಷ್ಟು ಹಣವನ್ನು ಪಡೆಯುವ ಒಂದು ವ್ಯವಸ್ಥೆಯಾಗಿದೆ. ಅಂದರೆ ಬೇರೊಬ್ಬರ ಮಗುವನ್ನು ತನ್ನ ಗರ್ಭದೊಳಗೆ

ಒಂಭತ್ತು ತಿಂಗಳು ಜೋಪಾನವಾಗಿ ಇಟ್ಟು ಕೊಂಡು ಹೆತ್ತು ಕೊಡುತ್ತಾರೋ ಅವರಿಗೆ ಬಾಡಿಗೆ ತಾಯಿ ಎಂದು ಕರೆಯಲಾಗುತ್ತದೆ. ವೈದ್ಯಕೀಯ ಜಗತ್ತಿನಲ್ಲಿ ಐವಿಎಫ್ ನಂಥ ತಂತ್ರಜ್ಞಾನವನ್ನು ಬಳಸಿಕೊಂಡ ಹೆಣ್ಣೊಬ್ಬಳು ಗರ್ಭ ಧರಿಸುತ್ತಾಳೆ. ಮಗು ಬೆಳೆಯಲು ಒಂಬತ್ತು ತಿಂಗಳು ಅವಕಾಶ ಕಲ್ಪಿಸಿ ಹೆರಿಗೆ ನಂತರ ದಂಪತಿಗಳಿಗೆ ಮಗುವನ್ನು ಒಪ್ಪಿಸುತ್ತಾಳೆ. ಈ ತಂತ್ರಗಾರಿಕೆಯನ್ನು ಐವಿಎಫ್ ಅಂದರೆ ಇನ್ ವಿಟ್ರೊ ಫರ್ಟಿಲೈಜೇಷನ ಎಂದು ಕರೆಯಲಾಗುತ್ತದೆ. ತಾಯಿಯ ಅಂಡಾಣು ಜೊತೆ ತಂದೆಯ ವೀರ್ಯಾಣು ಸೇರಿಸಿ ಫಲವಂತಿಕೆ ಮಾಡಿ, ನಂತರ ಅದನ್ನು ಬಾಡಿಗೆ ತಾಯಿಯ ಗರ್ಭಕ್ಕೆ ಸೇರಿಸಲಾಗುತ್ತದೆ. ಅದನ್ನು ಆಕೆ ಜನನ ನೀಡುವವರಿಗೆ ಗರ್ಭದಲ್ಲಿ ಪೋಷಿಸುತ್ತಾಳೆ.

ಇಂದು ಬಾಡಿಗೆ ತಾಯ್ತನ ಹೆಚ್ಚು ಚರ್ಚೆಗೆ ಒಳಗಾಗುತ್ತಿದೆ. ಇದರ ಒಳಿತು ಕೆಡಕುಗಳನ್ನು ಪಟ್ಟಿಮಾಡು ಬೇಕೋ ಬೇಡವೋ ಎಂಬ ನಿರ್ಧಾರ ಮಾಡುವುದು ಕಷ್ಟ 'ಬಾಡಿಗೆ ತಾಯ್ತನ' ಅಥವಾ ಸರೊಗಸಿ ಮದರ ಎಂಬ ಸಮಸ್ಯೆ ಸರಳವಾದದ್ದಲ್ಲ. ಇದು ತನ್ನ ತೆಕ್ಕೆಯಲ್ಲಿ ಹಲವು ಬಗೆಯ ಒಳಿತು ಮತ್ತು ಕೆಡಕುಗಳನ್ನು ಇಟ್ಟುಕೊಂಡಿದೆ. ಇದನ್ನು ಹಲವು ದೃಷ್ಟಿಕೊನದಲ್ಲಿ ನೋಡಿ ಮಿವಳಿಸಿ ಇದರಿಂದ ಉದ್ಭವಿಸುವ ಹಲವು ಬಗೆಯ ಸಮಸ್ಯೆಗಳನ್ನು ಕುಲಂಕುಶವಾಗಿ ಪರೀಶಿಲಿಸಬೇಕಾಗುತ್ತದೆ.

<u>ಬಾಡಿಗೆ ತಾಯ್ತನದ ಕುರಿತಾದ ಸಕಾರಾತ್ಮಗ ನಿಲುವುಗಳೆಂದರೆ</u>

* ಮಕ್ಕಳಿಲ್ಲ ಹೆಣ್ಣುಮಕ್ಕಳಿಗೆ ಬಂಜೆ ಪಟ್ಟದಿಂದ ಮುಕ್ತಗೊಳಿಸುತ್ತದೆ.
* ತಮಗೆ ಮಕ್ಕಳಿಲ್ಲ ಎಂದು ಕೊರಗುವ ದಂಪತಿಗಳಿಗೆ ಆಶಾಕಿರಣವಾಗಿದೆ
* ಸಲಿಂಗಿಗಳಿಗೆ, ಲಿಂಗ ಪರಿವರ್ತನೆ ಮಾಡಿಕೊಂಡವರಿಗೆ, ಉಭಯಲಿಂಗಿಗಳಿಗೆ ಇದು ವರದಾನವಾಗಿದೆ
* ಹೊಸ ಹೊಸ ವಿಜ್ಞಾನ ಮತ್ತು ತಂತ್ರಗಾರಿಕೆಯನ್ನು ಬಳಸಿಕೊಳ್ಳುವುದು ಒಳ್ಳೆಯದು
* ಇದು ಪರಹಿತಕಾರಿಯಾದ ಪರಿಕಲ್ಪನೆ

<u>ಬಾಡಿಗೆ ತಾಯ್ತನದ ಕುರಿತಾದ ನಕಾರಾತ್ಮಕ ನೀಲುವುಗಳೆಂದರೆ</u>

* ಬಡ ಮಹಿಳೆಯರನು ಶೋಷಣೆಗೆ ಗುರಿ ಮಾಡುತ್ತದೆ
* ತಾಯ್ತನದವೆಂಬುದು ಒಂದು ಉದ್ಯಮವಾಗಿ ಪರಿಣಮಿಸಬಹುದು
* ತಾಯಿ ಮತ್ತು ಮಗುವಿನ ಭಾವನೆಗಳೊಂದಿಗೆ ಆಟವಾಡಿದಂತಾಗುವುದು
* ಮಗುವಿನಲ್ಲಿ ಯಾವುದಾದರೂ ಊನ ಕಂಡು ಬಂದರೆ ಅದಕ್ಕಾಗಿ ಬಾಡಿಗೆ ತಾಯಿಯನ್ನು ದೂಷಿಸಬಹುದು
* ಮಗುವಿಗೆ ತಾಯಿಯ ಮೊಲೆ ಹಾಲಿನಿಂದ ವಂಚಿಸಿದಂತಾಗುತ್ತದೆ.
* ತಾಯ್ತನವೆಂಬ ಮೌಲ್ಯಕ್ಕೆ ಧಕ್ಕೆಯುಂಟಾಗುತ್ತದೆ.

* ತಾಯ್ತನವನ್ನು ಮಾರಿಕೊಂಡಂತಾಗುತ್ತದೆ.
* ಜನಸಂಖ್ಯೆ ಹೆಚ್ಚುತ್ತದೆ.
* ನಮ್ಮ ದೇಶಕ್ಕೆ ಒಗ್ಗಿಕೊಳ್ಳುವ ಪರಿಕಲ್ಪನೆ ಅಲ್ಲ
* ನೈತಿಕವಾಗಿ ಸಾಂಸ್ಕೃತಿಕವಾಗಿ ಇದು ಸರಿಯಲ್ಲ

ಕಾನೂನಿನ ದೃಷ್ಠಿಯಲ್ಲಿ ಬಾಡಿಗೆ ತಾಯ್ತನಕ್ಕೆ ಕಡಿವಾಣ ಹಾಕಲಾಗುತ್ತಿದೆ. ಏಕೆಂದರೆ ಭಾರತದಲ್ಲಿ ಬಹುವಾಗಿ ವ್ಯಾಪಿಸಲಾಗುತ್ತದೆ. ಇರುವ ಬಾಡಿಗೆ ತಾಯ್ತನದ ಕುರಿತು ಹಲವು ಚರ್ಚೆಗಳಗುತ್ತಿವೆ ಶ್ರೀಮಂತರಾದವು ಇದರ ದುರ್ಲಾಭ ಪಡೆಯುತ್ತಿದ್ದಾರೆ. ಅಷ್ಟೇ ಏಕೆ ಬಾಲಿವುಡನಲ್ಲಿ ಕಾರ್ಯ ನಿರ್ವಹಿಸುವ ಹಲವು ಪ್ರತಿಷ್ಠಿತ ಶ್ರೀಮಂತರು ತಮ್ಮ ಶೋಕಿಗಾಗಿ ಬಾಡಿಗೆ ತಾಯ್ತನದ ಮೂಲಕ ಮಕ್ಕಳನ್ನು ಪಡೆಯುತ್ತಿದ್ದಾರೆ ಉದಾ: ಕರಣ್ ಜೋಹರ ತುಷಾರ ಕಪೂರ, ಶಾರುಖ ಖಾನ, ಅಮೀರ ಖಾನ, ಸೋಹೇಲ ಖಾನ ಹೀಗೆ ಮುಂತಾದ ಶ್ರೀಮಂತರು ಇಗಾಗಲೇ ಬಾಡಿಗೆ ತಾಯ್ತನದ ಮೂಲಕ ಮಕ್ಕಳನ್ನು ಪಡೆದುಕೊಂಡಿದ್ದಾರೆ. ಜಗತ್ತಿನ ಹಲವು ದೇಶಗಳಲ್ಲಿ ಬಾಡಿಗೆ ತಾಯ್ತನದ ಪರಿಕಲ್ಪನೆಗೆ ವಿರೋಧವಿದೆ. ಆಸ್ಟ್ರೇಲಿಯಾದಲ್ಲಿ ಮಕ್ಕಳನ್ನು ಪಡೆಯುವ ದಂಪತಿಗಳಿಗೆ ತೀರಾ ಹತ್ತಿರದ ಸ್ನೇಹಿತರು ಮತ್ತು ಸಂಬಂಧಿಕರು ಮತ್ರ ಪರಹಿತ ಬಾಡಿಗೆ ತಾಯಿಯಾಗಬಹುದು. ಚೀನಾ ದೇಶದಲ್ಲಿ ಎಲ್ಲ ಮಾದರಿಯ ಬಾಡಿಗೆತಾಯಿ ಚಟುವಟಿಕೆ ಮೇಲೆ ನೀಷೇಧ ಹೇರಲಾಗುತ್ತದೆ. ಬ್ರಿಟನ ದೇಶದಲ್ಲಿ ರಕ್ತ ಸಂಬಂಧಿಗಳಲ್ಲಿ ಬಾಡಿಗೆ ತಾಯ್ತನಕ್ಕೆ ಅವಕಾಶವಿದೆ. ಅಮೇರಿಕದಲ್ಲಿ ಕೆಲವು ರಾಜ್ಯಗಳಲ್ಲಿ ವಾಣಿಜ್ಯ ಉದ್ದೇಶದ ಬಾಡಿಗೆ ತಾಯ್ತನಕ್ಕೆ ಅವಕಾಶವಿದೆ ಇನ್ನು ಕೆಲವು ರಾಜ್ಯಗಳಲ್ಲಿ ಬಾಡಿಗೆ ತಾಯಿ ಚಟುವಟಿಕೆಗೆ ಅವಕಾಶ ಇಲ್ಲದಿರುವುದು ಗಮನಿಸಬಹುದು.

ಹೀಗೆ ಬಾಡಿಗೆ ತಾಯ್ತನ ಹಲವು ದೇಶಗಳಲ್ಲಿ ಅದರ ಸಾಧಕ ಭಾದಕಗಳನ್ನು ಗಮನಿಸಿ, ಚರ್ಚಿಸಿ ಸೂಕ್ತವಾದ ಕಾನೂನುಗಳನ್ನು ಜಾರಿಗೆ ತರಲಾಗುತ್ತದೆ. ಆಧುನಿಕ ಕಾಲದಲ್ಲಿ ತಾಯ್ತನವನ್ನು ವಾಣಿಜ್ಯ ಉದದ್ದೇಶಕ್ಕಾಗಿ ಅಥವಾ ಗರ್ಭೋದ್ದುಮದ ಉದ್ದೇಶಕ್ಕಾಗಿ ಬಳಸಿಕೊಳ್ಳುವ ವ್ಯವಹಾರಿಕ ಹುನ್ನಾರವನ್ನು ತಪ್ಪಿಸಲು ಭಾರತದಲ್ಲಿ ಕೇಂದ್ರ ಸರಕಾರ ಬಾಡಿಗೆ ತಾಯಿಗೆ ಸಂಬಂದಿಸಿದಂತೆ ಕೆಲವು ಕಾನೂನುಗಳನ್ನು ರೂಪಿಸಿದೆ ಸರೊಗಸಿ (ನಿಯಂತ್ರಣ) ವಿಧೇಯಕವನ್ನು ೨೦೧೬ರ ನವೆಂಬರನಲ್ಲಿ ಕೇಂದ್ರ ಆರೋಗ್ಯ ಸಚಿವ ಜೆ,ಪಿ. ನಡ್ಡಾ ಅವರು ಲೋಕಸಭೆಯಲ್ಲಿ ಮಂಡಿಸಿದರು.ವಿನಹ ಯಾವುದೇ ಪ್ರಕಾರದ ವ್ಯವಹಾರಿಕ ಚಟುವಟಿಕೆಗಳು ಇರಕೂಡದು. ಮಕ್ಕಳನ್ನು ಪಡೆಯುವ ದಂಪತಿಯ ವಯಸ್ಸು ಇಪ್ಪತ್ತೂರರಿಂದ ಐವತ್ತರೊಳಗೆ ಇಬೇಕು ಬಾಡಿಗೆ ತಾಯಿ ಮೂಲಕ ಮಗು ಹೊಂದಿದ ದಂಪತಿ ಯಾವುದೇ ಪರಿಸ್ಥಿತಿಯಲ್ಲೂ ಆ ಮಗುವನ್ನು ತ್ಯಜಿಸುವಂತಿಲ್ಲ.

ಬಾಡಿಗೆ ತಾಯಿಯ ಮೂಲಕ ಮಕ್ಕಳನ್ನು ಪಡೆಯುವ ದಂಪತಿಗಳಿಗೆ ಈ ಮೊದಲ ಯಾವುದೇ ಸ್ವಂತ ಮಕ್ಕಳು ಅಥವಾ ದತ್ತು ಮಕ್ಕಳು ಇರಬಾರದು. ಅದರೆ ಸ್ವಂತ ಮಗು

ಮಾನಸಿಕ ಅಥವಾ ದೈಹಿಕವಾಗಿ ಅಂಗ ವೈಕಲ್ಯದಿಂದ ಯವುದದರೂ ಕಾಯಿಲೆಗೆ ತುತ್ತಾಗಿದ್ದಾರೆ. ಬಾಡಿಗೆ ತಾಯಿಯ ಮೂಲಕ ಮಗು ಪಡೆಯಬಹುದಾಗಿದೆ. ಯಾವುದೇ ಮಹಿಳೆ ತನ್ನ ಜೀವಿತಾವಧಿಯಲ್ಲಿ ಒಮ್ಮೆ ಮಾತ್ರ ಸರೊಗಸಿ ತಾಯಿ ಯಾಗಬಹುದು ಒಂದಕ್ಕಿಂತ ಹೆಚ್ಚು ಬಾರಿಗೆ ಅವಕಾಶ ಇರುವುದಿಲ್ಲ. ಹೀಗೆ ಹತ್ತು ಹಲವು ಬಗೆಯ ನಿಯಂತ್ರಣವನ್ನು ಈ ಕಾಯ್ದೆ ಹೇರಿದೆ ಇಂದು ನಮ್ಮ ದೇಶದಲ್ಲಿ ಬಾಡಿಗೆ ತಾಯ್ತನದ ಮೂಲಕ ಮಕ್ಕಳನ್ನು ಪಡೆಯುವವರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಿದೆ ಬಾಡಿಗೆ ತಾಯ್ತನ ನಮ್ಮ ನೆಲಕ್ಕೆ, ಸಂಸ್ಕೃತಿಗೆ ಒಗ್ಗುತ್ತದೆಯೋ ಅಥವಾ ಇಲ್ಲವೋ, ಇದು ನೈತಿಕವೋ ಅನೈತಿಕವೋ, ಮನವೀಯತೆಯೇ ಅಮಾನವೀಯತೆಯೇ ಎಂಬ ಹಲವು ಪ್ರಶ್ನೆಗಳು ಚರ್ಚೆಗೆ ಅವಕಾಶ ಮಾಡಿ ಕೊಟ್ಟಿವೆ.

ನಮ್ಮ ದೇಶದಲ್ಲಿ ಬಾಡಿಗೆ ತಾಯ್ತನದ ಪರಿಕಲ್ಪನೆ ಒಗ್ಗಿಕೊಳ್ಳುವುದಿಲ್ಲ. ಬಡತನದಲ್ಲಿ ಬೆಳೆದ ಹೆಣ್ಣು ಮಕ್ಕಳು ಹಣದ ಆಸೆಗಾಗಿ ಬಾಡಿಗೆ ತಯಂದಿರಾಗಲು ಹವಣಿಸುತ್ತಾರೆ. ಆ ಮೂಲಕ ಹಲವಾರು ಶೋಷಣೆ ಸಮಸ್ಯೆಗಳಿಗೆ ಬಲಿಯಾಗಿ ತಮ್ಮ ಬದುಕನ್ನು ಹಾಳು ಮಾಡಿಕೊಳ್ಳುತ್ತಾರೆ ಎಂಬುದು ಹಲವ ಅಭಿಮತ ಬಾಡಿಗೆ ತಾಯ್ತನ ನಿಯಂತ್ರ ಕುರಿತ ಕಾಯ್ದೆ ಇದನ್ನು ವಾಣಿಜ್ಯ ಉದ್ದೇಶಕ್ಕೆ ಬಳಸಿಕೊಳ್ಳು ಹಾಗಿಲ್ಲ. ಮಕ್ಕಳಾಗದ ಅಥವಾ ಮಕ್ಕಳು ಬೇಕು ಎಂದು ಹಂಬಲಿಸುವವರು ಲಕ್ಷಾಂತರ ರೂಪಾಯಿ ವೆಚ್ಚಮಾಡಿ ಮಗುವನ್ನು ಪಡೆದುಕೊಳ್ಳುತ್ತಿದ್ದಾರೆ. ಇದೊಂದ ವ್ಯವಹರವಾಗಿದೆ ಎಂಬ ಆರೋಪದ ಅಡಿಯಲ್ಲಿ ಐವಿಎಫ್, ಫರ್ಟಿಲಿಟಿ ಸೆಂಟರಗಳು ನಡೆಸುವ ಬಾಡಿಗೆ ತಾಯ್ತನದ ವ್ಯವಹಾರಕ್ಕೆ ಸರಕಾರ ಕಡಿವಾಣ ಹಾಕಿದೆ ಹೊಸ ಕಾಯ್ದೆಯ ಪ್ರಕಾರ ಮದುವೆಯಾ ಹಲವು ವರ್ಷಗಳ ನಂತರವೂ ಮಕ್ಕಳಾಗದೇ ಹೋದಾಗ ಹಾಗೂ ಮಗುವನ್ನು ಪಡೆಯಲ್ಲಿ ಹೆಂಡತಿ ಅಸಮರ್ಥಳೆಂದು ವೈದ್ಯರು ದೃಡಪಡಿಸಿದಾಗ ಮಾತ್ರ, ಹತ್ತಿರದ ಸಂಭಂಧಿಗಳಿಂದ ಬಾಡಿಗೆ ತಾಯ್ತನದ ಕುರಿತು ಕಠಿಣವಾದಂತಹ ಕಾನೂನು ರೂಪಿಸಿರುವುದರಿಂದ ವಿದೇಶಿಯರು ಮಕ್ಕಳನ್ನು ಪಡೆಯಲ್ಲಿ ಭಾರತ ಕಡೆ ಧಾವಿಸಿ ಬರುತ್ತಿದ್ದಾರೆ .

ಮುಖ್ಯವಾಗಿ ಬೆಂಗಳೂರು ಬಾಡಿಗೆ ತಾಯ್ತನದ ಸೌಲಭ್ಯ ಒದಗಿಸಲು ಅಗ್ರಸ್ಥಾನದಲ್ಲಿದೆ. ಬಾಡಿಗೆ ತಾಯ್ತನ ಎಷ್ಟೋಂದು ಪ್ರಚಲಿತಕ್ಕೆ ಬಂದಿದೆ ಎಂದರೆ ಬಾಡಿಗೆಗಾಗಿ ತಾಯಂದಿರನ್ನು ಪೂರೈಸಲು ಟ್ರಸ್ಟಗಳು ಏಜೆನ್ಸಿಗಳು ಬೀದಿ ಬೀದಿಗಳಲ್ಲಿ ತಲೆ ಎತ್ತಿ ನಿಂತಿವೆ ಅದಕ್ಕಾಗಿ ಈ ಬಾಡಿಗೆ ತಾಯ್ತನ ಆಥವ ಸರೂಗಸಿ ಕ್ಲಿನಿಕಗಳ ಮೇಲೆ ನಿಯಂತ್ರಣ ಮಾಡುವುದಕ್ಕಾಗಿ ಕಾಯ್ದೆಯನ್ನು ರೂಪಿಸಲಾಯಿತು ಬಾಡಿಗೆ ತಾಯ್ತನಕ್ಕಾಗಿ ನೋಂದಣಿ ಮಾಡಿಕೊಂಡ ಕ್ಲಿನಿಕಗಳು ಮತ್ರ ಅದನ್ನು ನಡೆಸಬಹುದು. ಈ ಅವಕಾಶಕ್ಕೆ ಕೆಲವು ನಿಯಮಗಳನ್ನು ಹಾಕಲಾಯಿತು. ಉದಾ: ಬಾಡಿಗೆ ತಾಯಿಯಿಂದ ಮಕ್ಕಳನ್ನು ಪಡೆಯಲು ಇಚ್ಛಿಸುವ ದಂಪತಿಗೆ ಮದ್ವೆಯಾಗಿ ಕನಿಷ್ಟ ಐದು ವರ್ಷವಾಗಿರಬೇಕು ಮತ್ತು ಭಾರತೀಯ ನಾಗರಿಕರಾಗಿರಬೇಕು, ಬಾಡಿಗೆ ತಾಯಿ ಆಗಲಿರುವ ಮಹಿಳೆ ಸಂವಂಧಿಕರಲ್ಲೇ ಇರಬೇಕು, ಪರಹಿತ ಕಾಪಾಡುವ ಉದ್ದೇಶದಿಂದ ಮಾತ್ರ ಬಾಡಿಗೆ ತಾಯಂದಿರಾಗಲು ಒಪ್ಪಿರಬೇಕು.

ಬಾಡಿಗೆ ತಾಯ್ತನದಿಂದ ತಾಯಂದಿರು ಎದುರಿಸುವ ಮುಖ್ಯ ಸವಾಲುಗಳೆಂದರೆ

* ಬಡ ಕುಟುಂಬದ ಮಹಿಳೆಯರು ಬಾಡಿಗೆ ತಾಯಿಯಾಗಲು ಒಪ್ಪಿಕೊಂಡು ನಾನಾ ತರಹ ಮೊಸಕ್ಕೆ ಒಳಗಾಗಬಹುದು.
* ಒಪ್ಪಂದದ ಪ್ರಕಾರ ಸಿಗಬೇಕಾದ ಹಣ ಸಿಗದೇ ಹೋಗಬಹುದು.
* ಏಜೆಂಟು - ಏಜೆನ್ಸಿಗಳಿಗೆ ದೊರೆತಷ್ಟು ಹಣ ಬಾಡಿಗೆ ತಾಯಿಯಾದ ಮಹಿಳೆಗೆ ಸೀಗಲಾರದು
* ವೃತಿಪರ ಮಹಿಳೆಯರು ತಾಯಿಯಾಗಲು ಸಮಯವಿಲ್ಲವೆಂದ ಬಾಡಿಗೆ ತಾಯ್ತನವನ್ನೆ ಒಪ್ಪಿಕೊಳ್ಳುವುದು
* ಉನ್ನತ ಹುದ್ದೆಗಳಿಗೆ ತಾಯಿ ಯಾಗುವುದು ಅಡ್ಡಿ ಎಂದು ಬಗೆದ ಮಹಿಳೆ ಬಾಡಿಗೆ ತಾಯ್ತನಕ್ಕೆ ಮುಂದಾಗುವ ಸದ್ಯತೆ ಹೆಚ್ಚು
* ಸಿಂಗಲ ಪೆರೆಂಟ ಆಗಿ ಮಗುವನ್ನು ಪಡೆದರೆ ತಂದೆ ಅಥವಾ ತಾಯಿಯ ಪ್ರೀತಿಯ ಕೊರತೆ ಮಗುವಿಗೆ ಆಗುವುದು ಸಹಜ
* ತಾಯಂದಿರ ಸುತ್ತ ಹಣೆದುಕೊಂಡ ತಾಯ್ತನದ ಸಾಂಸ್ಕೃತಿಕ ಜೀವನ ನಾಶವಾಗಬಹುದು
* ಒಂಭತ್ತು ತಿಂಗಳು ತನ್ನ ಗರ್ಭದಲ್ಲಿ ಇರಿಸಿಕೊಂಡ ಮಗುವನ್ನು ಹೆತ್ತುಕೊಡಲು ಭಾವನಾತ್ಮಕವಾಗಿ ಸಾಧ್ಯ ಆಗದೇ ಹೋಗಬಹುದು.
* ತಾಯಿಯಾದ ಮಹಿಳೆಗೆ ಮದುವೆಯೆಂಬ ಬಂಧದ ಮೇಲೆ ವಿಶ್ವಾಸ ಕಳಚಿ ಹೋಗಬಹುದು
* ಬಾಡಿಗೆ ತಾಯಿಯ ಮೂಲಕ ಮಗು ಪಡೆದ ತಾಯಿಗೆ ಇದು ತನ್ನ ಮಗು ಎಂಬ ಭಾವನೆ ಬರದೇ ಇರಬಹುದು

ಹೀಗೆ ಬಾಡಿಗೆ . ತಾಯ್ತನ ಆಧುನಿಕ ಕಾಲದ ತಾಯಂದಿರನ್ನು ಹಲವು ದಿಕ್ಕುಗಳಿಂದ ಕಾಡುತ್ತಿದೆ. ಈ ಕುರಿತಂತೆ ಪರ ವಿರೋಧವಾದಗಳಿವೆ. ಇದರ ನೇರ ಪರಿಣಾಮ ಮಾತ್ರ ತಾಯಿ ತನ್ನ ಜೀವನ ಪರಿಯಂತ ಅನುಭವಿಸಬೇಕಾಗುತ್ತದೆ. ಆದರೆ ಮಕ್ಕಳಾಗದೇ ಇರುವ ದಂಪತಿಗಳಿಗೆ ಬಾಡಿಗೆ ತಾಯ್ತನ ವರವಾಗಿದೆ. ಇದರಲ್ಲಿ ಎರಡು ಮಾತಿಲ್ಲ ಕೆಲವು ಸಲ ದೈಹಿಕ ಸಮಸ್ಯೆಯಿಂದ ಮಕ್ಕಳಾಗದೇ ಹೊದರೇ ಅಥವಾ ಕೆಲವು ಸಲ ಬಸಿರು ತಾಯಿಯು ಜೀವಕ್ಕೆ ಕಂಟಕವಾದಾಗ ಇಂತಹ ನಾನಾ ಸಂದರ್ಭಗಳಲ್ಲಿ ಬಾಡಿಗೆ ತಾಯ್ತನದ ಮೂಲಕ ಮಗು ಪಡೆದು ಮಗುವಿನ ಜೈವಿಕ ಮಾತಾ ಪಿತೃಗಳಾಗಬಹುದು, ಮಕ್ಕಳಿಲ್ಲವೆಂಬ ದಂಪತಿಗಳಿಗೆ ಇದು ವರವಾಗಬಹುದು.

ಜಾಹಿರಾತಿನಲ್ಲಿ ತಾಯಿ

ಕಾಲದಿಂದ ಕಾಲಕ್ಕೆ ಕ್ರಮೇಣವಾಗಿ ಸಾಗಿಬಂದ ಪುರುಷಪ್ರಧಾನ ಸಮಾಜ ತನ್ನ ಸ್ವಾರ್ಥಕ್ಕಾಗಿ ಮಹಿಳೆಯರನ್ನು ಹಲವು ಕ್ಷೇತ್ರಗಳಲ್ಲಿ ಬಳಸುತ್ತ ಬಂದಿದೆ. ತಮ್ಮ ದುಡಿತಕ್ಕೆ ಆರ್ಥಿಕ ಅಪೇಕ್ಷೆ ಬಯಸದೆ ಕುಟುಂಬ, ಕೃಷಿ ಕ್ಷೇತ್ರದಲ್ಲಿ ತನ್ನನ್ನು ತೊಡಗಿಸಿಕೊಂಡ ಮಹಿಳೆ ಆಧುನಿಕ ಕಾಲದಲ್ಲಿ ಆರ್ಥಿಕವಾಗಿ ಕಾಲ ಮೇಲೆ ತನು ನಿಲ್ಲಲ್ಲು ಹಲವಾರು ಕ್ಷೇತ್ರಗಳನ್ನು

ಆಯ್ಕೆ ಮಾಡಿಕೊಂಡಿದ್ದಾಳೆ. ಅದರಲ್ಲಿ ಜಾಹೀರಾತು ಸಹ ಒಂದಾಗಿದೆ ಸಮೊಹ ಮಾಧ್ಯಮ ಇಲ್ಲದಿರುವ ಕಾಲದಲ್ಲಿ ಜಾಹಿರಾತುಗಳ ಅಸ್ತಿತ್ವ ಇರಲಿಲ್ಲ. ಜೊತೆಗೆ ಜೀವನವಶ್ಯಕ ವಸ್ತುಗಳು ಮತ್ರ ಖರಿದಿಯಾಗುತ್ತಿದ್ದವು. ಇಗೀನ ಕೊಳ್ಳುಬಾಕ ಸಂಸ್ಕೃತಿ ಇರಲಿಲ್ಲ. ತಮಗೆ ಬೇಕಾದ ವಸ್ತುಗಳನ್ನು ತಾವೇ ತಯಾರಿಸಿ ತಮ್ಮ ಸಮಾಜದಲ್ಲೇ ಕೊಡುಕೊಳ್ಳುವ ಪದ್ಧತಿ ಜಾರಿಯಲ್ಲಿತ್ತು. ಮಿತವಾಗಿ ಜೀವನದ ಅವಶ್ಯಕತೆಗಳನ್ನು ಮಾತ್ರ ಖರಿದಿಸುತ್ತಿದ್ದರು. ಆದರೆ ಇಂದು ನೋಡಿದ್ದೆಲ್ಲ ಖರೀದಿಸಬೇಕು ಕಂಡಿದ್ದೆಲ್ಲ ಬಳಸಬೇಕು ಎಂಬ ಸಂಸ್ಕೃತಿ ಬೆಳೆದಿದೆ. ವ್ಯಾಪಾರಿಗಳು ತಮ್ಮ ಸರಕನ್ನು ಮಾರಲು ಮಹಿಳೆಯರನ್ನು ಬಳಸಿಕೊಳ್ಳುತ್ತಾರೆ. ತಮ್ಮ ವಸ್ತು ಏನೇ ಇರಲಿ ಹೇಗೆ ಇರಲಿ ಅದು ಗ್ರಾಹಕರ ಕೈ ಸೇರಿ ತಮಗೆ ಲಾಭ ಅಗಬೇಕು ಎಂಬ ಗುರಿಹೊಂದಲಾಗಿದೆ. ವಸ್ತುಗಳನ್ನು ಬಳಕೆ ಮಾಡುವ ಬಳಕೆದರರನ್ನು ಅಥವಾ ಗ್ರಹಕರನ್ನು ತನ್ನತ್ತ ಸೆಳೆಯಲು ಜಾಹಿರತುಗಳ ಮೊರೆ ಹೋಗುತ್ತಾರೆ. ಮುಖ್ಯವಾಗಿ ಜಾಹಿರತಿನಲ್ಲಿ ಮಹಿಳೆಯರನ್ನು ಅವರ ಸೌಂದರ್ಯವನ್ನು ಮತ್ತು ಭಾವನತ್ಮಕವಗಿ ತಾಯಿ ಮತ್ತು ತಯ್ತನವನ್ನು ಯಥೇಚ್ಛವಾಗಿ ಬಳಸಿಕೊಳ್ಳಲಾಗುತ್ತಿದೆ.

ಮಾರುಕಟ್ಟೆಯಲ್ಲಿ ವಸ್ತುಗಳ ಮಾರಾಟಕ್ಕಾಗಿ ಸ್ಪರ್ಧೆ ಏರ್ಪಟ್ಟಾಗ ಮಹಿಳೆಯನ್ನು ಅವಳ ಭಾವನೆಗಳನ್ನು ಜಾಹಿರಾತಿನಲ್ಲಿ ತಮಗನುಕೂಲವಾಗುವ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದಾರೆ. ತಮ್ಮ ಕಂಪನಿಯ ವಸ್ತುಗಳೇ ಶ್ರೇಷ್ಠ ಅವುಗಳನ್ನೆ ಬಳಸುವಂತೆ ಜನರ ಮೇಲೆ ಮಾನಸಿಕ ಇತ್ತಡ ಹೇರುವುದು ಸಾಮನ್ಯ ಇಂದಿನ ಬದುಕಿನಲ್ಲಿ ಪ್ರತಿಯೊಂದು ವಸ್ತುವಿನ ಜಾಹೀರಾತುಗಳಿವೆ. ಮಾರುಕಟ್ಟೆಯ ಪೈಪೋಟಿ ಹೆಚ್ಚಾಗಿ ವಸ್ತುವಿನ ಗುಣವನ್ನು ಹೆಚ್ಚಿನ ಬಣ್ಣ ಬಳಿದು ತೋರಿಸಲು ಪ್ರರಂಭಿಸಿದವು. ಈ ಕಾರ್ಯದಲ್ಲಿ ಹೆಚ್ಚಾಗಿ ಮಹಿಳೆಯರನ್ನು ಬಳಸಿಕೊಳ್ಳ ತೊಡಗಿದವು. ಜಾಹೀರಾತು ಸಂಸ್ಕ ೃತಿಯಲ್ಲಿ ಮಹಿಳೆ ಮುಖ್ಯವಾಗಿ ತಾಯಿ ಮತ್ತು ತಾಯ್ತನವನ್ನು ಕೇಂದ್ರವಾಗಿ ಟ್ಟುಕೊಂಡು ತಮ್ಮ ಕಾರ್ಯ ಆಧಿಸುತ್ತಿವೆ. ಕೊಲ್ಲೇಟ, ಹಾರಲೆಕ್ಸ, ಚಾಪುಡಿ, ಫೆರ ಆಂಡ ಲವಲಿ, ಸಾಬೂನು, ಶಾಂಪು, ಸೌಂದರ್ಯ ವರ್ಧಕ ವಸ್ತುಗಳು, ಗುಡನೈಟ, ಮೊಟರ, ಕಾರ. ಸ್ಕೂಟರ, ಹೀಗೆ ಹತ್ತು ಹಲವು ವಸ್ತುಗಳನ್ನು ಬಳಸಿಕೊಳ್ಳುತ್ತಿವೆ. ತಾಯಿ ಹೇಳುವುದು ಎಲ್ಲ ಸತ್ಯ, ಆಕೆ ತನ್ನ ಮಗುವಿನ ಹಿತವನ್ನೆ ಬಯಸುವಳು, ತನ್ನ ಕುಟುಂಬದ ಆರೋಗ ್ಯಕ್ಕಾಗಿ ರಕ್ಷಣೆಗಾಗಿ ಏನೆಲ್ಲ ಬಳಸುವವಳೋ ಅದೇಲ್ಲ ಒಳ್ಳೆಯದು ಎಂಬ ಹಿನ್ನೆಲೆಯಲ್ಲಿ ತಾಯಿಯ ಮೂಲಕ ಜಾಹಿರತುಗಳನ್ನು ತಯಾರಿಸಲಾಗುತ್ತದೆ. ವಾಸ್ತವದಲ್ಲಿ ನಮ್ಮ ಸಮಾಜದಲ್ಲಿ ತಾಯಂದಿರ ಸ್ಥಿತಿ ಚಿಂತಾಜನಕ ಆದರೆ ಜಾಹಿರಾತಿನಲ್ಲಿ ಮಾತ್ರ ಆಕೆಯನ್ನು ಬಹು ಸುಂದರವಾಗಿ , ಆರೋಗ್ಯ ಪೂರ್ಣವಾಗಿ ಬಿಂಬಿಸಲಾಗುತ್ತದೆ. "ಏನಾಯ್ತು ಮಗು ಅಜ್ಜಾ ಇದೆ ಎನ್ನುವ ತಲೆ ತಲೆಮಾರಿನ ಅಜ್ಜಿ ಮೊಮ್ಮಕ್ಕಳ ಹೆಂಗಸಿನ ಜಾಹಿರಾತವು ಪಿಂಕೋ ವಾಟರದ ಆಧುನಿಕ ಹೆಂಗಸಿನ ಚಿಂತನವನ್ನೊಳಗೊಂಡಿದೆ. ಅಲ್ಲದೆ ತಂದೆ ಸತ್ತ ಮಗಳು ದಿಢೀರನೆ ಅಲಂಕೃತಳಾಗಿ ಮದುವೆ ಹಸೆಮಣೆ ಏರಿ ಕಾರಿನಲ್ಲಿ ಕುಳಿತು ಪತಿಯ ಜೊತೆಗೂಡಿ ಹೋಗುವುದು ಜೀವ ವಿಮೆ ಜಾಹಿರಾತಾಗಿದೆ. ಕೊಡಕ ಕ್ಯಾಮೆರಾ ತಾಯಂದಿರೆ ಮರೆಯಬೇಡಿ ಎನ್ನುವ ಅಡುಗೆ ಮನೆ

ಮಠನ ಮಸಾಲಾ ಮನೆ ಮಂದಿಗೆಲ್ಲಾ ಎಚ್ಚರಿಸುತ್ತದೆ"[೧೪] ಹೀಗಿರುವಾಗ ತಾಯಿಯ ನಿಜಸ್ಥಿತಿ ಅರಿಯಬೇಕಾಗಿದೆ.

ಜಾಹಿರಾತು ಸಂಸ್ಕೃತಿಯಲ್ಲಿ ನಮ್ಮ ಮಹಿಳೆಯರು ಕಳೆದು ಹೋಗುತ್ತಿದ್ದಾರೆ. ಸೌಂದರ್ಯ ಆಸೆ ಹೆಚ್ಚಿ ಅಂತರಂಗದ ರೂಪಕ್ಕೆ ಬೆಲೆಕೊಡದೆ ಕೇವಲ ಬಹಿರಂಗದ ರೂಪವೇ ಶ್ರೇಷ್ಠ ಎಂದು ಸಾರುವ ಜಾಹಿರಾತುಗಳು ನಮ್ಮ ನೆಲ ಸಂಸ್ಕೃತಿಯನ್ನು ಹಾಳು ಮಾಡುತ್ತಿದೆ ಮಕ್ಕಳನ್ನು ಹೆತ್ತ ತಾಯಿ ತೆಳ್ಳಗೆ ಬೆಳ್ಳಗೆ ಯಾಗಿರಬೇಕು ಆಕೆ ತಯಿಯಂತೆ ಕಾಣದೆ ಕಾಲೇಜು ಹುಡಗಿಯಂತೆ ಕಾಣಬೇಕು ಎಂಬ ಜಾಹಿರಾತು ಯಾವ ಸಂಸ್ಕೃತಿಯನ್ನು ಬಿತ್ತುತ್ತಿದೆ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸುವ ವಸ್ತುಗಳ ಮಾರಲು ತಾಯಂದಿರ ತಾಯ್ತನದ ಭಾವನೆಗಳನ್ನು ಯಾವುದೇ ಲಗು ಲಗಾಮಿಲ್ಲದೆ ಬಳಸಿಕೊಳ್ಳುತ್ತಿದೆ.

ಹೆಣ್ಣನ್ನು ಸೌಂದರ್ಯೋಪಾಯಗಳಾಗಿ ಬಳಸಿಕೊಳ್ಳುವ ಮಾಧ್ಯಮಗಳು ಹಣದ ಆಮಿಸೆ ತೋರಿಸಿ ತಮ್ಮ ಸೌಂದರ್ಯ ಕಾಪಾಡಿಕೊಳ್ಳುವಂತೆ ಆಜ್ಞೆ ಮಾಡುತ್ತಾರೆ. ಮಗುವನ್ನು ಹೆರಬಾರದು ಹೆತ್ತರೆ ಹಾಲುಣಿಸಬಾರದು, ಇದರಿಂದ ದೇಹದ ಸೌಂದರ್ಯ ಹಾಳಾಗಿ ಹೋಗುತ್ತದೆ. ಎಂಬ ಭ್ರಮೆಯನ್ನು ಸೃಷ್ಟಿಸಲಾಗುತ್ತಿದೆ ತಮ್ಮ ಕಂಪನಿ ಲಾಭಗಳಿಸಬೇಕು ಎಂಬ ಆಸೆಯಿಂದ ಮಹಿಳೆಯರ ಅಂಗಾಂಗಗಳ ಪ್ರದರ್ಶನ ಪಾಶ್ಚಾತ್ಯ ಮಾದರಿಯಲ್ಲಿ ಹೆಣ್ಣುಮಕ್ಕಳನ್ನು ಬಳಸುವುದು ಸಾಮಾನ್ಯವಾಗಿದೆ. ತಮ್ಮ ಕಂಪನಿ ತಯಾರಿಸಿದ ವಸ್ತುಗಳು ಚಿರಯೌವನ ಕೊಡುವ ಮಾಂತ್ರಿಕ ವಸ್ತು ಎಂಬಂತೆ ಪ್ರತಿಬಿಂಬಿಸಲಾಗುತ್ತದೆ. ಚಿತ್ರದೊಳಗಿನ ಜಾಹಿರಾತುಗಳು ನೋಡುಗರನ್ನು ಮೊಡಿ ಮಾಡುತ್ತವೆ.

ಪತ್ರಿಕೆಗಳಲ್ಲಿ ಮುಖ ಪುಟ ವಿನ್ಯಾಸದಲ್ಲಿ ದೂರದರ್ಶನ ರೇಡಿಯೋ ಜಾಹಿರಾತುಗಳು ಹೀಗೆ ಹಲವು ಕಡೆಗಳಲ್ಲಿ ತಾಯಂದಿರ ಮೌಲಿಕ ಭಾವಕ್ಕೆ ತಮ್ಮ ವ್ಯಾಪಾರಿಕವಾದ ಬಣ್ಣ ಹಚ್ಚಿ ಲಾಭ ಪಡೆಯುವ ದಲ್ಲಾಳಿಗಳಿಗೆ ಕೊರತೆ ಏನಿಲ್ಲ ಹಣವನ್ನು ಗಳಿಸಬೇಕು ಎಂಬ ಒಂದೇ ಒಂದು ಉದ್ದೇಶದಿಂದ ತಾಯ್ತನಕ್ಕೆ ವ್ಯಾಪಾರಿಕ ಬಣ್ಣ ಕಟ್ಟುತ್ತಿರುವುದು ದುರದುಷ್ಟಕರ "ಸರಕು ಸಂಸ್ಕೃತಿಯ ವಿಶೇಷತೆ ಮತ್ತು ಹಿತ ಅಡಗಿರುವುದು ಹೆಣ್ಣನ್ನು ಬಳಸಿಕೊಳ್ಳುವ ವಿಧಾನದಲ್ಲಿ ಸಾಮಾಜಿಕವಾಗಿ ಹೆಣ್ಣನ್ನು ಬದುಕಿನುದ್ದಕ್ಕೂ ಅನ್ಯರ ಹಂಗಿನಲ್ಲಿರುವ ಬೆಲೆಯುಳ್ಳ ಪ್ರಾಣಿ, ವಸ್ತುವಾಗಿಸಿರುವ ಸಾಮಾಜಿಕ ಬದುಕಿನ ಸಂರಚನೆಯಲ್ಲಿಯೇ ಅಫೀಮಿನಂತಹ ಧರ್ಮ ಮತ್ತು ಹಿಂಸಾನಂದದ ಪ್ರಭುತ್ವದ ಕರ್ಯ ಗಟ್ಟಿಗೊಂಡಿದೆ. ಇದನ್ನು ಅರ್ಥ ಮಾಡಿಕೊಳ್ಳುವುದರ ಮೂಲಕ ಸ್ತ್ರೀ ಬದುಕಿನ ಸಂಕಥನವನ್ನು ಕಟ್ಟಿಕೊಳ್ಳಲು ಸಾಧ್ಯ. ಮಾರುಕಟ್ಟೆಯಲ್ಲಿ ಮಹಿಳೆ ಕಳೆದು ಹೋಗುತ್ತಿರುವ ಸಂಗತಿ ನಮಗೇನೂ ಹೊಸ ಸಂಗತಿಯಲ್ಲ"[೧೫] ಅದಕ್ಕಾಗಿ ಇಂದು ಜಾಗ್ರತರಾಗುವುದು ಮುಖ್ಯವಾಗಿದೆ. ಮಾಧ್ಯಮಗಳಲ್ಲಿ ಮೂಡಿಬರುವ ವಿವೇಚನಾರಹಿತವದ ಜಹಿರಾತುಗಳು ನಮ್ಮ ಸಮಾಜವನ್ನು ಯುವ ಪೀಳಿಗೆಯನ್ನು ದಾರಿತಪ್ಪಿಸುವ ಕಾರ್ಯ ಮಾಡುತ್ತಿವೆ. ಅದಕ್ಕಾಗಿ ಜಾಹಿರಾತುಗಳಿಗಾಗಿ ವಿಶೇಷವಾದ ಕಾನೂನುಗಳನ್ನು ಜಾರಿಗೆ ತರಬೇಕು

ಆ ಮೂಲಕ ಕಡಿವಾಣ ಹಾಕುವುದು ಅನಿವಾರ್ಯವಾಗಿದೆ. ಜಾಹಿರಾತು ಬಳಸುವ ಮಾಧ್ಯಮಗಳು ಸಮಾಜದಲ್ಲಿ ಜವಾಬ್ದಾರಿಯುತವಾಗಿ ನಡೆದುಕೊಳ್ಳಬೇಕು ಜಾಹಿರಾತು ಬಳಸುವಾಗ ಸೂಕ್ತವಾದ ಸಂಧರ್ಭಗಳನ್ನು ನೋಡಿಕೊಂಡ ಅದಕ್ಕೆ ತಕ್ಕಂಥ ರೀತಿಯಲ್ಲಿ ಬಳಸಿ ಸಮಾಜದ ಆರೋಗ್ಯ ಕಾಪಾಡಬೇಕು ಇದಕ್ಕೆ ಸರಕಾರ ಅಷ್ಟೇ ಅಲ್ಲ ಸಂಘ ಸಂಸ್ಥೆಗಳು, ಮಹಿಳಾಪರ ಚಳುವಳಿಗಾರರು ಸಹ ಕೈ ಜೊಡಿಸಿ ಕಾರ್ಯನಿರ್ವಹಿಸಬೇಕು ಹೆಣ್ಣನ್ನು ಭೋಗದ ವಸ್ತುವಾಗಿ ಯಾಗಲಿ ತಾಯ್ತನದ ಭಾವನೆಯನ್ನು ಒಂದು ಮೌಲ್ಯವಾಗಿ ಪ್ರತಿಬಿಂಬಿಸಿ ವರ್ಣಾತ್ಮಕವಾಗಿ ವ್ಯಭವಿಕರಣದ ಮೂಲಕ ಶೋಷಿಸುತ್ತಿರುವುದು ವಿಪರ್ಯಾಸ ಎನ್ನಬಹುದು.

**ಮಾದರಿ ತಾಯಂದಿರು**

ಒಂದು ಕಡೆ ಮಗುವನ್ನು ಹೆತ್ತು ಹೆಣ್ಣು ತಾಯಿ ಎನಿಸಿಕೊಂಡರೆ ಇನ್ನೊಂದಡೆ ಜೈವಿಕವಾಗಿ ಹೆರಲಾರದೆ ಬೇರೊಂದು ಮಗುವಿಗೆ ಮಮತೆ. ವಾತ್ಸಲ್ಯ ಕೊಟ್ಟು ಮಹಾ ಮಾತೆಯರಾಗಿ ಬದುಕುವ ಮಹಿಳೆಯರು ನಮ್ಮ ಸುತ್ತಲಿದ್ದಾರೆ. ತನ್ನ ಮಗುವಿನ ಶ್ರೆಯೋಭಿವೃದ್ಧಿಗಾಗಿ ತನ್ನ ಜೀವನವೇ ಮುಡಿಪಾಗಿಟ್ಟ ಶಿವಾಜಿಯ ತಾಯಿ ಜಿಜಾಬಾಯಿ, ತನ್ನದಲ್ಲದ ಮಗುವನ್ನು ತಾಯಿಗಿಂತ ಹೆಚ್ಚು ಪ್ರೀತಿಕೊಟ್ಟು ಬೆಳೆಸಿದ ಶ್ರೀಕೃಷ್ಣನ ಸಾಕುತಾಯಿ ಯಶೋಧೆ. ರೋಗಿಗಳಿಗೆ ತಾಯಿ ಪ್ರೀತಿಕೊಟ್ಟು ಸೇವೆಯ ಸಾಕಾರ ಮೂರ್ತಿತಾದ ಮದರ ಥೆರಿಸಾರಂತಹ ಹಲವು ಮಾದರಿ ತಾಯಂದಿರನ್ನು ನಾವು ನೋಡಬಹುದು.

**ಯಶೋಧೆ:-** ಈ ಹೆಸರು ಕೃಷ್ಣನ ಜೊತೆಗೆ ಅವಿನಾಭಾವವಾಗಿ ಹೊಂದಿಕೊಂಡಿದೆ. ಬಾಲಲೀಲೆಯ ಜೊತೆಗೆ ನೆನೆನಪಿಗೆ ಬರುವ ಆತನ ಸಾಕು ತಾಯಿ ಯಶೋಧೆ ಈಕೆಯ ಅಗಾಧವಾದ ಪುತ್ರವತ್ಸಾಲ್ಯ ಜನಜನಿತ. ಕೃಷ್ಣನ ತುಂಟಾಟ, ಚೆಷ್ಟೆ, ತುಂಟತನವೆಲ್ಲ ಆಕೆಗೆ ಖುಷಿ ಕೊಡುವಂತವುಗಳು. ಲೋಕದ ಮಕ್ಕಳಂತೆ ಕೃಷ್ಣ ತನ್ನ ಸಾಕುತಾಯಿಯನ್ನು ಬಿಡದೆ ಕಾಡಿದ್ದಾನೆ. ಆತನ ಬಾಲಲೀಲೆಯಲ್ಲಿ ಯಶೋಧೆಯ ಪಾತ್ರ ಹಿರಿದು. ಯಶೋಧೆ ಮತ್ತು ಕೃಷ್ಣನ ಈ ಜೋಡಿ ಮಮತೆಯ ಜೊಡಿ, ಇವರಿಬ್ಬರ ವಾತ್ಸಲ್ಯ ಸಂಬಂಧ ಕೇಳಿದವರಿಗೆ ತಾಯಿಯಾಗಬೇಕು ಎಂಬ ಹಂಬಲ ಬರದೇ ಇರದು. ಪ್ರೀತಿ ವಾತ್ಸಲ್ಯ ಮಮತೆ ಹಂಚಲು ತನ್ನ ಕರುಳ ಕುಡಿಯೇ ಆಗಬೇಕೆಂದೆನಿಲ್ಲ. ಅವೆಲ್ಲವನ್ನು ಕೊಡುವ ಮನಸ್ಸಿದ್ದರೆ ಸಾಕು. ಮಹಾಭಾರತದಲ್ಲಿ ಬರುವ ಕೃಷ್ಣನ ಯಶೋಧೆಗೆ ಮನಸೋಲದವರಾರು ಇಲ್ಲ. ಇವಳು ಒಬ್ಬ ಮಾದರಿ ತಾಯಿಯಾಗಿ ಮಾತೃತ್ವಕ್ಕೆ ಒಂದು ಮಹತ್ವದ ಸ್ಥಾನವನ್ನು ತಂದು ಕೊಟ್ಟಿದ್ದಾಳೆ. ಅಸಾಮಾನ್ಯನಾದ ಕೃಷ್ಣ ತನ್ನ ಬಾಲಲೀಲೆಗಳ ಮೂಲಕ ಯಶೋಧೆಯನ್ನು ದೈವಿ ಎತ್ತರಕ್ಕೆ ಎರಿಸಿದ್ದಾನೆ. ಎಲ್ಲ ಮಕ್ಕಳಂತೆ ಮಣ್ಣನ್ನು ತಿನ್ನುವ ಕೃಷ್ಣ ಸಾಮಾನ್ಯನಾಗಿ ಕಂಡರು. ತಾಯಿ ಯಶೋಧರೆ ಬಾಯಿ ತೆರೆ ಎಂದು ಗದರಿಸಿದಾಗ ತನ್ನ ಬಾಯಲ್ಲಿ ಇಡೀ ಬ್ರಹ್ಮಾಂಡವನ್ನೇ ತೋರಿಸಿ ತಾನೊಬ್ಬ ಅಸಾಮಾನ್ಯ ಎಂಬುದನ್ನು ತೋರಿಸುತ್ತಾನೆ. ಇಂಥ ಅಸಾಮಾನ್ಯನಾದ ಕೃಷ್ಣನನ್ನು ಮಗುವಾಗಿ ಪಡೆದದ್ದು ತನ್ನ ಭಾಗ್ಯವೆಂದು ಬಗೆಯುತ್ತಾಳೆ. ಪ್ರಾಚೀನ ಕಾಲದಿಂದ ಯಶೋಧೆ ಒಬ್ಬ ಮಾದರಿ ತಾಯಿಯಾಗಿ ಕಂಡು ಬರುತ್ತಾಳೆ.

**ಜೀಜಾಬಾಯಿ:-** ಛತ್ರಪತಿ ಶಿವಾಜಿಯ ತಾಯಿ ಜೀಜಾಬಾಯಿ ಈಕೆ ತಾಯಂದಿರಿಗೆ ಮಾದರಿಯಾಗಿದ್ದಾಳೆ. ಮಕ್ಕಳ ಭವಿಷ್ಯವನ್ನು ಹೇಗೆ ದಿಟ್ಟತನದಿಂದ ರೂಪಿಸಬೇಕು. ಅವರ ಶ್ರೇಯಸ್ಸು ಯಾವುರಲ್ಲಿದೆ. ಅವರಿಗೆ ಶಿಕ್ಷಣವನ್ನು ಹೇಗೆ ಮತ್ತು ಯಾವ ರೂಪದಲ್ಲಿ ಕೋಡಬೇಕೆಂಬುದನ್ನು ಜೀವನದಿಂದ ತಿಳಿದುಕೊಳ್ಳಬಹುದಾಗಿದೆ. ಶಿವಾಜಿಯ ವ್ಯಕ್ತಿತ್ವ ರೂಪುಗೊಂಡಿದೆ ಜೀಜಾಬಾಯಿಂದ. ಪೌರಾಣಿಕ ಕಥೆ ಹೇಳುವುದರ ಮೂಲಕ ರಾಷ್ಟ್ರ ಪ್ರೇಮವನ್ನು ಬಿತ್ತಿದ್ದಳು, ಧರ್ಮ ರಕ್ಷಣೆಯ ಕುರಿತು ಮಾನಸಿಕ ಹಾಗೂ ದೈಹಿಕ ಬಲಿಷ್ಠತೆಗಾಗಿ ಹಗಲು ಇರುಳು ಚಿಂತನೆ ನಡೆಸಿ ಶಿವಾಜಿಯ ವ್ಯಕ್ತಿತ್ವ ರೂಪುಗೊಳಿಸುವಲ್ಲಿ ಶ್ರಮಿಸಿದ್ದಳು. ಅವನಿಗೆ ಶಿಕ್ಷಣ, ಶಸ್ತ್ರಾಸ್ತ್ರಗಳ ತರಬೇತಿ ನೀಡುತ್ತಾಳೆ. ಪರತಂತ್ರ ಬದುಕನ್ನು ತೊರೆದು ಸ್ವತಂತ್ರವಾಗಿ ಬದುಕಲು ಒಂದು ರಾಷ್ಟ್ರವನ್ನು ಕಟ್ಟೆ ಕಟ್ಟುತ್ತೇನೆ. ಎಂದು ಶಿವಾಜಿ ತಾಯಿಗೆ ಮಾತು ಕೊಡುತ್ತಾನೆ. ಅದರಂತೆ ಅವಿರತವಾಗಿ ಹೋರಾಟ ಮಾಡುತ್ತಾನೆ. ಮಗುವೊಂದರ ವ್ಯಕ್ತಿತ್ವ ನಿರ್ಮಾಣದಲ್ಲಿ ತಾಯಿಯ ಪಾತ್ರ ಹಿರಿದು ತಾಯಿ ಮನಸ್ಸು ಮಾಡಿದರೆ ಮಕ್ಕಳನ್ನು ಒಬ್ಬ ಶ್ರೇಷ್ಠ ವ್ಯಕ್ತಿಯಾಗಿ ರೂಪಿಸಬಲ್ಲಳು ಎಂಬುದಕ್ಕೆ ಜೀಜಾಬಾಯಿಯೇ ಸಾಕ್ಷಿಯಾಗಿದ್ದಾಳೆ.

**ಮದರ ಥೇರಿಸಾ:-** ತಾನು ಹೆತ್ತ ಮಕ್ಕಳಿಗೆ ತಾಯಿಯಾದವಳು ತನ್ನ ಜೀವನ ಮೂಡಿಪಾಗಿಡುತ್ತಾಳೆ. ಕೆಲವುಸಲ ತನ್ನದಲ್ಲದ ಮಗುವಿಗೆ ಸಾಕು ತಾಯಿಯಾಗಿ ಪಾಲನೆ ಮಾಡುವ ತಾಯಿಂದಿರು ನಮ್ಮ ಸುತ್ತಲಿದ್ದಾರೆ. ಆದರೆ ನಿರ್ಗತಿಕರಿಗೆ ರೋಗಿಗಳಿಗೆ ಬಡಬಗ್ಗರಿಗೆ ಸೇವೆ ಮಾಡುವುದರ ಮೂಲಕ ತಾಯ್ತನದ ಪ್ರೀತಿಯನ್ನು ಧಾರೆಯೆರೆದ ಅಪರೂಪದ ತಾಯಿಯಾಗಿ ಎಲ್ಲರಿಂದಲೂ 'ಮದರ್' ಎನಿಸಿಕೊಂಡ ಮಹಾನ್ ಮಾನವತಾವಾದಿಯಾದ ಮದರ ಥೇರಿಸಾ ನಿಜವಾಗಿಯೂ 'ಮದರ್' ಆಗಿದ್ದಾರೆ.

ನಮ್ಮಚರಿತ್ರೆಯಲ್ಲೇ ಅಪರೂಪವಾಗಿ ಕಂಡುಬರುವ ಸೇವೆಯ ಸಾಕಾರ ಮೂರ್ತಿಯಾದ ಮದರ ಥೆರಿಸಾ ಎಲ್ಲರೂ ಮೆಚ್ಚುವಂಥ ವ್ಯಕ್ತಿತ್ವ ಅಂಗವಿಕಲ ಮತ್ತು ಬುದ್ಧಿಮಾಂದ್ಯ ಮಕ್ಕಳ ಆರೈಕೆ ಮಾಡಿ, ನಿರ್ಗತಿಕರಿಗೆ ತಾಯಿಯಾಗಿ ಸೇವೆ ಸಲ್ಲಿಸಿದ್ದಾರೆ. ಇವರು ಮೂಲತ ಅಲ್ಬೇನಿಯಾದವರಾದರೂ ಭಾರತದ ಪೌರತ್ವ ಪಡೆದಿದ್ದರು. ಇವರು ೧೯೫೦ ರಲ್ಲಿ 'ಮಿಷನರೀಸ್ ಆಫ್ ಚಾರಿಟಿ' ಎಂಬ ಸ್ವಯಂ ಸೇವಾ ಸಂಘವನ್ನು ಭಾರತದ ಕೋಲ್ಕತ್ತಾದಲ್ಲಿ ಸ್ಥಾಪಿಸಿದರು. ಇವರ ಸೇವೆಯನ್ನು ಪರಿಗಣಿಸಿ ನೊಬಲ್ ಶಾಂತಿ ಪ್ರಶಸ್ತಿಯನ್ನು ನೀಡಲಾಗಿದೆ. ಇವರ ಮಾತೃತ್ವದ ಸೇವೆಗಾಗಿ ಭಾರತ ಸರ್ಕಾರವು ದೇಶದ ಅತ್ಯುನ್ನತ ಪೌರ ಪ್ರಶಸ್ತಿಯಾದ ಭಾರತರತ್ನ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಮದರ ಥೇರಿಸಾ ಅವರು ಏಡ್ಸ ರೋಗಿಗಳಿಗೆ, ಕುಷ್ಠರೋಗಿಗಳಿಗೆ ಅನಾಥ ಮಕ್ಕಳಿಗೆ ತಾಯಿಯ ಪ್ರೀತಿ ಕೊಡುವ ನಿಟ್ಟಿನಲ್ಲಿ ತಮ್ಮ ಸಂಘ ಸಂಸ್ಥೆ ಹುಟ್ಟು ಹಾಕಿದ್ದರು. ಅದಕ್ಕಾಗಿ ಇವರು ಮಾದರಿ ತಾಯಿಯೇ ಸರಿ.

ಇಂಥ ಮಾದರಿ ತಾಯಂದಿರ ಕುರಿತು ತಿಳಿದುಕೊಳ್ಳುವುದರಿಂದ ಸಮಾಜದಲ್ಲಿ ತಾಯಿಯ ಮಹತ್ವವನ್ನು ಮನದಟ್ಟು ಮಾಡಬಹುದು ತಾಯಿಯನ್ನಾಗಲಿ ಆಕೆಯ ನಿಷ್ಕಲ್ಮಶ ಪ್ರೀತಿ, ತ್ಯಾಗವನ್ನು ಯಾರು, ಯಾವತ್ತು ನಿರ್ಲಕ್ಷಿಸಬಾರದು. ಆಕೆಯ ಮಾದರಿ ಜೀವನ ಬಗ್ಗೆ ಮಕ್ಕಳಲ್ಲಿ ಅರಿವು ಮೂಡಿಸಬೇಕು. ಆ ನಿಟ್ಟಿನಲ್ಲಿ ಈ ತಾಯಿಂದಿರು ನಮ್ಮ ತಾಯಂದಿರಿಗೆ ಮಾದರಿ ತಾಯಿಯಾಗಿದ್ದಾರೆ.

## ಕಾನೂನು ಮತ್ತು ಯೋಜನೆಗಳು

ಪ್ರಾಚೀನ ಕಾಲದಿಂದ ಮಹಿಳೆಯರು ಪಡೆದ ಸ್ಥಾನ ಮಾನ ಪುರುಷರ ಸರಿಸಮಾನವಾಗಿ ಇರಲಿಲ್ಲ ಇವರು ಅಧೀನತೆಯಿಂದ ತಮ್ಮ ಜೀವನ ಸಾಗಿಸಿದರು. ತಮ್ಮ ಸಮಾನತೆಗಾಗಿ ಸಾಮೊಹಿಕವಾಗಿ ಆಕ್ರೋಶ ವ್ಯಕ್ತ ಪಡಿಸುವುದಾಗಲೀ ಹೋರಾಟ ಚಳುವಳಿಗಳನ್ನು ಮಾಡಲಿಲ್ಲ. ಸಾಮಾನ್ಯವಾಗಿ ಸಮಾಜದಲ್ಲಿ ಮಹಿಳೆಯರು ಮಾತೇಯರಾಗಿ ಮಾನ್ಯರಾಗಿದ್ದರೂ ಅವಳನ್ನು ದೈವಿನೆಲೆಯಲ್ಲಿ ಮಾತೃತ್ವದ ನೆಲೆಯಲ್ಲಿ ಮಾತ್ರ ಪ್ರಾಮುಖ್ಯತೆ ನೀಡಲಾಗಿತ್ತು. ಅಂದಿನ ಕಾಲದಲ್ಲಿ ಆಕೆಗೆ ಪ್ರತ್ಯೇಕವಾದ ಹಕ್ಕುಗಳು ಇರಲಿಲ್ಲ. ತಾಯಿಗೆ ಪ್ರಾಮುಖ್ಯತೆ ಇದ್ದರೂ ಆಕೆಗೆ ಪುರುಷನ ಸಮಾನವಾಗಿ ಆಸ್ತಿ ಹಕ್ಕ ಇರಲಿಲ್ಲ.

ಧರ್ಮಶಾಸ್ತ್ರಗಳು ತಿಳಿಸಿದ ಪ್ರಕಾರ ಆಕೆ ಜೀವನ ನಡೆಸಬೇಕಾಗುತ್ತಿದು. ಪುರುಷನ ಅಧೀನಳಾದ ಸ್ತ್ರೀಯು ಅದನ್ನು ಒಪ್ಪಿಕೊಂಡೆ ಮುನ್ನಡೆದಳು ತನ್ನ ಅಸ್ತಿತ್ವದ ಬಗ್ಗೆ ಆಕೆ ಚಕಾರವೆತ್ತಲಿಲ್ಲ. ಅಂದಿನ ಮಹಿಳಾ ಸಮುದಾಯವು ತನ್ನ ಅಸ್ತಿತ್ವಕ್ಕಾಗಿ ಹೋರಾಟವೇನು ಮಾಡಲಿಲ್ಲ ತನ್ನ ಹಕ್ಕಿಗಾಗಿ ಪ್ರತಿಭಟನೆಯೂ ನಡೆಸಲಿಲ್ಲ ಆದರೂ ಸಹ ಅಂದಿನ ಧರ್ಮಶಾಸ್ತ್ರಗಳ ರಚನಾಕಾರರು, ಕಾನುನು ಸಂಹಿತೆಯ ವ್ಯಾಖ್ಯಾನಕಾರು ಮಹಿಳೆಯರ ಹಕ್ಕಿನ ಕುರಿತು ಸಿಮೀತವಲಯ ದಲ್ಲಾದರೂ ಚರ್ಚಿಸಿರುವುದು ಸಮಾಧಾನಕರ ಸಂಗತಿ. ಇಲ್ಲಿ ಅಧ್ಯಯನದ ವ್ಯಾಪ್ತಿಗನುಗುಣವಾಗಿ ತಾಯಿಯ ಹಕ್ಕಿನ ಕುರಿತು ಹೇಳುವುದಾದರೆ ಮನು ಸ್ಮತಿಕಾರ ಮತ್ತು ವಿಜ್ಞಾನೇಶ್ವರ ತಾಯಿಯ ಹಕ್ಕಿಗಾಗಿ ಮಾಡಿದ ಚರ್ಚೆಗಳನ್ನು ಮುಂದಿನಂತೆ ನೋಡಬಹುದು.

ಮನುಷ್ಯಪರವಾದ ಜೀವನ ಮೌಲ್ಯಗಳನ್ನು ಹೊಂದಿರುವ ಇಲ್ಲಿ ನೆಲ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮ ಶಾಸ್ತ್ರಜ್ಞರ, ದಾರ್ಶನಿಕರ, ಚಿಂತಕರ ನೆಲೆವಿಡಾಗಿ ಅವರ ಚಿಂತನೆಗಳು ಸಂಸ್ಕೃತಿಯನ್ನು ಔತ್ಯನ್ಯಗೆ ಸಾಗಿಸುವಲ್ಲಿ ಸಹಕಾರ ನೀಡಿವೆ. ಇದು ಒಂದು ಬಗೆಯ ವಾಸ್ತವವಾದರೆ, ಇನ್ನೊಂದು ಬಗೆಯ ವಾಸ್ತವ ಸತ್ಯವೂ ಕಾಣಬಹುದಾಗಿದೆ.

ಗಂಡು -ಹೆಣ್ಣು ಸಮಾಜದ ಎರಡು ಚಕ್ರಗಳಾಗಿ ಸಾಗುವಾಗ ಧರ್ಮದ ನೆಲೆಯಲ್ಲಿ ತಾರತಮ್ಯವನ್ನು ರೂಪಿಸಿ ಹೆಣ್ಣನ್ನು ಧರ್ಮದಿಂದ ದೂರ ವಿಡಲು ಪ್ರಯತ್ನಿಸಿರುವುದು ಸತ್ಯ. ಆಕೆಯನ್ನು ದೇವತೆಯಾಗಿ ಕಾಣುವಾಗ ಇದ್ದ ನೊಟ. ರಾಕ್ಷಸಿಯಾಗಿಯು ಕಂಡ ಪುರುಷನ ಗ್ರಹಿಕೆಗೆ ಎನೆಂದು ಹೇಳಬೇಕು ಒಂದೇಡೆ ಪೂಜೆಗೊಳಪಟ್ಟು ಇನ್ನೊಂದೆಡೆ ಶೋಷಣೆಗೆ ಒಳಗಾದ ಹೆಣ್ಣಿನ ಚಿತಣ ಹೆಚ್ಚು ಕಡಿಮೆ ಎಲ್ಲ ಧರ್ಮಗಳಲ್ಲಿ ಸಮಾನವಾಗಿ ಕಾಣಬಹುದು. ಆಯಾ ಧರ್ಮಗಳು ಹೆಣ್ಣಿನ ಕುರಿತಂತೆ ತಳೆದ ಯೋಚನಾಕ್ರದಿಂದ ಆಕೆಯ ಒಟ್ಟು ಬದುಕಿನ ದಾರುಣ ಸ್ಥಿತಿಯನ್ನು ವಿಶ್ಲೇಷಿಸಬಹುದು.

ಪ್ರಾಚೀನ ಕಾಲದಿಂದಲೂ ಅಸ್ಥಿತ್ವದಲ್ಲಿರುವಂತಹ ಹಿಂದೂ ಧರ್ಮ, ಜೈನ ಧರ್ಮ, ಬೌದ್ಧಧರ್ಮ, ಕಿಶ್ಚಿಯನಧರ್ಮ ಮತ್ತು ಇಸ್ಲಾಂ ಧರ್ಮಗಳು ಸಮಾನ್ಯವಾಗಿ ಹೆಣ್ಣನ್ನು ನಿಯಂತ್ರಿಸುವ ನಿಗ್ರಹಿಸುವ ನೆಲೆಯಲ್ಲಿ ತಮ್ಮ ತತ್ವವನ್ನು ಪ್ರತಿಪಾದಿಸಿದವು

"ಪ್ರಾಚೀನ ಧರ್ಮ ಪರಂಪರೆಗಳು ಹೆಣ್ಣನ್ನು ದಮನಕರಿಯಾಗಿ ನೋಡಿದ ಕ್ರಮಗಳಿಗೆ ವಿರುದ್ಧವಾಗಿ ಹೆಣ್ಣು ಪ್ರತಿಕ್ರಿಯಿಸಿದ ರೀತಿಯು ಯಾವಾಗಲೂ ಪ್ರತಿರೋಧವಾಗಿ ಕಂಡು ಬಂದಿಲ್ಲ. ಬದಲಿಗೆ ಅವಳು ಪುರುಷಾನವರ್ತಿಯಾಗಿಯೇ ಅವನು ರೂಪಿಸಿದ ಚೌಕಟ್ಟುಗಳಲ್ಲಿ ಮುಂದುವರೆದಿದ್ದಾಳೆ. ಮಾತೃ ಪ್ರಧಾನವ್ಯವಸ್ಥೆಯಲ್ಲಿ ಅವಳೇ ವಂಶದ ಉತ್ತರಾಧಿಕಾರತ್ವವನ್ನು ಹೊಂದಿದಾಗಲೂ ಈ ಬಗೆಯ ವಿರೋಧಿ ತಂತ್ರಗಾರಿಕೆಯನ್ನು ಅವವಳು ಮಾಡಲಿಲ್ಲ. ಪ್ರಾಚೀನ ಮಾತೃ ಪರಂಪರೆಯಲ್ಲಿ ಕಾಣಿಸಿಕೊಳ್ಳುವ ಮಾತೃ ಆರಾಧನಾ ಪದ್ಧತಿಗಳು, ಫಲವಂತಿಕೆಗೆ ಸಮೀಕರಿಸಿ ನಡೆಯುತ್ತಿದ್ದ ಆಚರಣೆಗಳು, ಆಹಾರೋತ್ಪಾದನೆ, ಸಂತಾನೋತ್ಪತ್ತಿ ಚಟುವಟಿಕೆಗಳಲ್ಲಿ ಅವಳು ಸಕ್ರಿಯವಾಗಿ ಕಾಣಿಸಿಕೊಂಡರೂ ಅಲ್ಲೆಲ್ಲೂ ಜೈವಿಕ ಪ್ರಕ್ರಿಯಾತ್ಮಕ ಬೆಳವಣಿಗೆಯನ್ನು ಬಿಟ್ಟರೆ ಅಸಮಾನತೆಯ ನೆಲೆಗಳನ್ನು ಗುರುತಿಸಲು ಸಾಧ್ಯವಗುವುದಿಲ್ಲ. ಹೆಣ್ಣು ಚರಿತ್ರೆಯಲ್ಲಿ ಹಾದು ಬಂದ ಗತೀಶಿಲತೆಯ ಸ್ವರೂಪ ಇದಾಗಿದೆ "[೧] ಎನ್ನಬಹುದು. ಮಾತೃಪ್ರಧಾನ ವ್ಯವಸ್ಥೆಯಿಂದ ಪುರುಷ ಪ್ರಧಾನ ವ್ಯವಸ್ಥೆಯೆಡೆಗೆ ಸಾಗಿದ ಮಾನವ ಚರಿತ್ರೆ ಸಂಪೂರ್ಣವಾಗಿ ತನ್ನ ಹತೋಟಿಗೆ ತೆಗೆದುಕೊಂಡ ಪುರುಷ ವರ್ಗ ಧರ್ಮಗಳನ್ನು ಸೃಷ್ಠಿಸಿ ಅವುಗಳನ್ನು ಹೆಣ್ಣಿನ ನಿಯಂತ್ರಣಕ್ಕೆ ಬಳಸಿಕೊಂಡದ್ದು ಸ್ಪಷ್ಟವಿದೆ. ಹೆಣ್ಣನ್ನು ಹತ್ತಿಕ್ಕಲು ಪ್ರಯತ್ನಿಸಿದ ಧರ್ಮಗಳು ಆಕೆಯ ಬಹುಮುಖ್ಯ ರೂಪವಾದ ತಾಯ್ತನವನ್ನು ಗೌರವಾಯುತವಾಗಿ ಕಂಡಿದ್ದಲ್ಲದೇ ವೈಭವೀಕರಿಸಿದ.

ಧರ್ಮ ಶಾಸ್ತ್ರಗಳು ಮನುಷ್ಯನ ವೈಯಕ್ತಿಕ ಹಾಗೂ ಕೌಟುಂಬಿಕ ಜೀವನದ ಮೇಲೆ ಪ್ರಭಾವ ಬೀರುವುದೇ ಆತನ ಸಾಮಾಜಿಕ ಹಾಗೂ ಧಾರ್ಮಿಕ ಜೀವನವನ್ನು ಪ್ರಭಾವಿಸಿವೆ. ವಿವಿಧಸ್ಮೃತಿಕಾರದಿಂದ ರಚಿಸಲ್ಪಟ್ಟ ಹಿಂದೂ ಧರ್ಮಶಾಸ್ತ್ರಗಳು ಮಹತ್ವ ಪಡೆದಿವೆ. ಈ ಧರ್ಮ ಶಾಸ್ತ್ರಗಳ ರಚನೆಕಾರರೆಂದರೆ ಮನು, ಯಜ್ಞಾವಲ್ಕ, ನಾರದ, ಪರಾಶರ, ಬೃಹಸ್ಮತಿ, ಕಾತ್ಯಾಯನ ಇವರು ಖ್ಯಾತರು. ಹಿಂದು ಧರ್ಮದಲ್ಲಿ ಧರ್ಮ ಸೂತ್ರಗಳ ನಂತರ ಸ್ಮತಿಗಳೇ ಹೆಚ್ಚು ಪ್ರಚಲಿತಕ್ಕೆ ಬಂದವು. ಇಲ್ಲಿ 'ನ್ಯಾಯ' ಎಂಬ ಮೌಲ್ಯವನ್ನು ಸ್ಮೃತಿಗಳು ಒಳಗೊಂಡಿವೆ. ಈ ಸ್ಮೃತಿಕಾರರಲ್ಲಿ ಹೆಚ್ಚು ಪ್ರಖ್ಯಾತನೂ ಹಾಗೂ ಪ್ರಮುಖ ಆದವೆಂದರೆ 'ಮನು'. ಇತ ಹಿಂದು ಧರ್ಮದ ಧಾರ್ಮಿಕ ಪ್ರಜ್ಞೆಯ ಸಾರವನ್ನು ತನ್ನ ಸ್ಮೃತಿಯಲ್ಲಿ ಹೇಳಿದ್ದಾನೆ. ಇತನ ವಿಚಾರಗಳಲ್ಲಿ ಮಹಿಳೆ ಬಹು ಚರ್ಚಿತ ವಿಷಯ. ಹೇಗಾಗಿ ಮಹಿಳೆಯನ್ನು ತಾಯಿ ರೂಪದಲ್ಲಿ ಕಾಣಲು ಆ ಮೂಲಕ ತಯ್ತನವನ್ನು ವೈಭವೀಕರಿಸಿರುವುದು ಹಿಂದು ಧರ್ಮದಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ಅದಕ್ಕಾಗಿ ಅಧ್ಯಯನದ ಮಿತಿಗಾಗಿ 'ಮನುಸ್ಮೃತಿ'ಯನ್ನು ಮಾತ್ರ ಇಲ್ಲಿ ವಿಶ್ಲೇಷಣೆಗೆ ಬಳಸಿಕೊಂಡಿರುತ್ತನೆ. 'ಸ್ಮೃತಿ'ಗಳು ಕ್ಲಿಷ್ಟಕರವಾಗಿದ್ದು ಅವುಗಳನ್ನು ಜನಸಾಮಾನ್ಯರು ಅರ್ಥಮಾಡಿಕೊಳ್ಳಲು ಸಾದ್ಯವಾಗದೇ ಇರುವಂಥ ಸಂದರ್ಭದಲ್ಲಿ ಸ್ಮೃತಿಕಾರರ ನಂತರ ಬಂದವರೆಂದರೆ, ವ್ಯಾಖ್ಯಾನಕಾರರು ಇವರು ಸ್ಮೃತಿಗಳಲ್ಲಿರುವ ದ್ವಂದ್ವತೆಯನ್ನು ತೊರೆದು, ಸಮಾಜಕ್ಕೆ ಬೇಕಾದ ನ್ಯಾಯಯುತವಾದ ವ್ಯಾಖ್ಯಾನಗಳನ್ನು ಬರೆದರು. ಇವು ಹಿಂದು ಧರ್ಮದಲ್ಲಿ ಪ್ರಾಮುಖ್ಯತೆ ಪಡೆದವು "ಹಿಂದೂನ್ಯಾಯದ ಬೆಳವಣಿಗೆಯಲ್ಲಿ ಅತ್ಯಂತ ಮಹತ್ವದ

ಪಾತ್ರವನ್ನು ನಿರ್ವಹಿಸಿದ ಶ್ರೇಯಸ್ಸು ವ್ಯಾಖ್ಯಾನಕಾರರಿಗೆ ಸಲ್ಲುತ್ತದೆ ''[೧೭] ಎಕೆಂದರೆ ಧರ್ಮವನ್ನು ಸರಳಗೊಳಿಸಿ ಕಾಲಕ್ಕೆ ತಕ್ಕಂತೆ ರೂಪಾಂತರಗೊಳಿಸಿ ಸುಲಭವಾಗಿ ಗ್ರಹಿಸಿಕೊಳ್ಳಲು ವ್ಯಾಖ್ಯಾನಗಳು ಸಹಾಯಕವಾದವು. ಕಾಲದಿಂದ ಕಾಲಕ್ಕೆ ಬದಲಾಗುವ ಸಾಮಾಜಿಕ ನಿಲುವುಗಳನ್ನು ಪ್ರತ್ಯೆಕಿಸಿ ಸಂಧರ್ಭಕ್ಕನುಗುಣವಾಗಿ ನ್ಯಾಯ ಸಮ್ಮತವಾಗಿ ಸಮಾಜವನ್ನು ನಡೆಸುವುದಕ್ಕೆ ಈ ವ್ಯಾಖ್ಯಾನಗಳು ಕಾರ್ಯ ನಿರ್ವಹಿಸಿದವು ಪಂಡಿತರಾದ ಇವರು ಧರ್ಮ -ಸ್ಮೃತಿಗಳನ್ನು ಗ್ರಹಿಸಿಕೊಂಡು ವ್ಯಾಖ್ಯಾನಗಳನ್ನು ಬರೆದರು ಸರ್ವಶ್ರೇಷ್ಠನಾದ ವ್ಯಾಖ್ಯಾನಕಾರನಷ್ಟೇ ಅಲ್ಲ. ಭಾರತೀಯ ಧರ್ಮದ ನೆಲೆಯಲ್ಲಿ ನ್ಯಾಯಶಾಸ್ತ್ರವನ್ನು ರಚಿದ. ಈ ಕೃತಿಯೇ 'ಮಿತಾಕ್ಷರ'. ಮನುಸ್ಮೃತಿ ಹಾಗೂ ವಿಜ್ಞಾನೇಶ್ವರ ನಿಲುವುಗಳನ್ನು ತಾಯ್ತನದ ನೆಲೆಯಲ್ಲಿ ಗ್ರಹಿಸುವುದು ಉದ್ದೇಶ ಹೊಂದಲಾಗಿದೆ.

ಮನು ಸ್ಮೃತಿಕಾರನು ಹೆಣ್ಣಿನ ಕುರಿತಂತೆ ದ್ವಂದ್ವಾತ್ಮಕ ಧೋರಣೆ ತಳೆದದ್ದು ಸ್ತ್ರೀ ವಿರೋಧಿ ಅಭಿಪ್ರಾಯಗಳೆಂದೆ ಹೇಳಬಹುದು, ತಾಯ್ತನದ ಕುರಿತಂತೆ ಇತನ ಅಭಿಪ್ರಾಯಗಳು ಪುರುಷ ಹೆರಿಕೆಯ ನುಡಿಗಳೇ ಆಗಿವೆ. ಸ್ತ್ರೀ ಇರುವುದೇ ಮಕ್ಕಳನ್ನು ಹೆರಲು ಮತ್ತು ಅವುಗಳ ಲಾಲನೆ - ಪಾಲನೆ ಮಾಡಲು ಎನ್ನುತ್ತಾನೆ ''ಪುನ್ನಾಮ ನರಕದಿಂದ (ಪುತ್ ಎಂಬ ನರಕದಿಂದ) ಕಾಪಾಡುವವನು ಪುತ್ರ ಎಂದು ಮನುವಿನ ಹೇಳಿಕೆ, 'ಪುನ್ನಾಮೋ ನರಕಾದ್ಯಸ್ಯಾತ್ ತ್ರಾಯತೇ ಪಿತರಂ ಸುತ: ತಸ್ಮಾತ್ ಪುತ್ರ ಇತಿ (ಮನು -೯-೧೩೮)''[೧೮] ಎಂದು ಅಭಿಪ್ರಾಯ ಪಡುತ್ತಾನೆ. ಇಲ್ಲಿ ತಾಯಿಯಯಾಗುವವಳ ಮೇಲೆ ಗಂಡು ಸಂತಾನವೇ ಸ್ವರ್ಗಕ್ಕೆ ದಾರಿ ಎಂದು ನಂಬಲಾಗಿದ್ದು, ಗಂಡುಸಂತಾನಪೇಕ್ಷೆಗಗಿ ಹಲವು ಬಗೆಯ ಹೋಮ, ಹವನ, ವ್ರತಾಚರಣೆಗಳ ಮಾಡಲಾಗುತ್ತಿತ್ತು. ಮದುವೆ ಕೂಡ ಸಂತಾನ ಪ್ರಾಪ್ತಿಗಾಗಿ ಎಂದು ಹೇಳುತ್ತಾನೆ. ಸಂತಾನಪಡೆದುಕೊಂಡ ದಂಪತಿಗಳು ಮೊಕ್ಷಕ್ಕೆ ಅರ್ಹರಾಗುತ್ತಾರೆ ಎಂದು ಅಭಿಪ್ರಾಯ ಪಡುತ್ತಾನೆ. ಪುತ್ರಪ್ರಾಪ್ತಿಗಾಗಿ ನಿಯೋಗ ಪದ್ಧತಿಗೆ ಹೆಚ್ಚಿನ ಒತ್ತನ್ನು ಕೊಡುತ್ತಾನೆ. ಆದರೆ ವಿಧವಾ ವಿವಾಹ ನಿಷೇಧಿತ್ತಾನೆ. ಬಂಜೆಯಾದ ಹೆಂಡತಿಯನ್ನು ಬಿಟ್ಟು ಬಿಡಬೇಕು ಎನ್ನುತ್ತಾನೆ. ಮನುವಿನ ದೃಷ್ಟಿಯಲ್ಲಿ ಹೆಂಡತಿ ಕುಟುಂಬಕ್ಕೆ ಸೀಮಿತವಾಗಿ ಇರುವವಳು ಗಂಡನ ಹೆಜ್ಜೆ ಹಾಕಿ ನಡೆಯುವವಳು. ಹೆಂಡತಿ ಇಲ್ಲದೆ ಗಂಡನಿಗೆ ಯಾವ ಧಾರ್ಮಿಕ ಆಚರಣೆಯಲ್ಲಿ ಭಾಗಿಯಾಗಲೂ ಸಾಧ್ಯವಿಲ್ಲ ಎನ್ನುತ್ತಾನೆ. ಮಕ್ಕಳನ್ನು ಪಡೆದು ತಾಯಿ ಗಂಡನಿಗೆ ಸಹಧರ್ಮಿಣಿಯಾಗಬೇಕು ಗಂಡುಮಗುವಿನ ಮಹತ್ವವನ್ನು ಒತ್ತಿ ಹೇಳಿದರು ಹೆಣ್ಣು ಮಗುವನ ಜನ್ಮದಿಂದ ತಂದೆಯ ಪ್ರತಿರೂಪಳಾಗಿ ಆಕೆಯನ್ನು ಗ್ರಹಿಸಿದ್ದಾಳೆ ''ಮನುಧರ್ಮ ಶಾಸ್ತ್ರದ ಪ್ರಕಾರ 'ಪುತ್ರಿಕೆ' ವಾರಸುದಾರಳಲ್ಲ. ಆದರೆ

1 ಪುತ್ರಿ ಪುತ್ರನ ಸಮಾನ ಎಂದಿದ್ದಾನೆ

2 ಪುತ್ರಿ ತುಂಬ ಪೀತಿಗೆ ಅರ್ಹಳಾದವಳು

3 ಪುತ್ರಿಕೆ ತಂದೆಯ ಪ್ರತಿರೂಪ''[೧೯]

ಹೆಣ್ಣು ಸಂತಾನ ಕುರಿತು ಅಪಾರ ಪ್ರೀತಿ ತೋರಿಸಿದ ಮನು. ಆಸ್ತಿಯಲ್ಲಿ ಮಾತ್ರ ಪಾಲು ಕೊಡದೆ, ಆಕೆಯ ಮದುವೆ ಸಂಧರ್ಭದಲ್ಲಿ ಆಗುವ ಖರ್ಚನ್ನು ತಂದೆಯ ಆಸ್ತಿಯಿಂದಲೇ ಭರಿಸಬೇಕು

ಎಂದು ಹೇಳುತ್ತಾನೆ. ತಂದೆ ಆಸ್ತಿಗೆ ವಾರಸುತನ ಕೊಡದೆ, " ಸ್ತ್ರೀಗೆ 'ಸ್ತ್ರೀಧನ 'ದ ಮೇಲೆ ಮಾತ್ರ ಹಕ್ಕಿದೆಯೇ ಹೊರತು ಬೇರೆ ಯಾವ ಆಸ್ತಿಯೂ ಇಲ್ಲವೆಂದ "[೨೦] ಹೀಗೆ ಮನು ಸ್ತ್ರೀಯರಿಗೆ ತಂದೆಯಿಂದ ಯಾವ ಹಕ್ಕನ್ನು ಕೊಡಲಿಲ್ಲ. ಮದುವೆಯಾಗಿ ಮಕ್ಕಳನ್ನು ಪಡೆದು ವಂಶೋದ್ಧಾರಕಳಾದ ತಾಯಿಯ ಹಕ್ಕಿನ ಕುರು ಏನನ್ನು ಹೇಳದ ಮನು ಬಾಲ್ಯದಲ್ಲಿ ತಂದೆಯ, ಯೌವ್ವನದಲ್ಲಿ ಗಂಡನ, ಮುಪ್ಪಿನಲ್ಲಿ ಮಗನ ಆಶ್ರಯದಲ್ಲಿ ಇರಬೇಕು ಎಂದು ಹೇಳುವುದನ್ನು ಮರೆಯಲಿಲ್ಲ. " ಸ್ತ್ರೀಯು ಕ್ಷೇತ್ರವೆಂದು , ಪುರುಷನು ಬೀಜ ಬಿತ್ತುವನೆಂದಲೂ 'ಭೂಮಿ ಫಲಂತಿಕೆ 'ಯ ಸಮೀಕರಣದಿಂದ ವಿವರಿಸುತ್ತಾನೆ. ಇಲ್ಲಿ ಮತ್ತೆ ಬೀಜ ಪಕ್ಷಪಾತದ ವಿವರಣೆಯನ್ನು ಮಾಡಿ ಪುರುಷ ಶ್ರೇಷ್ಠತೆಯನ್ನು ಮೆರೆದಿದ್ದಾನೆ. ಭೂಮಿ ಒಂದೇ ಆದರೂ ಬೀಜ ವೈವಿಧ್ಯದಿಂದ ಭಿನ್ನ ಬೆಳೆಯನ್ನು ಬೆಳೆಯಲಾಗುವುದೆಂದು ಸಮರ್ಥನೆಯನ್ನು ನೀಡುತ್ತಾನೆ.ಆದರೆ ಭೂಮಿಯ ಒಡಲಲ್ಲಿರುವ ಮಣ್ಣಿನ ಗುಣ ಹಾಗೂ ಪೋಷಕ ಶಕ್ತಿಯ ಬಗೆಗೆ ಮನು ಚಕಾರವೆತ್ತುವುದಿಲ್ಲ."[೨೦] ಹೀಗೆ ತಾಯ್ತನದ ಕುರಿತಂತೆ ವಿಶೇಷ ಒಲವನ್ನು ತಾಳದೇ ಸ್ತ್ರೀ ಕೇಂದ್ರಿಕೃತವಾದ ಹಲವು ವ್ಯಾಖ್ಯಾನಗಳನ್ನು ಕೊಟ್ಟಿದ್ದಾನೆ, ಆದರೆ ಈ ವ್ಯಾಖ್ಯಾನಗಳು ವೈಭವೀಕರಣದ ನೆಲೆಯಲ್ಲಿದ್ದು, ಹಕ್ಕಿನ ಪ್ರಶ್ನೆ ಬಂದಾಗ ಮಾತ್ರ ಮೌನಿಯಾಗಿ ಕಾಣುತ್ತಾನೆ. ಹೆಣ್ಣು ಮಗಳಾಗಿ, ಹೆಂಡತಿಯಾಗಿ, ತಾಯಿಯೂ ನಿರ್ಭಂದಲ್ಲಿಯೇ ತನ್ನ ಜೀವನ ಕಳೆಯಬೇಕು ಎಂಬುದೇ ಇತನ ಮುಖ್ಯ ವಿಚಾರ.

ವಿಜ್ಞಾನೇಶ್ವರ ಇತನ ಗ್ರಂಥ ಮಿತಾಕ್ಷರ. ಇವನೊಬ್ಬ ಭಾರತೀಯ ನೆಲದ ಮಹಾನ್ ವ್ಯಾಖ್ಯಾನಕಾರ, ಇದೇ ನೆಲದಲ್ಲಿ ವಾಸಿಸುವ ಹೆಣ್ಣನ್ನು ದೇವತೆಯಾಗಿ ಪೂಜಿಸಿದರೂ, ಮನೆಯಂಬ ನಾಲ್ಕು ಗೊಡೆಗಳಿಗೆ ಸೀಮಿತಗೊಳಿಸಿದೆ. ' ಗ್ರಹಿಣೀ ಗೃಹಮುಚ್ಯತೆ ' ಎಂಬ ನೆಲೆಯಲ್ಲಿ ಮಾತ್ರ ಆಕೆಯನ್ನು ಕಾಣಲಾಗಿದೆ. ಮೋಕ್ಷ ಪಡೆಯುವುದಕ್ಕಾಗಿ ಮದುವೆ , ಮಕ್ಕಳು ಇವುಗಳಿಗಾಗಿ ಹೆಣ್ಣನ್ನು ಬಳಸಿಕೊಳ್ಳಲಾಯಿತು. ಕಾಮದಾಸೆಗಾಗಿ ಹೆಣ್ಣನ್ನು ಜೊತೆಗಿಟ್ಟುಕೊಳ್ಳಲಾಯಿತು. ಇದರ ಹೋರತಾಗಿ ಆಕೆಗೆ ಅಸ್ತಿತ್ವವೇ ಇರಲಿಲ್ಲ . ಇಂಥ ದಾರಿಯಲ್ಲಿ ಸಾಗಿ ಬಂದ ಹೆಣ್ಣನ್ನು ಪುರುಷಗ್ರಹಿತ ಮನಸ್ಸುಗಳು ಎರಡನೇ ದರ್ಜೆ ಪ್ರಜೆಯಾಗಿಯೇ ಕಂಡಿವೆ. ಒಂದು ಕಡೆ ದೇವತೆಯಾಗಿ ಇನ್ನೊಂದು ಕಡೆ ರಾಕ್ಷಸಿಯಾಗಿ "ಈ ವಿರೋಧಾಭಾಸಗಳು ಹಿಂದೂ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬಂದಿವೆ. ಸ್ತ್ರೀ ಪರವಾದ, ಸ್ತ್ರೀ ಗೆ ಅನುಕೂಲಕರವಾದ ಅನೇಕ ಅವಕಾಶಗಳು, ನಿಯಮಗಳು, ಧರ್ಮಶಾಸ್ತ್ರಗಳ ಮೂಲಕವೇ ಭಾರತೀಯ ಪರಂಪರೆಯಲ್ಲಿ ಮಾನ್ಯ ಮಾಡಲಾಗಿದ್ದರೂ ಪುರುಷ ಪ್ರಧಾನ ಸಮಾಜ ಅವುಗಳನ್ನು ನಿಕೃಷ್ಟವಾಗಿ ಕಂಡು ಅವುಗಳ ಅನುಷ್ಠಾನಕ್ಕೆ ಅವಕಾಶವನ್ನೇ ಕೊಡಲಾಗಿಲ್ಲ "[೨೨] ಹೀಗೆ ಹೆಣ್ಣಿನ ಸ್ಥಿತಿ ಇರುವಾಗ ಆಕೆಯ ಮೂಲ ಶಕ್ತಿ ಕೇಂದ್ರವಾದ ತಾಯಿಯ ಸ್ಥಾನದ ಕುರಿತಂತೆ ವಿಜ್ಞಾನೇಶ್ವರನ ವಿಚಾರಗಳು ವಿಶಿಷ್ಟ್ಯವಾಗಿವೆ ಎನ್ನಬಹುದು. ಹೆಣ್ಣಿನ ಕುರಿತಂತೆ ಪ್ರಗತಿಪರವಾದ ವಿಚಾರಗಳನ್ನು ಹೊಂದಿದ ಯಾಜ್ಞವಲ್ಲ, ಬೃಹಸ್ಪತಿ, ಗೌತಮಂತಹ ಸ್ಮೃತಿಕಾರರು ಪ್ರಗತಿಶೀಲ ಮನೋಭಾವನೆಯನ್ನು ತಳೆದಿದ್ದರು. ಅದನ್ನು ಗುರುತಿಸಿದ ವಿಜ್ಞಾನೇಶ್ವರನು

ಹೆಣ್ಣು ತಂದೆಯ ಆಸ್ತಿಯಲ್ಲಿ ಪಾಲು ಪಡೆದುಕೊಳ್ಳುವ ವಿಚಾರವನ್ನು ಕೊಟ್ಟನು. ಇತ ತಾಯಂದಿರ ಕುರಿತಂತೆ ಕೆಳಗಿನ ಅಂಶಗಳನ್ನು ಎತ್ತಿ ಹಿಡಿದನು.

ಹೆಣ್ಣಿಗೆ ಉತ್ತರಾಧಿಕಾರದ ಹಕ್ಕನ್ನು ನೀಡುವುದರ ಜೊತೆಗೆ ಗಂಡು ಸಂತಾನವಿಲ್ಲದಿದ್ದಾಗ, ಹೆಣ್ಣು ಮಕ್ಕಳಿಗೆ ಆಸ್ತಿ ಹಸ್ತಾಂತರವಾಗುವ ಪದ್ಧತಿಯ ಪರವಾದಿಸುತ್ತಾನೆ.

ಹೀಗಾದಲ್ಲಿ ತಾಯಿಯಾಗಲಿರುವವಳಿಗೆ ಗಂಡು ಸಂತಾನವನ್ನ ಹೆತ್ತುಕೊಡಬೇಕು ಎಂಬ ಒತ್ತಡ ಇರುವುದಿಲ್ಲ. "ಮಿತಾಕ್ಷರದ ಪ್ರಕಾರ ಮಗನಿಂದ ಉತ್ತರಾಧಿಕಾರ ಒಳಪಡುತ್ತದೆ. ಅಂದರೆ ಉತ್ತರಾಧಿಕಾರ ಪಡೆದ ತಾಯಿ ಆ ಸ್ವತ್ತಿನ ವಿಷಯದಲ್ಲಿ ಸ್ವತಂತ್ರಳಾಗಿದ್ದಳು ಎಂಬುದು ಇದರ ತಾತ್ಪರ್ಯ. "[೨೩] ತಾಯಿಯು ಆಸ್ತಿಯನ್ನು ಹೊಂದಿದ್ದರೆ, ಅದು ಮುಂದೆ ತನ್ನ ಹೆಣ್ಣು ಮಕ್ಕಳಿಗೆ ಲಭಿಸುತ್ತದೆ. ಹಿಂದಿನ ಸ್ಮೃತಿಕಾರರೇಲ್ಲಂಗಿಂತಲೂ ಸ್ತ್ರೀಗೆ ಮಾನ್ಯತೆ ಕೊಟ್ಟು ತಾಯಿಯನ್ನು ಎತ್ತಿಹಿಡಿದಿದ್ದಾನೆ. ' ಸ್ತ್ರೀ ಧನ'ಕ್ಕೆ ವಾರಸುದಾರರು ಆಕೆಯ ಹೆಣ್ಣುಮಕ್ಕಳೇ ಆಗಿರುತ್ತಾರೆ ಎನ್ನುತ್ತಾನೆ.ತಾಯಿಯಾದವಳು ತನ್ನ ಸ್ವತ್ತನ್ನು ತನ್ನ ಮಗಳಿಗೆ ವರ್ಗಾಯಿಸುವ ಹಕ್ಕನ್ನು ಹೊಂದಿದ್ದಾಳೆ ಎಂದು ಹೇಳುವುದರ ಮೂಲಕ ತಾಯಿಗೆ ವಿಶೇಷ ಅಧಿಕಾರ ನೀಡಿದ್ದಾನೆ.

ಗಂಡು ಸಂತಾನದ ಪ್ರಾಮುಖ್ಯತೆಗೆ ಒತ್ತುಕೊಡುವ ಸ್ಮೃತಿಕಾರರನ್ನು ವಿಜ್ಞಾನೇಶ್ವರನು ಖಂಡಿಸುತ್ತಾನೆ. ವಿಧವೆಯರ ಪಾಲಿಗೆ ವರವಾಗಿ ಕಂಡು ಬರುವ ಇತ, ವಂಶದ ವಾರಸುದಾರಿಕೆಗಾಗಿ 'ನಿಯೋಗ ' ಪದ್ಧತಿಯು ವಿರೋಧಿಸಿ , ವಿಧವಾ-ವಿವಾಹವನ್ನು ಬೆಂಬಲಿಸುತ್ತಾನೆ. ಗಂಡನ ಆಸ್ತಿಯಲ್ಲಿ ವಿಧವೆ ಪಾಲುಕೊಡುವದರ ಕುರಿತು ಒತ್ತುಕೊಟ್ಟು ಹೇಳಿದ್ದಾನೆ. " ಗಂಡು ಸಂತಾನ ಇಲ್ಲದ ವಿಧವೆ ತನ್ನ ಗಂಡನ ಆಸ್ತಿಯಲ್ಲಿ ಪಾಲುದಾರಳಾಗಲು ತನ್ನ ಶೀಲ , ಚಾರಿತ್ರ್ಯ ಶುದ್ಧವಾಗಿ ಟ್ಟುಕೊಳ್ಳಬೇಕೆಂಬ ಶರತ್ತುಗಳು ಬೇರೆ ಇದ್ದವು. ಆದರೆ ವಿಜ್ಞಾನೇಶ್ವರ ವಿಧವಾ ಸ್ತ್ರೀಯ ಗಂಡನ ಆಸ್ತಿಯ ಮೇಲಿನ ವಾರಸುದಾರಿಕೆಯನ್ನು ಹೆಚ್ಚು ಕಡಿಮೆ ಬೇಶರತ್ತುಗೊಳಿಸಿದ್ದಾನೆ. ಗಂಡನ ಆಸ್ತಿಯ ಮೇಲೆ ವಿಧವಾ ಹೆಂಡತಿಯ ಹಕ್ಕು ಸಂಪೂರ್ಣವೂ ಬೇಶರತ್ತಿನದೂ ಆಗಿರುತ್ತದೆ. "[೨೪] ವಿಜ್ಞಾನೇಶ್ವರನು ವಿಧವೆಯರಿಗೆ ಕೊಟ್ಟ ಆಸ್ತಿಯ ಹಕ್ಕು ವಿಧವಾ ತಾಯಂದಿರಿಗೆ ಆರ್ಥಿಕ ಭದ್ರತೆ ಒದಗಿಸಿ ಕೊಟ್ಟಿದೆ. ಈ ನೀತಿ ಆಧುನಿಕ ಕಾನೂನಿನಲ್ಲಿಯೂ ಸೇರ್ಪಡಿಸಲಾಗಿದ್ದು. ತಾಯಂದಿರು ಈ ಮೂಲಕ ಇತನಿಗೆ ಋಣಿಯಾಗಿದ್ದಾರೆ. ಇದಲ್ಲದೆ ವಾರಸುದಾರನಾದ ವ್ಯಕ್ತಿ ಮರಣಹೊಂದಿದರೆ ಆತನಿಗೆ ತಂದೆ- ತಾಯಿ ಬಿಟ್ಟು ಯಾರು ವಾರಸುದಾರರು ( ಹೆಂಡತಿ ಮಕ್ಕಳು ) ಇಲ್ಲದಿದ್ದರೆ. ದಂಪತಿಗಳಲ್ಲಿ ಯಾರಾದರೊಬ್ಬರೂ ಆಸ್ತಿಗೆ ವಾರಸುದಾರಿಕೆಯ ಹಕ್ಕು ಪಡೆಯಲು ಬರುತ್ತದೆ ಈ ಮೂಲಕ ತಾಯಿಗೆ ಪ್ರಥಮ ಆದ್ಯತೆ ನಂತರ ತಂದೆಗೆ ಆದ್ಯತೆ ಕೊಡಲಾಗಿದೆ. ಪ್ರಾಕೃತೀಕವಾಗಿ ಕಳ್ಳು- ಬಳ್ಳಿ ಸಂಭಂಧದಲ್ಲಿ ತಾಯಿ ತೀರಾ ಹತ್ತಿರದ ಸಂಭಂದಿ ಎಂದು ಭಾವಿಸಲಾಗಿದೆ. ಎಂದು ಬರೀ ಮಾತಿನಲೇ ವೈಭವೀಕರಿಸದೇ ತಾಯಿಗೆ ಅವಳದೇ ಆದ ಹಕ್ಕನ್ನು ವಿಜ್ಞಾನೇಶ್ವರ ನೀಡಿದ್ದಾನೆ.

ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯು ಹಿಂದೂ ಧರ್ಮ ಮೂಲ ಸೆಲೆಯಾಗಿ ಹರಿದು ಬಂದಿದೆ. ವೈವಿಧ್ಯತೆಯಿಂದ ಕೂಡಿದ ಇಲ್ಲಿ ಸಂಸ್ಕೃತಿ ಹಲವು ಧರ್ಮಗಳನ್ನು ತನ್ನ ತೆಕ್ಕೆಯಲ್ಲಿ

ಬೆಳೆಸಿಕೊಂಡು ಬಂದಿದೆ. ತಾಯ್ತನದ ಕುರಿತ ಗ್ರಹಿಕೆಯನ್ನು ಹಿಂದೂ ಧರ್ಮದ ನೆಲೆಯಲ್ಲಿ ಏಕಸೂತ್ರದಲ್ಲಿ ಹೇಳುವುದು ಕಷ್ಟ . ಈ ಕಾರಣಕ್ಕಾಗಿ ಇಲ್ಲಿ ಹಿಂದೂ ಧರ್ಮದಲ್ಲಿ ಬಹು ಚರ್ಚಿತನಾದ ಮತ್ತು ಜನಸಾಮಾನ್ಯರ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದ ಮನುವಿನ ವಿಚಾರಗಳ ಜೋತೆಗೆ ಮುಂದೆ ಬಂದ ಪ್ರಮುಖ ಸ್ಮೃತಿಕಾರರಲ್ಲಿನ ಸ್ತ್ರೀ ಪರ ವಿಚಾರಗಳನ್ನು ಎತ್ತಿಹಿಡಿದ ' ಯಾಜ್ಞವಲ್ಕ ಸ್ಮೃತಿ ' ವ್ಯಾಖ್ಯಾನ ಬರೆದ ವಿಜ್ಞಾನೇಶ್ವರ ವಿಚಾರಗಳನ್ನು ಮಾತ್ರ ಗಮನಿಸಲಾಗಿದೆ. ಏಕೆಂದರೆ ಇತನ ವಿಚಾರ ಜನ ಸಾಮಾನ್ಯರ ಆಲೋಚನೆಯ ಮೇಲೆ ಪ್ರಭಾವ ಬೀರಿವೆ ಎಂಬ ನಿಟ್ಟಿನಲ್ಲಿ ಮಾತ್ರ ಗ್ರಹಿಸಲಾಗಿದೆ.

ಭಾರತೀಯ ಸಮಾಜವನ್ನು ಬಹುವಾಗಿ ಪ್ರಭಾವಿಸಿರುವ ವ್ಯಾಖ್ಯಾನಕಾರರನ್ನು ಮಾತ್ರ ಇಲ್ಲಿ ವಿಶ್ಲೇಷಣೆಗೆ ಒಳಮಾಡಿಕೊಳ್ಳಲಾಗಿದೆ. ಇದು ಅಧ್ಯಯನದ ಒಂದು ಚೌಕಟ್ಟು ಎಂದು ಮಾತ್ರ ಗ್ರಹಿಸಿಕೊಳ್ಳಬೇಕು. ವಿಭಿನ್ನವಾದ ವೈಶಿಷ್ಟ್ಯತೆಯಿಂದ ಕೂಡಿದ ನಮ್ಮ ಸಮಾಜದ ಒಳಸೆಲೆಗಳು ಹಲವು ಅವುಗಳನ್ನು ಒಂದೇ ಸೂತ್ರಕ್ಕೆ ತರಲು ಕಷ್ಟ ಸಾಧ್ಯ. ಈ ಕಾರಣಕ್ಕಾಗಿ ನಮ್ಮ ಸಮಾಜವನ್ನು ಬಹುವಾಗಿ ಪ್ರಭಾವಿಸಿದ ' ಮನುಸ್ಮೃತಿ ' ಕಾರನನ್ನು ಮಾತ್ರ ಆಯ್ಕೆ ಮಾಡಿಕೊಂಡು , ನಂತರದ ದಿನಗಳಲ್ಲಿ ಸ್ಮೃತಿಕಾರರ ವಿಚಾರಗಳಿಗೆ ವ್ಯಾಖ್ಯಾನ ಬರೆದ ವಿಜ್ಞಾನೇಶ್ವರನನ್ನು ಮಾತ್ರ ಇಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗಿದೆ. ಮನು ಮತ್ತು ವಿಜ್ಞಾನೇಶ್ವರರು ತಮ್ಮ ವ್ಯಾಖ್ಯಾನದ ಮೂಲಕ ಹೆಣ್ಣಿನ ಜೀವನದ ಮೇಲೆ ಬಹುವಾಗಿ ಪ್ರಭಾವಿಸಿದ್ದಾರೆ. ಈ ಕಾರಣಕ್ಕಾಗಿ ಇವರಿಬ್ಬರನ್ನು ಮಾತ್ರ ಗ್ರಹಿಸಲಾಗಿದೆ. ತಾಯಿಯನ್ನು ಮತ್ತು ತಾಯ್ತನವನ್ನು ಬರೀ ವೈಭವೀಕರಣದಲ್ಲೇ ಗ್ರಹಿಸುತ್ತ ಬಂದ ನಮ್ಮ ಸಮಾಜ ವಿಜ್ಞಾನೇಶ್ವರನಂಥ ಹರಿತ ವಿಚಾರವಂತನಿಂದ ಒಂದು ನೆಲೆಯನ್ನು ತಾಯಂದಿರು ಪಡೆದುಕೊಂಡಿರುವುದು ಗ್ರಹಿಸಬಹುದು. ಆಧುನಿಕ ನ್ಯಾಯ ನಿಂತಿರುವುದು ಧರ್ಮದ ತತ್ವಾಧಾರದ ಅಡಿಪಾಯದ ಮೇಲೆ ಅದನ್ನು ವಿಜ್ಞಾನೇಶ್ವರನಂಥವರು ಪ್ರತಿಪಾದಿಸಿದ ತತ್ವಗಳು ಪುಷ್ಟಿಯನ್ನು ಒದಗಿಸಿದವು. ನ್ಯಾಯ ಎಂದರೆ ಧರ್ಮ, ಧರ್ಮ ಎಂದರೆ ನ್ಯಾಯ ಎಂಬುದನ್ನು ಸಾಮಾಜಿಕ ನ್ಯಾಯದ ಆಧಾರದಿಂದ ರೂಪಿಸಲು ಸಹಕರಿಸಿದವು. ಇವು ಹೆಣ್ಣಿನ ಮೂಲಕ ತಾಯ್ತನಕ್ಕೆ ನ್ಯಾಯ ಒದಗಿಸಿಕೊಡಲು ಕೆಲ ಮಟ್ಟಿಗಾದರೂ ಪ್ರಯತ್ನ ಪಟ್ಟಿರುವುದು ಗಮನಿಸಬಹುದು.

ಧರ್ಮವಾಗಲೀ ಧರ್ಮದ ತತ್ವಗಳಾಗಲೀ ಒಂದೇ ದಿನದಲ್ಲಿ ಹುಟ್ಟಿದವುಗಳಲ್ಲ ಆದಿ ಅನಾದಿ ಕಾಲದಿಂದಲೂ ಮಾನವನು ತನ್ನದೇ ಆದ ರೀತಿಯಲ್ಲಿ ಧರ್ಮವನ್ನು ಹುಟ್ಟು ಹಾಕಿ ಆ ಮೂಲುಕ ಬದುಕುತ್ತಾ ಬಂದಿದ್ದಾನೆ. ಧರ್ಮದ ಅಡಿಯಲ್ಲಿ ಹಲವು ಕಟ್ಟು ಪಾಡುಗಳನ್ನು ವಿಧಿನಿಷೇಧಗಳನ್ನು ಬೆಳೆಸಿಕೊಂಡು ಬಂದಿದ್ದಾನೆ. ಧರ್ಮದ ಹೆಸರಿನಲ್ಲಿ ಸಾಮಾಜಿಕ ತಾರತಮ್ಯಗಳು ಏರ್ಪಟ್ಟಿವೆ. ಮುಖ್ಯವಾಗಿ ಲಿಂಗ ತಾರತಮ್ಯ ಗಾಢವಾಗಿ ಬೇರೂರಿರುವುದು ಸ್ಪಷ್ಟವಿದೆ ಪ್ರಾಚೀನ ಕಾಲದಿಂದಲೂ ಮಹಿಳೆಯರನ್ನು ಧರ್ಮದ ಹೆಸರಿನಲ್ಲಿ ಶೋಷಣೆಗೆ ಇಡು ಮಾಡಿರುವುದು ಕಾಣಬಹುದು. ಯಾವುದೇ ಧರ್ಮವನ್ನು ನೋಡಿದಾಗ ಹೆಚ್ಚು ಕಡಿಮೆ ಮಹಿಳೆಯರನ್ನು ಸ್ಥಿತಿ ಗತಿಗಳನ್ನು ಒಂದೇ ಆಗಿವೆ. ಹಲವು ಸಂದರ್ಭದಲ್ಲಿ ಆಯಾಧರ್ಮದಲ್ಲಿ ಹುಟ್ಟಿಬಂದ ಮಹಾನ ವ್ಯಕ್ತಿಗಳು ಧರ್ಮವನ್ನು ಮಾನವೀಯ ನೆಲೆಯಲ್ಲಿ ಪುನರ ರೂಪಿಸಲು ಪ್ರಯತ್ನ ಪಟ್ಟಿರುವುದು

ಸತ್ಯ. ರಾಮ, ಕೃಷ್ಣ, ಏಸುಕ್ರಿಸ್ತ, ಬುದ್ಧ, ಪೈಗಂಬರ, ಬಸವ, ಅಂಬೇಡ್ಕರ ರಂತಹ ಹತ್ತುಹಲವು ಮಾನವತಾವದಿಗಳು ಸಮಾನತೆಯ ತತ್ವವನ್ನು ಅನುಸರಿಸಿ ಆಯಾ ಕಾಲಕ್ಕೆ ಸರಿಹೊಂದುವ ಹಲವು ಬಗೆಯ ಧಾರ್ಮಿಕ ತತ್ವಗಳನ್ನು ಭೋಧಿಸಿದರು.

ಧರ್ಮಯೆಂಬುವುದು ಒಂದು ಭೋದನೆಯಾಗದ ಅದು ಜೀವನದ ಗತಿಯಾಗಬೇಕು. ಇಲ್ಲಿ ಹೆಣ್ಣು ಗಂಡು ಕನಿಷ್ಠ ಶ್ರೇಷ್ಠರಾಗದೆ, ಪೂರಕವಾದ ರೀತಿಯಲ್ಲಿ ಬದುಕುವ ದಾರಿಯನ್ನು ಕಂಡುಕೊಳ್ಳುವ ವ್ಯವಸ್ಥೆ ಧರ್ಮದ ಮೂಲಕಮಾಡಲಾಯಿತು. ವಿಶೇಷವಾಗಿ ಭಾರತವನ್ನು ಬಹುವಾಗಿ ಪ್ರಭಾವಿಸಿದ ಹಿಂದೂ ಧರ್ಮದಲ್ಲಿ ದೇವತೆಯಾಗಿ ದೇವಾಲಯಗಳಲ್ಲಿ ಪೂಜೆಗೊಳಗಾದರೂ ವಾಸ್ತವದಲ್ಲಿ ಆಕೆಯ ಬದುಕು ಚಿಂತಾಜನಕ. ತಾಯಿಯನ್ನು ಗೌರವ ಕೊಟ್ಟರು, ತಾಯ್ತನಕ್ಕೆ ಮನಸೋತರು ಆ ನೆಲೆಯಿಂದಲೇ ಸಾಮಾಜಿಕ ಕಟ್ಟು ಪಾಡುಗಳನ್ನು ವಿಧಿಸಿ ಶೋಷಣೆಗೆ ಇಡುಮಾಡಿರುವುದು ಕಠೋರ ಸತ್ಯ. ಪುರುಷನ ಕಾಮಕ್ಕೆ ಬಲಿಯಾಗುವುದರಿಂದ ಹಿಡಿದು, ತಾಯ್ತನದ ಸುಖ ಪಡೆದು ಮಣ್ಣು ಸೇರುವ ವರೆಗೆ ತಾಯಾದವಳಿಗೆ ಸಂಕಟ ತಪ್ಪಿದ್ದಲ್ಲ. ಇದು ಧರ್ಮವಿಧಿಸಿದ ವಿಧಿ. ಆಕೆಗೆ ತನ್ನದೆ ಆದ ವ್ಯಕ್ತಿತ್ವವಾಗಲ್ಲಿ ಸ್ವಾತಂತ್ರ್ಯವಾಗಲೀ ಇಲ್ಲವೇ ಇಲ್ಲ. ತನ್ನ ವೈಯಕ್ತಿಕ ಆಸೆ, ಆಕಾಂಕ್ಷೆಗಳು ಬದಿಗಿಟ್ಟು ತನ್ನ ಕುಟುಂಬಕ್ಕಾಗಿ, ಮಕ್ಕಳಿಗಾಗಿ ಬಾಳುವುದೇ ಆಕೆಯ ಹೆಣ್ತನದ ಧರ್ಮ ಎಂಬುದು ನಮ್ಮ ಸಂಸ್ಕೃತಿಯಲ್ಲಿನ ಗ್ರಹಿಕೆಯೇ ಆಗಿದೆ. ಹೀಗೆ ತಾಯ್ತನವನ್ನು ವಿಭಿನ್ನವಾಗಿ ಗ್ರಹಿಸಲಾಗಿದೆ.

ಜೀವನ ಬದಲಾದಂತೆ ಮನುಷ್ಯನ ಧೋರಣೆಗಳು ಬದಲಾಗುತ್ತಾ ಸಾಗುತ್ತದೆ. ಆಧುನಿಕತೆಯ ಪ್ರಭಾವದಿಂದ ಮಹಿಳಾ ಜಗತ್ತು ಬದಲಾಗುತ್ತಾ ನಡೆದಿದೆ. ಮಹಿಳೆಯರು ತಾವು ಯಾವುದಕ್ಕೂ ಕಡಿಮೆ ಇಲ್ಲಿ ಎಂಬುದನ್ನು ಸಾಧಿಸುತ್ತಾ ಮುನ್ನುಗ್ಗುತ್ತಿದ್ದಾರೆ. ಸಮಾನತೆ ತಮ್ಮ ಜನ್ಮಸಿದ್ಧ ಹಕ್ಕು ಎಂದು ಪ್ರತೀಪಾದಿಸುತ್ತಿದ್ದಾರೆ. ಹಿಂದೆ ಇದ್ದ ಹೆಣ್ಣು - ಗಂಡು ಎಂಬ ಭೇಧ ಸ್ವಲ್ಪ ಮಟ್ಟಿಗಾದರೂ ಬದಲಾದಂತೆ ತೋರುತ್ತಿದೆ. ಇದಕ್ಕೆ ಮುಖ್ಯ ಕಾರಣ ಭಾರತದ ಸಂವಿಧಾನದ ಮುಂದೆ ಎಲ್ಲರೂ ಸಮಾನರು ಎಂಬ ತಾತ್ವಿಕ ಧೋರಣೆ ಜೊತೆಗೆ ಕಾನೂನು ಶಾಸನಗಳ ರಚನೆಯಲ್ಲಿ ಹೆಣ್ಣು ಮಕ್ಕಳಿಗೆ ಸಮಾನ ಹಕ್ಕನ್ನು ಕಲ್ಪಿಸಿರುವುದು ಕಾನೂನು ಮತ್ತು ಹಲವು ಬಗೆಯ ಯೋಜನೆಗಳು ಸ್ತ್ರೀ ಪರವಾಗಿರುವುದು ಗಮನಿಸಬಹುದು. ಸರಕಾರ ಮತ್ತು ಕಾನೂನುಗಳಷ್ಟೇ ಅಲ್ಲ ಸರಕಾರೇತರ ಸಂಘ ಸಂಸ್ಥೆಗಳು ಸಹ ಮಹಿಳೆಯರ ಪರವಾಗಿ ನಿಂತು ಅವಳನ್ನು ಸಶಕ್ತಳಾಗಿ ಮಾಡುವಲ್ಲಿ ಕಾರ್ಯ ನಿರ್ವಹಿಸುತ್ತಿವೆ ಈ ಮೂಲಕ ನಮ್ಮ ತಾಯಂದಿರ ಸ್ಥಿತಿಯ ಹಾಗೂ ಅವಳ ಕುರಿತ ಪಾರಂಪರಿಕ ಗ್ರಹಿಕೆ ಬದಲಾಗಲು ಸಹಾಯ ಮಾಡುತ್ತಿವೆ.

ಸ್ವಾತಂತ್ರ್ಯದ ನಂತರ ಭಾರತವು ಜನವರಿ ಇಪ್ಪತ್ತಾರು ೧೯೫೦ ರಂದು ಜಾರಿಯಾದ ಸಂವಿಧಾನ ಹೆಣ್ಣು-ಗಂಡು ಎಂಬ ತಾರತಮ್ಯವಿಲ್ಲದೇ ಎಲ್ಲರಿಗೂ ಸಮಾನವಾಗಿ ನೋಡುತ್ತದೆ. ಎಲ್ಲರಿಗೂ ನ್ಯಾಯ ಒದಗಿಸುವ ಕಾನೂನುಗಳನ್ನು ಜಾರಿಗೆ ತಂದಿತ್ತು.ಸಂವಿಧಾನದ ೧೫(೩)ವಿಧಿಯನ್ವಯ ಮಹಿಳೆಯರು ಹಾಗೂ ಮಕ್ಕಳ ಕಲ್ಯಾಣ ದೃಷ್ಟಿಯಿಂದ ವಿಶೇಷ ಸವಲತ್ತುಗಳನ್ನು ಜಾರಿಗೆ ತಂದವು ಅದೇ ರೀತಿ

ಸಂವಿಧಾನದ ೧೬ನೇ ವಿಧಿಯ ಪ್ರಕಾರ ಎಲ್ಲ ಪ್ರಜೆಗಳಿಗೂ ಅಂದರೆ ಹೆಣ್ಣು-ಗಂಡು ಯಾರೇ ಇರಲಿ ಉದ್ಯೋಗದಲ್ಲಿ ಸಮಾನತೆಯನ್ನು ನೀಡಲಾಯಿತು ಜೊತೆಗೆ ಲಿಂಗ ತಾರತಮ್ಯ ಮಾಡದೇ ಸಮಾನ ವೇತನ ನೀಡಬೇಕು ಎಂಬ ನಿಲುವು ಹೊಂದಿದೆ.

ಸಂವಿಧಾನದ ೪೨ನೇ ವಿಧಿಯ ಪ್ರಕಾರ ಉದ್ಯೋಗಸ್ಥ ಮಹಿಳೆಗೆ ಹೆರಿಗೆಯ ಸೌಲಭ್ಯ ಒದಗಿಸಲಾಯಿತು. ಆಧುನಿಕ ಕಾಲದಲ್ಲಿ ಬ್ರಿಟೀಷರಿಂದ ಹಲವು ಶಾಸನಗಳು ರೂಪುಗೊಂಡವು ಅವುಸಹ ನಮ್ಮ ಮಹಿಳೆಯರಿಗೆ ದಾರಿ ದೀಪವಾದವು. ಮುಖ್ಯವಾಗಿ ತಾಯಂದಿರಿಗೆ ಅನುಕೂಲವಾದ ಕಾನೂನುಗಳೆಂದರೆ . ಹಿಂದೂ ವಿಧವಾ ಪುನರ್‌ವಿವಾಹ ಕಾಯಿದೆ ಇದು ೧೮೫೬ರಲ್ಲಿ ಜಾರಿಗೆ ಬಂದಿತು. ಭಾರತೀಯ ವಿವಾಹ ವಿಚ್ಛೇದ ಕಾಯಿದೆ ೧೮೬೨ ರಲ್ಲಿ ಜಾರಿಗೆ ಬಂದಿತು ಹಾಗೆಯೇ ೧೯೨೯ ರಲ್ಲಿ ಬಾಲ್ಯವಿವಾಹ ನಿಷೇಧ ಕಾಯಿದೆ ಜಾರಿಗೆ ಬಂದಿತು.ಜೋತೆಗೆ ೧೯೬೧ ರಲ್ಲಿ ಪ್ರಸೂತಿಕಾ ಸೌಲಭ್ಯ ಕಾಯಿದೆ ಬಂದಿತು. ೧೯೬೧ ರಲ್ಲಿ ವೈದ್ಯಕೀಯ ಗರ್ಭ ನಿವಾರಣಾ ಕಾಯಿದೆ ೧೯೬೧ ರಲ್ಲಿ ಪ್ರಸವಪೂರ್ವ ಲಿಂಗ ಪರೀಕ್ಷೆಗಳ ಕಾಯಿದೆ ೧೯೯೪ ರಲ್ಲಿ , ಕುಟುಂಬ ನ್ಯಾಯಲಯ ಕಾನೂನು ೧೯೮೪ ರಲ್ಲಿ, ರಾಷ್ಟ್ರೀಯ ಮಹಿಳಾ ಆಯೋಗ ಕಾಯಿದೆ ೧೯೯೦ ರಲ್ಲಿ ಹೀಗೆ ಹಲವು ಕಾಯಿದೆಗಳು ನಮ್ಮ ತಾಯಂದಿರ ಹಿತ ರಕ್ಷಣೆಗಾಗಿ ರೂಪುಗೊಂಡದ್ದು ಮುಖ್ಯವಾಗಿದೆ.

**ತಾಯಂದಿರಿಗಾಗಿ ಸರಕಾರದ ಯೋಜನೆಗಳು ಮುಖ್ಯವಾಗಿ ಕೆಳಗಿನಂತಿವೆ.**

1. ಮಹಿಳಾ ಅಧ್ಯಯನ ಕೇಂದ್ರಗಳು ಸ್ಥಾಪನೆ ಮಾಡುವುದರ ಮೂಲಕ ನಮ್ಮ ತಾಯಂದಿರ ಸಮಸ್ಯೆಗಳನ್ನು ಪರಿಹಾರ ಒದಗಿಸಲು ಪ್ರಯತ್ನಿಸಲಾಗುತ್ತಿದೆ.
2. ಮಹಿಳಾ ಆರೋಗ್ಯ ಸುಧಾರಣೆಗಾಗಿ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕೇಂದ್ರ ಸರಕಾರದ ಆರೋಗ್ಯ ಸೇವಾ ಯೋಜನೆ, ಗ್ರಾಮೀಣ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಕುಟುಂಬ ಕಲ್ಯಾಣ ಇಲಾಖೆಗಳು ಸ್ಥಾಪನೆ ಮಾಡಲಾಯಿತು
3. ತಾಯಿ ಮತ್ತು ಶಿಶು ಮರಣ ಪ್ರಮಾಣ ಕಡಿಮೆ ಮಾಡುವ ಉದ್ದೇಶದಿಂದ ಜನನಿ ಸುರಕ್ಷಾ ಯೋಜನೆ ಜಾರಿಗೆ ತರಲಾಯಿತು.
4. ಗರ್ಭಿಣಿಯರ ಆರೈಕೆಗಾಗಿ ಪ್ರಸೂತಿ ಆರೈಕೆ ಯೋಜನೆಯಡಿ ತಾಯಂದಿರಿಗೆ ಸಕಾಲಿಕ ಆರೋಗ್ಯ ತಪಾಸಣೆ ಮತ್ತು ಪೌಷ್ಠಿಕಾಂಶ ಒದಗಿಸಲು ಹಣಕಾಸಿನ ನೆರವು ನೀಡುವ ಯೋಜನೆ ಜಾರಿಗೆ ತರಲಾಯಿತು.
5. ಸರಕಾರಿ ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸಿಕೊಳ್ಳುವ ಮುಖ್ಯವಾಗಿ ಬಡತನ ರೇಖೆಗಿಂತ ಕೆಳಗಿರುವ ತಾಯಂದಿರಿಗೆ ನೈರ್ಮಲ್ಯ ಸಾಮಗ್ರಿಗಳ ಆರೋಗ್ಯ ಕಿಟ್ಟ ನೀಡುವ ' ಮಡಿಲು ' ಯೋಜನೆ ಜಾರಿಯಲ್ಲಿದೆ.

6. ನಗರ ಪ್ರದೇಶದಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಗ್ರಾಮೀಣ ಪ್ರದೇಶದ ಜನತೆಗೆ ಪ್ರಸೂತಿ ಮತ್ತು ಮಕ್ಕಳ ತಜ್ಞರ ಸೇವೆಗಳ ಸೌಲಭ್ಯ ಒದಗಿಸಲು ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ 'ತಾಯಿ ಭಾಗ್ಯ' ಯೋಜನೆಯನ್ನು ಜಾರಿಗೊಳಿಸಲಾಗಿದೆ.
7. ತಾಯಿ ಮತ್ತು ಮಕ್ಕಳ ಆರೋಗ್ಯ ಸುಧಾರಣೆಗಾಗಿ 'ಜನನಿ ಶಿಶು ಸುರಕ್ಷಾ' ಯೋಜನೆ

   ಜಾರಿಗೆ ತರಲಾಗಿದೆ.
8. ಬಾಣಂತಿ ಮತ್ತು ಮಗುವಿಗೆ ಸುರಕ್ಷಿತವಾಗಿ ಮನೆಗೆ ತಲುಪಿಸಲು' ನಗು- ಮಗು 'ಕಾರ್ಯಕ್ರಮದಡಿ ಆಂಬುಲೆನ್ಸ ವಾಹನ ಸೇವೆಯನ್ನು ಜಾರಿಗೆ ತರಲಾಗಿದೆ.
9. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಪ್ರಸೂತಿ ಆರೈಕೆ ಮತ್ತು ಪೂರಕ ಪೌಷ್ಠಿಕ ಆಹಾರ ಯೋಜನೆಯಡಿ ಆರು ವರ್ಷದೊಳಗಿನ ಮಕ್ಕಳು ಮತ್ತು ಗರ್ಭಿಣಿಯರಿಗೆ ಬಾಣಂತಿಯರಿಗೆ ಪೂರಕ ಪೌಷ್ಠಿಕ ಆಹಾರ ಪೂರೈಕೆ ಮಾಡಲಾಗುತ್ತಿದೆ.

ತಾಯಂದಿರು ಅನುಭವಿಸುವ ಸಮಸ್ಯೆಗಳ ಪರಿಹಾರೋಪಾಯವಾಗಿ ಸರಕಾರ ಅಷ್ಟೇ ಅಲ್ಲ ಸರಕಾರೇತರ ಸಂಘ - ಸಂಸ್ಥೆಗಳು ಮುಂದೆ ಬಂದಿವೆ. ಮಹಿಳೆಯರಲ್ಲಿ ಜಾಗೃತಿ ಮೂಡಿಸಲು ಆ ನ್ಯಾಯ ಅಸಮಾನತೆಗಳನ್ನು ದೂರ ಮಾಡಲು ಸಹಾಯಕವಾಗಿವೆ. ಹಲವು ಮಹಿಳಾ ಸಂಘಟನೆಗಳು ಮಹಿಳಾ ಜಾಗೃತಿ ಸಂಸ್ಥೆಗಳು ಸ್ತ್ರೀಶಕ್ತಿಗಳು ಸ್ವ-ಸಹಾಯ ಗುಂಪುಗಳು ನಮ್ಮ ತಾಯಂದಿರ ಸಮಸ್ಯೆಗಳನ್ನು ಸಂಧರ್ಭದಲ್ಲಿ ತಾಯಂದಿರಿಗೆ ಕಾನೂನು ಮತ್ತು ಯೋಜನೆಗಳು ಸಹಕಾರಿಯಾಗಿವೆ.

ಆಧುನಿಕತೆಯ ಪರಿಣಾಮವಾಗಿ ಸಮಾನತೆಯ ತಾತ್ವಿಕ ನೆಲೆಗಟ್ಟಿನ ಮೇಲೆ ಇಂದು ಮಹಿಳೆಯರು ಹಲವು ಬಗೆಯ ಅವಕಾಶಗಳನ್ನು ಪಡೆದು ತಮ್ಮ ಬದುಕನ್ನು ಹಸನುಗೊಳಿಸಿಕೊಳ್ಳುತ್ತಿದ್ದಾರೆ. ಅದಕ್ಕೆ ಪೂರಕವಾಗಿ ನಮ್ಮ ದೇಶದ ಸಂವಿಧಾನ, ಕಾನೂನು ಶಾಸನಗಳು, ಸರಕಾರದ ಯೋಜನೆಗಳು ಕಾರ್ಯ ನಿರ್ವಹಿಸುತ್ತಿರುವುದು ಸಮಾರ್ಧಾಕರ ಸಂಗತಿ. ಆದರೆ ಇದರಿಂದ ಮಾತ್ರ ನಮ್ಮ ತಾಯಂದಿರ ಸಮಸ್ಯೆ ಮತ್ತು ಸವಾಲುಗಳು ಬದಲಾಗುತ್ತವೆಂದು ಹೇಳಲಾಗದು. ಇಲ್ಲಿ ಮಹಿಳೆಯ ಅಥವಾ ತಾಯಂದಿರ ಸ್ಥಿತಿ-ಗತಿಗಳು ಅಭಿವೃದ್ಧಿಯಾಗಬೇಕಾದರೆ ಮೊದಲು ಸಮಾಜದ ಪ್ರತಿಯೊಬ್ಬನ ಮಾನಸಿಕತೆಯಲ್ಲಿ ನೆಲೆಯೂರಿದ ಪುರುಷಪ್ರಧಾನ ಗ್ರಹಿಕೆಗಳು ನಾಶವಾಗಬೇಕು. ಶಿಕ್ಷಣ ಆರ್ಥಿಕ ಸದೃಢತೆ, ಸಾರ್ವಜನಿಕ ವಲಯದಲ್ಲಿ ಪಾಲ್ಗೊಳ್ಳುವಿಕೆ, ವೈಜ್ಞಾನಿಕ ಮನೋಭಾವ, ಬೌದ್ಧಿಕ ಔನ್ನತ್ಯೆ ಹೀಗೆ ಹಲವು ಆಯಾಮಗಳಲ್ಲಿ ಆಕೆಯ ಬೆಳವಣಿಗೆ ಆಗಬೇಕು. ಇಂದು ಮಹಿಳೆಯ ಅಭಿವೃದ್ಧಿಗಾಗಿ ಅನೇಕ ನಿಗಮಗಳು, ಮಹಿಳಾ ಆಯೋಗಗಳು, ಸಂಘ-ಸಂಸ್ಥೆಯು, ವಿಶ್ವವಿದ್ಯಾಲಯಗಳು, ಸಂಘಟನೆಗಳು ಶ್ರಮಿಸುತ್ತಿವೆ. ಅವು ಮಹಿಳೆಯ ನೆಲೆಯಿಂದಲೂ ತಾಯ್ತನದ ನೆಲೆಯಿಂದಲೂ ಪೂರಕವಾಗಿ ಕಾರ್ಯನಿರ್ವಹಿಸಬಲ್ಲವುಗಳಾಗಿವೆ.

- **ತಾಯಂದಿರ ಮರಣ ಸಮಸ್ಯೆ**

ಯಾವುದೇ ದೇಶದ ಅಭಿವೃದ್ಧಿಗೆ ಮುಖ್ಯವಾಗಿರುವುದು ಅಲ್ಲಿನ ಮಾನವ ಸಂಪತ್ತು. ಆಯಾದೇಶದಲ್ಲಿ ಸ್ತ್ರೀ ಹಾಗೂ ಪುರುಷರು ಆರೋಗ್ಯ ಪೂರ್ಣರಾಗಿದ್ದರೆ ಆ ದೇಶ ಅಭಿವೃದ್ಧಿ ಹೊಂದಲು ಸಾಧ್ಯ. ಹೀಗಾಗಿ ಆರೋಗ್ಯಕರ ಮಗುವಿನ ಜನನಕ್ಕೆ ಕೋಡುವ ಪ್ರಾಮುಖ್ಯತೆ, ಆರೋಗ್ಯಕರ ತಾಯಿಗೂ ಕೊಡುವುದು ಮುಖ್ಯವಾಗಿದೆ. ತಾಯಿಯಾಗುವುದೆಂದರೆ ಮರುಜನ್ಮ ಪಡೆದಂತೆ ಎಂಬ ಜನಪದರ ನಂಬುಗೆ ನಿಜವಾಗಿದೆ. ಸಮಾಜದ ಹಿತ ದೃಷ್ಠಿಯಿಂದಲೂ ತಾಯಿ ಆರೋಗ್ಯವಾಗಿರುವುದು ಮಹತ್ವದ್ದಾಗಿದೆ. ಮೇಲೆ ಹೇಳಿದಂತೆ ತಾಯಿಯ ಆರೋಗ್ಯ ಕಾಪಾಡಲು ಕುಟುಂಬ ಸರಕಾರ, ಸರಕಾರೇತರ ಯೋಜನೆಗಳು ಪ್ರಯತ್ನ ಪಡುತ್ತಿವೆ. ಆದರೆ ದುರದುಷ್ಟವಶಾತ ದಿನ ನಿತ್ಯ ಹಲವು ತಾಯಂದಿರು ಹೆರಿಗೆ ಸಂಧರ್ಭದಲ್ಲಿ ಮರಣವನ್ನಪ್ಪುತ್ತಿದ್ದಾರೆ. ಅದಕ್ಕೆ ಹತ್ತು ಹಲವು ಕಾರಣಗಳಿವೆ. ತಾಯಂದಿರ ಮರಣ ಪ್ರಮಾಣದ ಕುರಿತು ಹೇಳಬೇಕೆಂದರೆ ಬೇರೆ ಬೇರೆ ದೇಶಗಳಲ್ಲಿ ಮರಣ ಪ್ರಮಾಣ ವಿಭಿನ್ನವಾಗಿ ಕಂಡುಬರುತ್ತದೆ.

ಏಕೆಂದರೆ ಆಯಾದೇಶದ ಪರಿಸರ ಆರ್ಥಿಕ ಅಂಶ ಸಾಮಾಜಿಕ ಪರಿಸರ, ವಯಸ್ಸು ಮತ್ತು ಅಂಗಭೇಧ, ಕಾರಣವಾಗಿ ತಾಯಂದಿರ ಮರಣದಲ್ಲಿ ವ್ಯತ್ಯಾಸ ಕಾಣಬಹುದಾಗಿದೆ. ನಮ್ಮ ಸಮಾಜದಲ್ಲಿ ತಾಯಂದಿರ ಮರಣ ಒಂದು ಗಂಭೀರ ಸಮಸ್ಯೆಯಾಗಿದೆ. ಆಧುನಿಕ ಜಗತ್ತು ವೈದ್ಯಕೀಯ ಕ್ಷೇತ್ರದಲ್ಲಿ ಇಷ್ಟೋಂದು ಮುಂದುವರೆದರು ಸಹ ತಾಯಂದಿರ ಮರಣ ಪ್ರಮಾಣ ಹೆಚ್ಚಾಗಿಯೇ ಇದೆ."ಭಾರತದಲ್ಲಿ ಸಂತಾನೋತ್ಪತ್ತಿ ವಯಸ್ಸಿನಲ್ಲಿರುವ ಸ್ತ್ರೀಯರ ಮರಣ ಸಂಖ್ಯೆ ಹೆಚ್ಚು. ಇದು ಈ ವಯಸ್ಸಿನ ಮೊದಲನೆಯ ಭಾಗದಲ್ಲಿ ಅದರಲ್ಲೂ ಹೆಚ್ಚಾಗಿ ಮೊದಲನೆಯ ಹೆರಿಗೆಯ ಕಾಲದಲ್ಲಿ ಹೆಚ್ಚು ೧೦ ವರ್ಷ ವಯಸ್ಸಿನವರಲ್ಲಿ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳ ಮರಣ ಸಂಭವ ಕಡಿಮೆ. ೧೦ ವರ್ಷಗಳ ನಂತರ ೧೦ ರಿಂದ ೨೦ ಮತ್ತು ೨೦ ರಿಂದ ೩೦ ವರ್ಷದಲ್ಲಿ ಪುರುಷರ ಮರಣಕ್ಕಿಂತ ಸ್ತ್ರೀಯರ ಮರಣ ಹೆಚ್ಚು ಭಾರತದಲ್ಲಿ ಸುಮಾರು ಶೇ. ೨೫ ಭಾಗ ಹೆಣ್ಣು ಮಕ್ಕಳ ಹುಟ್ಟದ ಒಂದು ವರ್ಷದೊಳಗೆ ಮರಣ ಹೊಂದುತ್ತಿದ್ದು, ಶೇ ೫೦ ಭಾಗ ೨೦ ವರ್ಷದೊಳಗೆ ಮರಣ ಹೊಂದುತ್ತಾರೆ. ಶೇ ೨೫ ಭಾಗ ಮಹಿಳೆಯರು ೪೫ ವರ್ಷವನ್ನು ದಾಟುತ್ತಾರೆ ಪ್ರತಿ ೧೦೦೦ ಹೆರಿಗೆಗಳಲ್ಲಿ ೨೪.೫ ಮಾತ್ರ ಮರಣವಾಗುತ್ತದೆಂದು ಡಾ.ಜಾನ್ ಮೇಗಾ ಅಂದಾಜು ಮಾಡಿದ್ದಾರೆ"[೨೫] ಹೀಗಿರುವಾಗ ನಮ್ಮ ದೇಶದಲ್ಲಿ ತಾಯಂದಿರ ಮರಣ ಸಮಸ್ಯೆ ಎಷ್ಟು ಚಿಂತಾಜನಕವಾಗಿದೆ ಎಂಬುದನ್ನು ಅಂದಾಜಿಸಬಹುದು. ಆದರೆ ಬರುಬರುತ್ತಾ ಮರಣ ಪ್ರಮಾಣದಲ್ಲಿ ಸಾಕಷ್ಟು ಇಳಿಕೆ ಕಂಡು ಬಂದಿರುವುದನ್ನು ಸೂಚಿಸುತ್ತಾ ಸಾವಿರಕ್ಕೆ ಇಪ್ಪತ್ತರಿಂದ ಹತ್ತಕ್ಕೆ ಇಳಿದಿದೆ ಹಾಗೂ ಇತರ ದೇಶಗಳಾದ ಆಸ್ಟ್ರೇಲಿಯಾ, ಜರ್ಮನಿ, ಅಮೇರಿಕಾ, ಇಂಗ್ಲೇಂಡ ಜಪಾನ ಮತ್ತು ಫ್ರಾನ್ಸ ದೇಶಗಳಿಗೆ ಹೋಲಿಸಿದರೆ ಹೆಚ್ಚೆನಿಸುತ್ತದೆ ಎನ್ನುತ್ತಾರೆ.

ತಾಯಂದಿರ ಮರಣದ ಪ್ರಮಾಣವನ್ನು ಗಮನಿಸಿದರೆ ಭಾರತದ ವಿವಿಧ ರಾಜ್ಯಗಳಲ್ಲಿ ಬೇರೆ ಬೇರೆಯಾಗಿ ಕಂಡುಬರುತ್ತದೆ. ರಾಜ್ಯದಿಂದ ರಾಜ್ಯಕ್ಕೆ ಈ ಪ್ರಮಾಣ ಭಿನ್ನವಾಗಿರುವುದನ್ನು ಗಮನಿಸಬಹುದು. "ಮಾತೃ ಮರಣ ಪ್ರಮಾಣ ರಾಜ್ಯದಿಂದ ರಾಜ್ಯಕ್ಕೆ ವ್ಯತ್ಯಾಸ ಹೊಂದುತ್ತದೆ. ಅಸ್ಸಾಮಿನಲ್ಲಿ ೯.೯ ಒರಿಸ್ಸಾದಲ್ಲಿ

೫.೧. ಕರ್ನಾಟಕದಲ್ಲಿ ೫.೦, ಮಹಾರಾಷ್ಟ್ರದಲ್ಲಿ ೪.೫, ಪಶ್ಚಿಮ ಬಂಗಾಳದಲ್ಲಿ ೩.೯ ಮತ್ತು ಪಂಜಾಬಿನಲ್ಲಿ ೦.೮ ಇದೆ. ಅತಿ ಹೆಚ್ಚಿನ ಮಾತೃ ಮರಣವು ಅಸ್ಸಾಮಿನಲ್ಲೂ (೯.೯) ಅತಿ ಕಡಿಮೆ ಮಾತೃ ಮರಣವು ಪಂಜಾಬಿನಲ್ಲಿ (೦.೮) ಇದೆ."[೩೯] ಹೀಗೆ ವಿಭಿನ್ನವಾಗಿದೆ. ಇಗಾಗಲೇ ಹೇಳಿದಂತೆ ತಾಯಂದಿರ ಅಕಾಲಿಕ ಮರಣಕ್ಕೆ ಹಲವು ಕಾರಣಗಳಿವೆ. ಅವುಗಳ ಗಂಭೀರ ಚರ್ಚೆ ಆಗಬೇಕಿದೆ. ಇಲ್ಲಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ಕಾರಣಗಳು ಮುಖ್ಯವಾಗಿವೆ.

ನಮ್ಮ ದೇಶದಲ್ಲಿ ಬಾಲ್ಯವಿವಾಹ ಪದ್ಧತಿ ಜಾರಿಯಲ್ಲಿದೆ. ಅತಿಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುವುದರಿಂದ ಹೆರಿಗೆ ಸಂದರ್ಭದಲ್ಲಿ ಸಾವನ್ನಪ್ಪುವ ಸಂಧರ್ಭ ಹೆಚ್ಚಾಗುತ್ತದೆ. ಇದಲ್ಲದೆ ಗಂಡು ಮಗುವಿನ ಮಹತ್ವ ಅತಿ ಸಂತಾನ ಪಡೆಯಬೇಕು ಎಂಬ ಪ್ರವೃತ್ತಿ ಕಾರಣವಾಗಿದೆ. ಅದರೊಂದಿಗೆ ಗಂಡಿನ ಆರೋಗ್ಯಕ್ಕೆ ಕೊಟ್ಟ ಮಹತ್ವ ಹೆಣ್ಣಿನ ಆರೋಗ್ಯಕ್ಕೆ ನಮ್ಮ ಸಮಾಜ ಕೊಡುವುದಿಲ್ಲ. ಲಿಂಗ ತಾರತಮ್ಯ ತಾಯಂದಿರ ಮರಣ ಪ್ರಮಾಣದ ಹೆಚ್ಚಳಕ್ಕೆ ಕಾರಣವಾಗಿದೆ. ವರ್ಗತಾರತಮ್ಯದಿಂದಲ್ಲೂ ತಾಯಿಂದಿರು ಬಲಿಪಶುಯಾಗಿದ್ದಾರೆ. ಬಡತನದಲ್ಲಿ ಬೆಯುತ್ತಿರುವ ಹೆಣ್ಣುಮಕ್ಕಳು ದಿನನಿತ್ಯ ಕೂಲಿಮಾಡಿ ಸಂಸಾರ ತೂಗಿಸುವುದು ಅನಿವಾರ್ಯ ದಿನಗೂಲಿಗೆ ಹೋಗುವ ತಾಯಂದಿರು ತಮ್ಮ ಆರೋಗ್ಯದ ಕಡೆಗೆ ಲಕ್ಷ್ಯವಹಿಸದ ಅವಿರತವಾಗಿ ದುಡಿಯುತ್ತಾರೆ. ಗರ್ಭಿಣಿಯರು ಬಾಣಂತಿಯರು ಕೂಲಿಕೆಲಸಕ್ಕೆ ಹೋದಾಗ ಕೆಲಸದ ಭಾರದಿಂದ ತತ್ತರಿಸಿಹೋಗುತ್ತಾರೆ. ಈ ಕಾರಣಕ್ಕಾಗಿ ತಾಯಿಂದಿರ ಮರಣ ಪ್ರಮಾಣದಲ್ಲಿ ಹೆಚ್ಚಾಗುವ ಸಾಧ್ಯತೆ ಇರುತ್ತದೆ. ನಮ್ಮ ಸಮಾಜದಲ್ಲಿ ಸರಕಾರ ಹಾಗೂ ಸರಕಾರೇತರ ಯೋಜನೆಗಳು ಸಾಕಷ್ಟಿದ್ದರು ಅವು ಅವಶ್ಯಕತೆ ಇರುವ ಜನಸಾಮಾನ್ಯರಿಗೆ ತಲುಪದೆ ಪೋಲಾಗುತ್ತಿದೆ. ಅದನ್ನು ತಡೆಗಟ್ಟಿದರೆ ತಾಯಂದಿರ ಮರಣ ಪ್ರಮಾಣ ಇನ್ನೂ ಕಡಿಮೆಗೊಳಿಸಬಹುದು ಇದರಲ್ಲಿ ಎರಡು ಮಾತಿಲ್ಲ.

<u>ಟಿಪ್ಪಣಿಗಳು</u>

1 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' ಲೇ - ಡಾ. ಎಂ. ಉಷಾ ಪು-೧೫೬

2 'ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು' ಲೇ - ರೂಪಹಾಸನ ಪು-೧೫

3 'ಮಹಿಳಾ ಆರೋಗ್ಯ ಒಂದು ಮರುಚಿಂತನೆ' ಲೇ - ಡಾ. ಕೆ. ಸರೋಜಾ ಪು-೧೦

4 'ಮಹಿಳೆ ಮತ್ತು ಆರೋಗ್ಯ' ಲೇ ಡಾ. ಕೆ. ಸರೋಜ ಪು-೪

5 'ಮಹಿಳೆ ಮತ್ತು ಆರೋಗ್ಯ' ಲೇ ಡಾ. ಕೆ. ಸರೋಜ ಪು-೬

6 'ಇಂದಿನ ಮಹಿಳೆಯ ಮನಸಿಕ ಸವಾಲುಗಳು' -ಲೇ - ಕೆ .ಎಸ. ಪವಿತ್ರ ಪು-೧೩

7 'ಸ್ತ್ರೀವಾದಿ ಮನೋವಿಜ್ಞಾನ' ಲೇ - ಡಾ. ಇಂದಿರಾ ಜೈಪ್ರಕಾಶ ಪು-೮೨

8 'ಸ್ತ್ರೀವಾದಿ ಮನೋವಿಜ್ಞಾನ' ಲೇ - ಡಾ. ಇಂದಿರಾ ಜೈಪ್ರಕಾಶ ಪು-೧೧೪

9 'ಸ್ತ್ರೀವಾದಿ ಮನೋವಿಜ್ಞಾನ' ಲೇ - ಡಾ. ಇಂದಿರಾ ಜೈಪ್ರಕಾಶ ಪು-೧೧೫

10 'ವಿವಾಹ ಹುಟ್ಟು ಮತ್ತು ಪೂರ್ವೋತ್ತರ ತಾಪಿ ಧರ್ಮರಾವ' ಪು -೩೦

11 'ಜಾಗತೀಕರಣ ಮತ್ತು ಮಹಿಳೆ ಎಸ್ . ವಿ ಪ್ರಭಾವತಿ' ಪು-೫೬

12 'ಮಹಿಳೆ ಮತ್ತು ಅಧುನಿಕ ಸವಾಲುಗಳು ' ಲೇ - ರೂಪ ಹಾಸನ ಪು-೨೬

13 'ಮಹಿಳಾ ಬದುಕು ' ಲೇ - ಡಾ ಚಂದ್ರಕಲಾ ಬಿದರಿ ಪು-೮೪

14 'ಸಾಹಿತ್ಯ ಸೌರಭ ' ಸಂ ಯಶೋಧಮ್ಮ ಸಿದ್ದಬಟ್ಟೆ ಪು-೮೦

15 'ಮಹಿಳೆ ಶೋಷಣೆ ಸವಾಲುಗಳು ' - ಸಂ ಡಾ. ವಿಜಯಶ್ರೀ ಸಬರದ ಪು-೬೯

16 'ಮಹಿಳೆ ಮತ್ತು ಧರ್ಮ ' ಲೇ - ಡಾ. ಶಿವಾನಂದ ಎಸ . ವಿರಕ್ತಮಠ ಪು-೩೩

17 'ವಿಜ್ಞಾನೇಶ್ವರ ಮಿತಾಕ್ಷರ ' ಲೇ - ಶ್ರೀನಿವಾಸ ಸಿರನೂರಕರ ಪು - ೫

18 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ ' ಲೇ - ಡಾ . ನಿರುಪಮಾ ಪು-೨

19 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ ' ಲೇ - ಡಾ . ನಿರುಪಮಾ ಪು-೬೩

20 'ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ ' ಲೇ - ಡಾ . ನಿರುಪಮಾ ಪು-೬೪

21 'ಮಹಿಳೆ ಮತ್ತು ಧರ್ಮ' ಲೇ- ಡಾ. ಶಿವಾನಂದ ಎಸ. ವಿರಕ್ತಮಠ ಪು-೩೩

22 'ವಿಜ್ಞಾನೇಶ್ವರ ಮಿತಾಕ್ಷರ ' ಲೇ - ಶ್ರೀನಿವಾಸ ಸಿರನೂರಕರ ಪು-೪೮

23 'ವಿಜ್ಞಾನೇಶ್ವರ ಮಿತಾಕ್ಷರ ' ಲೇ - ಶ್ರೀನಿವಾಸ ಸಿರನೂರಕರ ಪು-೫೩

24 'ವಿಜ್ಞಾನೇಶ್ವರ ಮಿತಾಕ್ಷರ ' ಲೇ - ಶ್ರೀನಿವಾಸ ಸಿರನೂರಕರ ಪು-೫೫

25 'ಜನಸಂಖ್ಯಾ ಅಧ್ಯಯನ' ಲೇ-ಎಂ.ನಾರಾಯಣ, ವಿಶ್ವ. ಪು-೧೫೩

26 'ಜನಸಂಖ್ಯಾ ಅಧ್ಯಯನ' ಲೇ-ಎಂ.ನಾರಾಯಣ, ವಿಶ್ವ. ಪು-೧೫೪

# ಅಧ್ಯಾಯ:-7
# ಸಮಾರೋಪ

ತಾಯ್ತನದ ವಿಭಿನ್ನ ಗ್ರಹಿಕೆಗಳೆಂಬ ಈ ಅಧ್ಯಯನವು ಜನಪದ ಸಾಹಿತ್ಯದ ನೆಲೆಯಲ್ಲಿ ತಾಯ್ತನವನ್ನು ಗ್ರಹಿಸುವ ಒಂದು ಪ್ರಯತ್ನವಾಗಿದೆ. ಜಾನಪದ ಸಾಹಿತ್ಯದ ಹರವು ಬಹುದೊಡ್ಡದು ಅದಕ್ಕಾಗಿ ಇಲ್ಲಿ ಜಾನಪದ ಸಾಹಿತ್ಯದ ಪ್ರಮುಖ ಪ್ರಕಾರಗಳಲ್ಲಿ ಗೀತೆ, ಕಥನಗೀತೆ ಮತ್ತು ಗಾದೆಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಅದರೊಂದಿಗೆ ನಮ್ಮ ಒಟ್ಟು ಬದುಕು ಜಾನಪದ ಸಂಸ್ಕೃತಿಯೆ ಆಗಿರುವುದರಿಂದ ನಂಬಿಕೆ ಆಚರಣೆಗಳನ್ನು ಸಹ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶತಮಾನಗಳಿಂದಲೂ ಮಹಿಳೆಯ ಕುರಿತ ಗಂಭೀರವಾದ ಅಧ್ಯಯನಗಳು ನಡೆಯುತ್ತಿವೆ. ಮಹಿಳೆಯ ಬದುಕಿನ ಬಹುಮುಖ್ಯವಾದ ಘಟ್ಟವೆಂದರೆ 'ತಾಯ್ತನ'ಇದನ್ನೆ ನನ್ನ ಸಂಶೋಧನೆಯ ಮುಖ್ಯ ವಿಷಯವಾಗಿಟ್ಟುಕೊಂಡು ವಿಶ್ಲೇಶಣೆ ಕೈಗೊಂಡಿದ್ದೇನೆ. ತಾಯ್ತನವೆಂಬ ವಿಷಯ ಬಹು ವ್ಯಾಪಕವೂ ವಿಶಾಲವೂ ಆಗಿದ್ದರಿಂದ ಅದನ್ನು ಸಾಮಾನ್ಯಕರೀಸುವ ಹಿನ್ನೆಲೆಯಲ್ಲಿ ತಾಯ್ತನವನ್ನು ಅರ್ಥೈಯಿಸಲಾಗಿದೆ.

ಇತಿಹಾಸದುದ್ದಕ್ಕೂ ಮಹಿಳೆಗೆ ಕೌಟುಂಬಿಕ ನೆಲೆಯಲ್ಲಿ ಹಾಗೂ ಸಾರ್ವಜನಿಕ ನೆಲೆಯಲ್ಲಿ ಪ್ರಾಮುಖ್ಯತೆ ನೀಡುವುದನ್ನು ನಿರಾಕರಿಸಲಾಗಿತ್ತು. ಇದಕ್ಕೆ ಹಲವಾರು ಕಾರಣಗಳನ್ನು ಕೊಡಬಹುದು ಅವುಗಳೆಂದರೆ ಪುರುಷ ಪ್ರಧಾನತೆ, ಬಡತನ, ಅನಕ್ಷರತೆ, ಸಾಮಾಜಿಕವಾಗಿ ಹಿಂದುಳಿಯುವಿಕೆ, ಲಿಂಗ ತಾರತಮ್ಯ. ಅದಕ್ಕೆ ಈ ಬಗೆಯ ತಾರತಮ್ಯದಿಂದ ಬಿಡಿಸಿಕೊಳ್ಳಲು ಇಪ್ಪತ್ತನೇ ಶತಮಾನದಲ್ಲಿ ಗಂಭೀರವಾದ ಚಿಂತನೆಗಳು ಪ್ರಾರಂಭವಾದವು. ಈ ಚಿಂತನೆಗಳು ಸಂಶೋಧಕರಿಗೆ ಹೊಸ ಹೊಸ ಕ್ಷೇತ್ರಗಳು ಒದಗಿಸಿಕೊಟ್ಟವು. ಮಹಿಳೆಯ ವಿವಿಧ ರೂಪಗಳು ಅಂದರೆ ಅಕ್ಕ-ತಂಗಿ, ಅತ್ತೆ-ಸೊಸೆ, ಅತ್ತಿಗೆ-ನಾದಿನಿ, ಅಜ್ಜಿ-ಮೊಮ್ಮಗಳು ಮುಖ್ಯವಾಗಿ ತಾಯಿಯಂಥಹ ರೂಪವನ್ನು ಬೇರೆ ಬೇರೆ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನಗಳು ನಡೆದಿವೆ. ಕೌಟುಂಬಿಕವಾಗಿ ಈ ಅಧ್ಯಯನ ಮುಂದುವರೆದರೂ ಮತ್ತೆ ಸಾರ್ವಜನಿಕ ವಲಯದಲ್ಲಿ ಮಹಿಳೆಗೆ ಗುರುತಿಸಲ್ಪಡುವ ಆಕೆಯ ಪ್ರತಿನಿಧಿತ್ವವನ್ನು ಪ್ರಶ್ನಿಸುವ ಕಾರ್ಯ ನಡೆದೆ ಇವೆ.

ತಾಯ್ತನದ ವಿಭಿನ್ನ ಗ್ರಹಿಕೆ ಎಂಬ ಈ ನನ್ನ ಅಧ್ಯಯನ ಮಹಿಳೆಯ ಬದುಕಿ ವಿವಿಧ ಸಂಗತಿಗಳನ್ನು ವಿಶ್ಲೇಷಿಸುತ್ತ ಸಾಗಿದೆ. ಅದರೊಂದಿಗೆ ತಾಯ್ತನದ ಕುರಿತಾದ ಗೀತೆ, ಕಥನಗೀತೆ ಮತ್ತು ಗಾದೆಗಳಲ್ಲಿ ಅಡಗಿರುವ ತಾಯ್ತನದ ಗ್ರಹಿಕೆಯನ್ನು ವಿಭಿನ್ನ ನೆಲೆಯಲ್ಲಿ ಕಟ್ಟಿಕೊಡಲಾಗಿದೆ. ಈ ನನ್ನ ಅಧ್ಯಯ ತಾಯ್ತನವನ್ನು ಜಾನಪದದ ನೆಲೆಯಲ್ಲಿ ಶೋಧಿಸುವ ಒಂದು ಚಿಕ್ಕ ಪ್ರಯತ್ನವಾಗಿದೆ. ತಾಯ್ತನದ ಮೂಲಕ ಮಹಿಳೆಯ ಬದುಕಿನ ವಿವಿಧ ಚಿತ್ರಣವನ್ನು ಕೊಡಲಾಗಿದೆ.

## • ಅಧ್ಯಯನದ ಫಲಿತಗಳು

ಜನಪದದ ಕೆಲ ಸಾಹಿತ್ಯ ಪ್ರಕಾರವನ್ನೆ ಅಧ್ಯಯನಕ್ಕೆ ಆಯ್ದುಕೊಂಡರೂ ಅದರೊಂದಿಗೆ ಆಧುನಿಕರಣಕ್ಕೆ ಒಳಗಾಗಿ ಮಹಿಳೆ ಹೇಗೆ ಬದಲಾದ ಜಗತ್ತನ್ನು ಎದುರಿಸುತ್ತಿದ್ದಾಳೆ. ಮುಖ್ಯವಾಗಿ ತಾಯಿಯಾಗಿ ಆಕೆ ಯಾವ ಬಗೆಯ ತೊಳಲಾಟಕ್ಕೆ ಗುರಿಯಾಗಿದ್ದಾಳೆಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಜಾನಪದವು ನಮ್ಮ ಪರಂಪರೆಯನ್ನು ಪ್ರತಿನಿಧಿಸಿದರೆ ಆಧುನಿಕ ಸಂದರ್ಭದಲ್ಲಿ ಅವು ಹೇಗೆ ತಾಯಿಯ ಪರಿಕಲ್ಪನೆಯ ಮೇಲೆ ಗಾಢ ಪರಿಣಾಮ ಬೀರಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ತಾಯ್ತನದ ಕುರಿತಂತೆ ಆಕೆಯ ಬದುಕನ್ನು ಎಳೆ ಎಳೆಯಾಗಿ ಬಿಚ್ಚಿ ನೋಡಲಾಗಿದೆ. ಅಧ್ಯಯನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಮಾತೃಪ್ರಧಾನತೆಯಲ್ಲಿ ಇರುವ ತಾಯಿಯ ಸ್ವಾತಂತ್ರ್ಯ ಮತ್ತು ಹಕ್ಕುಗಳು ಹೇಗೆ ಪಿತೃಪ್ರಧಾನ ಸಮಾಜಕ್ಕೆ ಬರುವ ಹೊತ್ತಿಗೆ ಮೊಟಕುಗೊಂಡಿವೆ ಎಂಬುದು ಇಲ್ಲಿ ಗುರುತಿಸಲಾಗಿದೆ. ಅಧಿನಳಾಗಿ ಬದುಕುವ ಮಹಿಳೆಗೆ ತಾಯ್ತನವೂ ಹೇಗೆ ಪೂರಕವಾಗಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಪುರುಷ ಪ್ರಧಾನತೆಯ ಗ್ರಹಿಕೆಗಳು ತಾಯ್ತನವನ್ನು ಕಾರಣವಾಗಿ ಟ್ಟುಕೊಂಡು ಶೋಷಿಸಲಾಗಿದೆ ಎಂಬುದು ಜನಪದ ಸಾಹಿತ್ಯ ನೆಲೆಯಲ್ಲಿ ನೋಡಲಾಗಿದೆ.

ಕೌಟುಂಬಿಕ ಹಾಗೂ ಸಾಮಾಜಿಕ ನೆಲೆಯಲ್ಲಿ ತಾಯಿ ಹಾಗೂ ತಾಯ್ತನಕ್ಕೆ ಬಹು ಮಹತ್ವವಿದೆ. ಹೆಣ್ಣು ಹೆಣ್ತನ, ತಾಯಿ ತಾಯ್ತನದ ಮೂಲಕ ನಮ್ಮ ಪರಂಪರೆಯಲ್ಲಿ ಆಕೆಗೆ ವಿಶೇಷ ಸ್ಥಾನವಿದೆ ಎಂಬುದರ ಜೊತೆಗೆ ಈ ಮೂಲಕ ಹೆಣ್ಣಿನ ಶೋಷಣೆಯು ನಡೆದಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ. ತಾಯಿಯಾದವಳು ಸಮಾಜದ ಮೂಲ ಘಟಕವಾಗಿರುವ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವವಳಾಗಿ ಗಂಡ, ಮಕ್ಕಳು ಮನೆಯನ್ನೊಳಗೊಂಡು ಸಂಸಾರದ ನೊಗ ಹೊತ್ತವಳು ತಾಯಿ. ಹೀಗೆ ತಾಯಿಯ ಕಾರ್ಯಕ್ಷೇತ್ರ ಬಹುವಿಶಾಲವೂ ವ್ಯಾಪಕವೂ ಆಗಿದೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ತಾಯ್ತನದ ಹಂಬಲ, ಲಾಲನೆ - ಪಾಲನೆಯ ಜವಾಬ್ದಾರಿಗಳನೆಲ್ಲ ತಾಯಿಯ ಪಾಲಿಗಿದೆ. ತಾಯ್ತನಕ್ಕೆ ಕೊಟ್ಟ ಪ್ರಾಮುಖ್ಯತೆ, ಭಾವತಿವ್ರತೆ, ತಂದೆತನಕ್ಕೆ ನಮ್ಮ ಸಮಾಜ ಕೊಟ್ಟಿಲ್ಲ . ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ತಾಯ್ತನದ ಕುರಿತಾದ ಸಾಮಾಜಿಕ ವಿರೋಧಾಭಾಸಗಳು ನಮ್ಮಲ್ಲಿ ನೆಲೆಯೂರಿವೆ ಎಂಬುದು ಇಲ್ಲಿ ಗುರುತಿಸಲಾಗಿದೆ. ವಿವಾಹದ ಮುದ್ರೆ ಬಿದ್ದಾಗ ಮಾತ್ರ ಒಬ್ಬ ಹೆಣ್ಣು ತಾಯಿಯಾಗಲು ಮಾನ್ಯತೆ ಪಡೆದಂತೆ. ಅಂದರೆ ಜನ್ಮ ಕೊಟ್ಟ ಎಲ್ಲ ತಾಯಂದಿರಿಗೆ ನಮ್ಮ ಸಮಾಜ ಗೌರವ ಕೊಡುವುದಿಲ್ಲ ಬದಲಾಗಿ ಸಮಾಜ ವಿಧಿಸಿದ ಚೌಕಟ್ಟಿನಲ್ಲೇ ಹೆಣ್ಣು ತಾಯಿಯಾದಾಗ ಆಕೆಗೆ ಬೆಲೆ ವಿವಾಹಕ್ಕೆ ಒಳಪಟ್ಟ ಹೆಣ್ಣು ಮಾತ್ರ ತಾಯಿಯಾಗಬೇಕು ಎಂಬುದು ಸಮಾಜ ವಿಧಿಸಿದ ವಿಧಿನಿಯವು ವಿವಾಹ ಬಾಹಿರ ಅಂದರೆ. ವೇಶ್ಯೆಯರು, ದೇವದಾಸಿಯರು, ಅವಿವಾಹಿತ ತಾಯಂದಿರು, ಅತ್ಯಾಚಾರಕ್ಕೆ ಬಲಿಯಾದ ಹೆಣ್ಣು ಮಕ್ಕಳು ತಾಯಂದಿರಾದರೆ ನಮ್ಮ ಸಮಾಜದ ಅಲ್ಲಿ ಅಂಥವರನ್ನು ನಿಕೃಷ್ಟವಾಗಿ ಕಾಣಲಾಗುತ್ತದೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಮಾತೃತ್ವದ ಆರಾಧನಾ ಪದ್ಧತಿಯಾಗಿ, ಭೂಮಿ ಆರಾಧನೆ, ಸ್ತ್ರೀ ವಿಗ್ರಹ ಆರಾಧನೆ, ಯೋನಿ ಆರಾಧನೆ(ಲಜ್ಜಾ ಗೌರಿ) ನಾಗಾರಾಧನೆಗಳಂಥ ದೈವಿ ಆರಾಧನೆಗಳು ನಮ್ಮಲ್ಲಿ ಬೆಳೆದು ಬಂದಿವೆ ಎಂಬುದನ್ನು ಗಮನಿಸಲಾಗಿದೆ. ಭಾರತದಾದ್ಯಂತ ದೊರೆಯುವ ಮಾತೃ ವಿಗ್ರಹಗಳು ಮಾತ್ರ ಆರಾಧನಾ ಪದ್ಧತಿ ಜಾರಿಯಲ್ಲಿದುದಕ್ಕೆ ಮಾಹಿತಿ ಒದಗಿಸಿಕೊಡುತ್ತವೆ.

ಪುರುಷಪ್ರಧಾನ ವ್ಯವಸ್ಥೆಯಲ್ಲಿ ತಾಯಿ ಹಾಗೂ ತಾಯ್ತನವನ್ನು ಎಷ್ಟರ ಮಟ್ಟಿಗೆ ತನ್ನ ಹತೋಟಿಯಲ್ಲಿ ಇಟ್ಟುಕೊಂಡಿದೆ ಎಂದರೆ ಹೆಣ್ಣಿಗೆ ತನ್ನ ತವರು ಮನೆಯಲ್ಲಿಯೂ ಸಹ ಯಾವ ಬಗೆಯ ಸ್ವಾತಂತ್ರ್ಯವೂ ಇರುವುದಿಲ್ಲ. ಹೆಣ್ಣಿಗೆ ತವರಿನಲ್ಲಿ ತಾಯಿಯಾಗುವ ಹಾಗೂ ಅದನ್ನು ಪ್ರಮಾಣಿಕವಾಗಿ ನಿಭಾಯಿಸುವ ತರಬೇತಿಯನ್ನು ಕೊಡಲಾಗುತ್ತದೆ. ಪುರುಷನ ದೃಷ್ಟಿಯಿಂದಲೇ ಸ್ತ್ರೀ ಮನೋಧೋರಣೆಯು ರೂಪು ಪಡೆದು ಆಕೆಯು ಸಹ ಪಿತೃ ಪ್ರಧಾನ ವ್ಯವಸ್ಥೆಗೆ ಒಗ್ಗಿಕೊಂಡು ಅದರ ಭಾಗವಾಗಿಯೇ ಬದುಕುತ್ತಿರುತ್ತಾಳೆ ಎಂಬುದನ್ನು ಇಲ್ಲಿ ಗುರುತಿಸಲಾಗಿದೆ.

ಮಹಿಳೆ ತಾಯಿಯಾಗಿ ಸಾಗಿಬಂದ ಒಟ್ಟಂದದ ಕಥನವನ್ನು ಸಂಸ್ಕೃತಿಯ ನೆಲೆಯಲ್ಲಿ ಕಾಣುವ ಒಂದು ಚಿಕ್ಕ ಪ್ರಯತ್ನ ಇಲ್ಲಿ ಮಾಡಲಾಗಿದೆ. ಮಹಿಳೆಯರ ಪ್ರಗತಿಗಾಗಲೀ ಅಧೋಗತಿಗಾಗಲಿ ತಾಯ್ತನದ ಗ್ರಹಿಕೆ ಹೇಗೆ ಕಾರ್ಯ ನಿರ್ವಹಿಸಿದೆ ಎಂಬುದನ್ನು ಸಂಸ್ಕೃತಿಯ ಹಿನ್ನೆಲೆಯಲ್ಲಿ ನೋಡಲಾಗಿದೆ. ಇಲ್ಲಿ ಹೆಣ್ಣೊಬ್ಬಳ ಹುಟ್ಟು, ಮೈನೆರೆಯುವುದು, ಮದುವೆ, ಬಸುರಿ, ಬಾಣತನ, ಸಾವು, ಹಬ್ಬ - ಹರಿದಿನಗಳು ಹೀಗೆ ಹತ್ತು ಹಲವು ಬದುಕಿನ ಚಿತ್ರಣಗಳು ಸಂಸ್ಕೃತಿಯಲ್ಲಿ ಅಡಕಿಕೊಂಡ ಬಗೆಯನ್ನು ಗುರುತಿಸಲಾಗಿದೆ. ಜೋತೆಗೆ ಸ್ತ್ರೀವಾದಿ ಗ್ರಹಿಕೆಯನ್ನು ಸಹ ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಜನಪದ ಗೀತ ಸಾಹಿತ್ಯದಲ್ಲಿ ದಾಖಲೆಗೊಂಡ ತಾಯಿಯ ಬದುಕು ಮುಖ್ಯವಾಗಿ ಎರಡು ನೆಲೆಯಲ್ಲಿ ಗುರುತಿಸಬಹುದಾಗಿದೆ. ಒಂದು ತವರುಮನೆಯನ್ನು ನೆನೆಸಿಕೊಳ್ಳುವುದು ಇನ್ನೊಂದು ಗಂಡನ ಮನೆಯಲ್ಲಿ ತಾನು ಅನುಭವಿಸುವ ಸುಂದರ ಹಾಗೂ ಯಾತನಾಪೂರ್ವವಾಗಿರುವ ಭಾವನೆಗಳನ್ನು ಹಾಡಿನ ಮೂಲಕ ವ್ಯಕ್ತ ಪಡಿಸಿರುವುದು. ಇಲ್ಲಿ ಪರಂಪರಾಗತವಾಗಿ ಮೂಡಿಬಂದ ಸಿದ್ಧ ಮಾದರಿಯ ಗ್ರಹಿಕೆಗಳನ್ನು ಕಾಣಬಹುದು. ಜೊತೆಗೆ ಸಮಾನತೆಯ ಗ್ರಹಿಕೆಗಳನ್ನು ಕಾಣಬಹುದು ಕೆಲ ಸಲ ತಾರತಮ್ಯದ ಗ್ರಹಿಕೆಯನ್ನೂ ಕಾಣಬಹುದಾಗಿದೆ.

ಮಗುವಿಗೆ ಹಾಲುಣಿಸುವಾಗ, ಮಲಗಿಸುವಾಗ, ತೊಟ್ಟಿಲು ತೂಗುವಾಗ, ಆಡಿಸುವಾಗ ಸಹಜ ಸ್ಫೂರ್ತಿಯಿಂದ ಹೊರಹೊಮ್ಮಿದ. ಜನಪದ ಗೀತ ಸಾಹಿತ್ಯ ನಮ್ಮ ತಾಯಂದಿರ ಕಾವ್ಯ ಪ್ರತಿಭೆಗಳು ಹೇಗೆ ಕಾರ್ಯ ನಿರ್ವಹಿಸಿವೆ ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ವಾತ್ಸಲ್ಯಗೀತೆ, ಲಾಲಿಪದ, ಜೋಗುಳಪದ, ತೊಟ್ಟಿಲ ಪದ ಮುಂತಾದ ಹೆಸರುಗಳನ್ನು ಇವು ಪಡೆದುಕೊಂಡಿವೆ. ಆದರೂ ಈ ಹಾಡುಗಳ ಮುಖ್ಯ ವಿಷಯವಸ್ತುವೆಂದರೆ ತಾಯಿಯ ಕರುಳಿನ ಕಂದನೇ ಆಗಿದ್ದಾನೆ. ಮಗುವಿನ ಹಾವ- ಭಾವ ಗುಣವರ್ಣನೆಗಳನ್ನುಈ ವಾತ್ಸಲ್ಯ ಗೀತೆಗಳಲ್ಲಿ ಜನಪಸ ತಾಯಂದಿರು ಹೇಗೆ ಮನದಣಿಯದೆ ಹಾಡಿದ್ದಾರೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಹೆಣ್ಣು ತನ್ನ ಅನುಭವಗಳನ್ನೆ ಕಥನಾತ್ಮಕವಾಗಿ ಹೇಳಲ್ಪಟ್ಟ ಹಾಡುಗಳಾದ ಕಥನ ಗೀತೆಗಳನ್ನು ತಾಯ್ತನದ ನೆಲೆಯಿಂದ ಇಲ್ಲಿ ಗ್ರಹಿಸಲಾಗಿದೆ. ತಾಯಿಯ ಬದುಕಿನ ಅನುಭವವನ್ನು ಈ ಕಥನಗೀತೆಗಳು ಹೇಳುತ್ತವೆ. ಕಥನಗೀತೆಗಳ ಅಧ್ಯಯನವೆಂದರೆ ಹೆಣ್ಣಿನ ಸಾಂಸ್ಕೃತಿಕ ಬದುಕಿನ ಅಧ್ಯಯನವೇ ಆಗಿದೆ. ಹೆಣ್ಣಿನ ಸುತ್ತ ಹಣೆದ ಆಕೆಯ ಒಟ್ಟು ಬದುಕನ್ನು ಗಮನಿಸಿದಾಗ ಅಲ್ಲಿ ಬಂಜೆತನದ ಕ್ರೌರ್ಯ ತಾಯ್ತನದ ತಲ್ಲಣಗಳು, ಗರ್ಭಿಣಿಯರಿಗಾಗಿ ನಡೆಸುವ ಸಂಭ್ರಮ, ಹಿಂಸಾತ್ಮಕ ಕೃತ್ಯ, ಪಾತಿವ್ರತ್ಯದ ಕುರಿತು ಇರುವ ಅನುಮಾನ ತಾಯ್ತನದ ತ್ಯಾಗ - ಬಲಿದಾನವನ್ನು ಕಥನಗೀತೆಗಳಲ್ಲಿ ತಾಯ್ತನದ ನೆಲೆಯನ್ನು ಕೆದಕಿ ನೋಡಿದಾಗ ಹೆಣ್ಣಿನ ಪರಿಪೂರ್ಣ ಚಿತ್ರಣ ದೊರೆತಿರುವುದು ಗಮನಿಸಬಹುದು.

ಗಾದೆಗಳು ಸಮಾಜದ ಗ್ರಹಿಕೆಯನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿವೆ. ಅದಕ್ಕಾಗಿ ತಾಯ್ತನದ ವಿಭಿನ್ನ ಗ್ರಹಿಕೆಯನ್ನು ಕಂಡುಕೊಳ್ಳಲು ಗಾದೆಗಳನ್ನು ಸಹ ಕೆದಕಿ ನೋಡಲಾಗಿದೆ. ಇಲ್ಲಿ ತಾಯಿಯ ಹಲವು ಬಗೆಯ ದೃಷ್ಟಿಕೋನವನ್ನು ಮತ್ತು ಸಮಾಜ ಗ್ರಹಿಸಿರುವ ಬಗೆಯನ್ನು ವಾಸ್ತವದ ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ಇವು ಆಡುನುಡಿಗೆ ಮೇರುಗನ್ನು ತಂದರೂ ಬದುಕಿನ ಕಾವ್ಯೋಕ್ತಿಗಳೇ ಆಗಿವೆ ಎನ್ನಬಹುದು.

ಯಾವುದೇ ಅಧ್ಯಯನ ಕೈಗೊಳ್ಳುವುದರ ಮುಖ್ಯ ಉದ್ದೇಶ ಅದರ ಪ್ರಸ್ತುತತೆ, ಅದಕ್ಕಾಗಿ ತಾಯ್ತನದ ಕುರಿತಾದ ಅಧ್ಯಯನ ಸಂಪೂರ್ಣತೆಗೊಳ್ಳುವುದು ಆ ಅಧ್ಯಯನ ಪ್ರಸ್ತುತತೆಯಲ್ಲಿ ಆಧುನಿಕತೆಗೆ ಒಳಗಾದ ಇಂದಿನ ಬದುಕು ತಾಯಿಯನ್ನು ಗ್ರಹಿಸಿರುವ ಬಗೆಯನ್ನು ಇಲ್ಲಿ ಗಮನಿಸಲಾಗಿದೆ. ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾಲಂಬನೆ ಆಕೆಯ ತಾಯ್ತನವನ್ನು ಹೇಗೆ ಪ್ರಭಾವಿಸಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಜನಪದ ಗೀತೆ, ಕಥನಗೀತೆ ಮತ್ತು ಗಾದೆಗಳಲ್ಲಿನ ತಾಯ್ತನದ ಗ್ರಹಿಕೆಯ ಜೊತೆಗೆ ಗಾದೆಗಳಲ್ಲಿ ಮೂಡಿ ಬಂದ ತಾಯ್ತನದ ವಿಭಿನ್ನ ಮುಖಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ಮಹಿಳೆಯ ಬದುಕನ್ನು ವಿವಾಹ ಮತ್ತು ಕುಟುಂಬಗಳು ಪ್ರಭಾವಿಸಿವೆ. ಅವು ಅವಳಿಗೆ ಸಂಕಷ್ಟಕ್ಕೆ ದೂಡಿವೆ. ಇವು ಆಕೆಯನ್ನು ಸ್ವತಂತ್ರವಾಗಿ ಬೆಳೆಯಲು ಬಿಡದ ಕಾರಣ ಆಕೆಯ ಬೆಳವಣಿಗೆ ಕುಂಠಿತಗೊಂಡಿವೆ.

ತಾಯ್ತನವೆಂಬುದು ವಿವಾಹಿತ ಮಹಿಳೆಗೆ ಗೌರವ ತಂದುಕೊಡುವ ಸಂಗತಿಯಾಗಿದೆ. ಅವಿವಾಹಿತೆಗೆ ಕಳಂಕವಾಗಿ ಪರಿಣಮಿಸುತ್ತದೆ. ಒಂದು ಕಡೆ ಜನಪದ ಗೀತೆಗಳು ತಾಯ್ತನದ ಭಾವವನ್ನು ಭಾವನಾ ಪ್ರಧಾನವಾಗಿ ಚಿತ್ರಿಸಿರುವುದು ಕಂಡು ಬಂದರೆ ಕಥನಗೀತೆಗಳಲ್ಲಿ ಬದುಕಿನ ವಾಸ್ತವ ಚಿತ್ರಣವನ್ನು ತೋರಿಸುತ್ತವೆ.

ಜನಪದ ಆಚರಣೆಗಳ ತಾಯಿಯನ್ನು ಬಹು ಜಾಗರೂಕತೆಯಿಂದ ಪೋಷಿಸುತ್ತವೆ. ಜನಪದ ಗೀತೆಗಳಲ್ಲಿ ಮೈನೆರೆಯುವಿಕೆ, ಬಸಿರು - ಬಾಣಂತನದ ಸಂದರ್ಭದಲ್ಲಿ ತಾಯಿಯನ್ನು ವಿಶೇಷವಾಗಿ ನೋಡಿಕೊಳ್ಳಲಾಗುತ್ತದೆ. ಆಹಾರಗಳಲ್ಲಿ ಅನೇಕ ವಿಧಿನಿಷೇಧಗಳನ್ನು ಹೇರಲಾಗಿದೆ. ಹಲವು ನಂಬಿಕೆಗಳು ಅವೈಜ್ಞಾನಿಕವಾಗಿ ಇದ್ದರೂ ತಾಯಿ ಮತ್ತು ಮಗುವಿನ ಹಿತರಕ್ಷಣೆಗಾಗಿ ಅವುಗಳನ್ನು ನಂಬಿಕೊಂಡು ಬರಲಾಗಿದೆ.ತಾಯಿ ಆಗುವ ಗರ್ಭಿಣಿಯನ್ನು ಸಂತೋಷಕರವಾಗಿ ಇರುವ ಹಾಗೆ ನೋಡಿಕೊಳ್ಳಲಾಗುತ್ತದೆ.

ವಿಶೇಷವಾಗಿ ಚೊಚ್ಚಲ ಬಸುರಿಗೆ ಎಲ್ಲಿಲ್ಲದ ಆರೈಕೆ ಸಿಗುತ್ತದೆ. ವೈಭವೀಕರಣದ ನೆಲೆಯಲ್ಲಿಯೇ ಹುಟ್ಟಿಕೊಂಡ ಅನೇಕ ನಂಬಿಕೆ ಆಚರಣೆಗಳು ತಾಯಿಯ ಬದುಕನ್ನು ಪಾತಾಳಕ್ಕೆ ನೂಕಿರುವುದು ವಾಸ್ತವದ ಸತ್ಯ.

ಪರಂಪರಾಗತವಾಗಿ ಸಾಗಿ ಬಂದ ತಾಯಂದಿರ ಬದುಕಿನ ಸ್ಥಿತಿ- ಗತಿ ಒಂದು ಬಗೆಯದಾದರೆ, ಆಧುನಿಕ ಕಾಲದ ತಾಯಂದಿರ ಬದುಕು ಸ್ಥಿತಿ-ಗತಿ ವಿಭಿನ್ನವಾಗಿವೆ. ಇವರು ಎದುರಿಸುವ ಸವಾಲುಗಳು ವಿಭಿನ್ನವಾಗಿವೆ. ಹಿಂದಿನ ಸವಾಲು-ಸಮಸ್ಯೆಗಳು ಬದಲಾದಂತೆ ಕಂಡರೂ ಅದರಿಂದ ಸಂಪೂರ್ಣಹೊರ ಬರಲಾಗದೇ, ಶಿಕ್ಷಣ, ಉದ್ಯೋಗ ಕಾರಣವಾಗಿ ಕುಟುಂಬದ ಹೊರ ಮತ್ತು ಒಳಸಮಸ್ಯೆಗೆ ಬಲಿಯಾಗಿ ದ್ವಿಮುಖದ ಬದುಕನ್ನು ಬದುಕಲು ಹರಸಾಹಸ ಮಾಡುತ್ತಿದ್ದಾಳೆ. ಆಕೆಯ ಈ ಸಂಘರ್ಷದಿಂದ ಆಧುನಿಕ ತಾಯಿ ತತ್ತರಿಸಿ ಹೋಗಿರುವುದು ಇಲ್ಲಿ ಗುರುತಿಸಲಾಗಿದೆ.

ಆಧುನಿಕ ವಿಜ್ಞಾನ - ತಂತ್ರಜ್ಞಾನವೂ ತಾಯಂದಿರ ಸ್ಥಿತಿಯನ್ನು ಬದಲಾಯಿಸಿವೆ. ಬಾಡಿಗೆ ತಾಯ್ತನ, ಪ್ರಣಾಳ ಶಿಶುಗಳಂತಹ ತಂತ್ರಜ್ಞಾನವೂ ತಾಯಿಯ ಪರಿಕಲ್ಪನೆಯನ್ನೆ ಬದಲಾಯಿಸಿವೆ. ಇವು ನಮ್ಮ ತಾಯಂದಿರ ಸಮಸ್ಯೆಗಳನ್ನು ಕಡಿಮೆಗೊಳಿಸಿದಂತೆ ಕಂಡರೂ ಇದರಿಂದ ಇನ್ನೂ ಹಲವು ಬಗೆಯ ಸಮಸ್ಯೆಗಳು ಎದುರಾಗಿವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

## ಅಧ್ಯಯನದ ಸಲಹೆ ಹಾಗೂ ಸಾಧ್ಯತೆಗಳು

ತಾಯ್ತನದ ವಿಭಿನ್ನ ಗ್ರಹಿಕೆಗಳು ಎಂಬ ವಿಷಯವನ್ನು ಸಂಶೋಧನಕ್ಕೆ ಒಳಪಡಿಸಿದಾಗ ಜನಪದ ಗೀತ ಸಾಹಿತ್ಯ ಕಥನಗೀತೆ ಹಾಗೂ ಗಾದೆಗಳಲ್ಲಿನ ತಾಯ್ತನದ ಗ್ರಹಿಕೆಗಳನ್ನು ಅನುಲಕ್ಷಿಸಲಾಗಿದೆ. ಇದರೊಂದಿಗೆ. ಜನಪದ ಸಂಸ್ಕೃತಿಯ ಮುಖ್ಯ ಭಾಗವಾಗಿರುವ ನಂಬಿಕೆ ಆಚರಣೆಗಳನ್ನು ಇಲ್ಲಿ ಕೆದಕಿ ನೋಡಲಾಗಿದೆ. ಇದರಿಂದ ನಮ್ಮ ತಾಯಂದಿರ ವಾಸ್ತವ ಚಿತ್ರಣ ದೊರೆತು ಆಕೆಯ ಬದುಕನ್ನು ಪ್ರಭಾವಿಸಿವೆ ಎಂಬುದು ತಿಳಿದು ಬರುತ್ತವೆ.

ತಾಯ್ತನದ ಕಾರಣವಾಗಿ ಆಕೆಯ ಬದುಕು ಕುಟುಂಬವೆಂಬ ಚೌಕಟ್ಟಿನಲ್ಲಿ ಅಧೀನಳಾಗಿ ಬದುಕುವಂತೆ ಆಗಿದೆ. ಸಾರ್ವಜನಿಕ ವಲಯಕ್ಕೆ ಆಕೆಗೆ ಪ್ರವೇಶವಿಲ್ಲ ಎನ್ನುವಂತಾಗಿದೆ. ಆದರೆ ಇಂದು ಆಕೆ ಇದರಿಂದ ಹೊರ ಬರಬೇಕಾಗಿದೆ. ಅದಕ್ಕಾಗಿ ಸರಕಾರ ಹಾಗೂ ಸರಕಾರೇತರ ಸಂಸ್ಥೆಗಳು ಸೂಕ್ತವಾದ ಕಾರ್ಯಗಳನ್ನು ಕೈಗೊಳ್ಳಬೇಕು. ಅವುಗಳೆಂದರೆ

- ಪಾರಂಪರಿಕ ಗ್ರಹಿಕೆಯಿಂದ ಹೊರಬರಬೇಕು.(ಸ್ತ್ರೀ - ಪುರುಷರಿಬ್ಬರು)
- ಶಿಕ್ಷಣ ಪಡೆಯುವುದು ಕಡ್ಡಾಯವಾಗಬೇಕು.
- ತಾಯ್ತನವೇ ಹೆಣ್ಣಿನ ಬದುಕಾಗದೇ ಅದು ಆಕೆಯ ಆಯ್ಕೆಯ ಕ್ಷೇತ್ರವಾಗಬೇಕು.
- ತಾಯಂದಿರ ಹಿತರಕ್ಷಣೆಗಾಗಿ ಜಾಗೃತಿ ಶಿಬಿರಗಳನ್ನು ನಡೆಸಬೇಕು.
- ತಾಯಂದಿರ ಕುರಿತಾದ ಕಾನೂನು ಮತ್ತು ಹಕ್ಕುಗಳ ಕುರಿತು ಜಾಗೃತಿ ಮೂಡಿಸಬೇಕು.

- ಕುಟುಂಬದ ಸದಸ್ಯರು ಬೆಂಬಲಿಗರಾಗಿ ನಿಲ್ಲಬೇಕು.
- ತಾಯಂದಿರ ಅಭಿವೃದ್ಧಿಗಾಗಿ ಸರಕಾರ ಆರೋಗ್ಯಕರ ಕಾನೂನುಗಳನ್ನು ಜಾರಿಗೆ ತರಬೇಕು.
- ಸ್ವತ ತಾಯಿಯಾದ ಮಹಿಳೆ ತಾನೊಂದು ವ್ಯಕ್ತಿ ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ಜೀವಿಸಬೇಕು.
- ತಾಯಿ ಸದಾ ತ್ಯಾಗಕ್ಕೆ ಸಿದ್ಧಳಾಗಿರಬೇಕು ಎಂಬ ಗ್ರಹಿಕೆಯಿಂದ ಹೊರಬರಬೇಕು.
- ಯಾವುದೇ ಕಾರ್ಯಕ್ರಮಗಳು ಪುರುಷ ಮತ್ತು ಮಹಿಳೆರಿಬ್ಬರನ್ನು ಜಾಗೃತಗೊಳಿಸುವಂಥವುಗಳು ಆಗಬೇಕು.
- ತಾಯಂದಿರ ಆರೋಗ್ಯದ ಬಗ್ಗೆ ಸದಾ ನಿಗಾ ವಹಿಸುವಂತಾಗಬೇಕು.
- ಬಂಜೆ ಕುರಿತಾದ ಅವೈಜ್ಞಾನಿಕ ವಿಚಾರಗಳನ್ನು ತೊಡೆದು ಹಾಕಲು ಜಾಗೃತಿ ಕಾರ್ಯಕ್ರಮಗಳು ಜರುಗಬೇಕು.

ಹೀಗೆ ತಾಯಂದಿರ ಶ್ರೇಯಸ್ಸಿಗಾಗಿ ಹಲವು ಹೆಜ್ಜೆಗಳನ್ನು ಇಡುವುದು ಜರೂರಿ ಆಗಿದೆ.

ತಾಯ್ತನದ ವಿಭಿನ್ನ ಗ್ರಹಿಕೆಗಳು ಕುರಿತ ಈ ನನ್ನ ಅಧ್ಯಯನಕ್ಕೆ ತನ್ನದೆ ಆದ ಒಂದು ಮಿತಿ ಇದೆ. ಆದರೆ ಮುಂಬರುವ ಸಂಶೋಧಕರು ತಾಯ್ತನವನ್ನು ಇನ್ನೂ ಬೇರೆ ಬೇರೆ ನೆಲೆಗಳಲ್ಲಿ ಅಧ್ಯಯನ ಮಾಡುವ ಸಾಧ್ಯತೆ ಇದೆ. ತಾಯ್ತನಕ್ಕೆ ಸಂಭಂದಿಸಿದ ಮಹತ್ವದ ವಿಷಯಗಳೆಂದರೆ, ಜನಪದ ಗದ್ಯ ಸಾಹಿತ್ಯದಲ್ಲಿ ತಾಯ್ತನದ ಗ್ರಹಿಕೆಗಳು, ಸಾಹಿತ್ಯದಲ್ಲಿ ತಾಯ್ತನ, ಧರ್ಮಗಳಲ್ಲಿ ತಾಯ್ತನ, ವಿವಾಹಪೂರ್ವ ತಾಯ್ತನ, ಬಂಜೆತನ, ಬಾಡಿಗೆ ತಾಯ್ತನ, ಒಂಟಿ ತಾಯಂದಿರು ಹೀಗೆ ಹಲವು ಬಗೆಯ ಶೀರ್ಷಿಕೆಯಡಿಯಲ್ಲಿ ತಾಯಂದಿರ ಕುರಿತ ವಿವಿಧ ಮಗ್ಗಲುಗಳನ್ನು ಅಧ್ಯಯನ ಮಾಡಲು ಸಾಧ್ಯತೆ ಇದೆ. ಪ್ರಸ್ತುತ ಈ ನನ್ನ ಅಧ್ಯಯನ ಜನಪದ ಸಾಹಿತ್ಯದಲ್ಲಿ ತಾಯ್ತನದ ಕುರಿತ ಕೆಲ ಸಂಗತಿಗಳನ್ನು ಮಾತ್ರ ಹೊರಹಾಕಿದೆ. ಇದರ ಹೊರತಾಗಿ ಇನ್ನೂ ಹಲವು ಸಂಗತಿಗಳು ತಾಯಂದಿರ ಕುರಿತ ಗಂಭೀರ ಸಂಶೋಧನೆ ನಡೆಯುವ ಸಾಧ್ಯತೆ ಇದೆ ಎಂದು ಹೇಳಬಹುದು.

## ಅನುಬಂಧಗಳು

1) ಗ್ರಂಥಸೂಚಿ
2) ಪತ್ರಿಕೆಗಳು
3) ವಕ್ತಾರರ ಪಟ್ಟಿ
4) ಪ್ರಶ್ನಾವಳಿ
5) ಛಾಯಾಚಿತ್ರಗಳು

# 1 ಗ್ರಂಥಸೂಚಿ


1. ಅಕಬರ ಅಲಿ  ಎಂ (ಡಾ): ಸರ್ವಜ್ಞನ ಸಮಾಜ ದರ್ಶನ ಮತ್ತು ಸಾಹಿತ್ಯ ತತ್ವ: ಪ್ರ: ಶ್ರೀ ಸಿದ್ಧಲಿಂಗೇಶ್ವರ ಸರಸ್ವತಿ ಗೋದಾಮ ಗುಲಬರ್ಗಾ: ೨೦೧೧
2. ಆರ್ಕೆ (ಡಾ) : ಸಾಹಿತ್ಯ ಸಿದ್ಧಾಂತ ಮತ್ತು ಹೋರಾಟ :ಪ್ರ: ನವಕರ್ನಾಟಕ ಪಬ್ಲಿಕೇಷನ್ಸ (ಪ್ರೈ) ಲಿಮಿಟೆಡ: ೧೯೮೬
3. ಇಂದಿರಾ ಜೈಪ್ರಕಾಶ (ಡಾ): 'ಸ್ತ್ರೀವಾದಿ  ಮನೋವಿಜ್ಞಾನ' :ಪ್ರ: ಮಹಿಳಾ  ಅಧ್ಯಯನ  ಕೇಂದ್ರ ಕನ್ನಡ  ವಿಶ್ವವಿದ್ಯಾಲಯ,  ಹಂಪಿ. : ೨೦೦೯
4. ಇಂದಿರಾ ಆರ್(ಡಾ): ಮಹಿಳೆ ಸಮಾಜ ಮತ್ತು ಸಂಸ್ಕೃತಿ:ಪ್ರಸಾರಾಂಗ ಕನ್ನಡ ವಿ.ವಿ.ಹಂಪಿ:೨೦೦೨
5. ಈಶ್ವರಯ್ಯಾ ಮಠ (ಡಾ): ಅಖಿಲ ಭಾರತ ಜಾನಪದ ಸಮ್ಮೇಳನ ಬೀದರ ಸ್ಮರಣ ಸಂಚಿಕೆ ದಿ:೨೨,೨೩,೨೪ ಮತ್ತು ೨೫ ಏಪ್ರಿಲ್ ೨೦೧೧
6. ಉಜ್ವಲ ಹಿರೇಮಠ (ಡಾ): ಮಹಿಳೆಯರ ಪ್ರಗತಿಗೆ ಸಂಪನ್ಮೂಲಗಳ ಕ್ರೋಢೀಕರಣ:ಪ್ರ: ಕುಲಸಚಿವರು ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ : ೧೯೯೫
7. ಉಷಾ ಎಂ (ಡಾ): 'ಮಹಿಳಾ  ಚಳುವಳಿ ಮತ್ತು ಮಹಿಳಾ ವಿಷಯಗಳು' :ಪ್ರ: ಡಾ.ಹಿ.ಚಿ.ಬೋರಲಿಂಗಯ್ಯ ನಿರ್ದೇಶಕರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
8. ಉಷಾ ಎಂ(ಡಾ):'ಮಹಿಳೆ ಮತ್ತು ಜಾತಿ':ಪ್ರ: ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,   ಹಂಪಿ ವಿದ್ಯಾರಣ್ಯ :  ೨೦೦೫
9. ಉಷಾ ಎಂ (ಡಾ) (ಸಂ): ಮಹಿಳಾ ಅಧ್ಯಯನ ಪ್ರ- ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ:೨೦೦೪
10. ಕಕ್ಕಿಲ್ಲಾಯ ಬಿ.ವಿ.  : 'ಭಾರತೀಯ ದರ್ಶನಗಳು': ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈ: ೨೦೧೪
11. ಕವಿತಾ  ರೈ (ಡಾ) : 'ಮಹಿಳೆ   ಅಸ್ತಿತ್ವ  ಸಂಕಥನ' : ಪ್ರ  : ಪ್ರಗತಿ  ಗ್ರಾಫಿಕ್ಸ - ಬೆಂಗಳೂರು
12. ಕೀರ್ತಿನಾಥ  ಕುರ್ತುಕೋಟಿ :  ಕನ್ನಡ  ಸಾಹಿತ್ಯ  ಸಂಗಾತಿ(ಸಂ-೧): ಪ್ರ :  ಕನ್ನಡ  ಮತ್ತು ಸಂಸ್ಕೃತಿ  ಇಲಾಖೆ:೨೦೧೦
13. ಕುಮಾರ ಕಕ್ಕಯ್ಯ ಪೋಳ : 'ಚಾತುರ್ವರ್ಣ ಧರ್ಮ ದರ್ಶನ' : ಪ್ರ :ಲೋಹಿಯಾ:೧೯೯೬
14. ಗಣಪತಿ ಬಿ.ಮೋಹನ್ ಎಸ್.(ಸಂ) : ಹಿರಿಯಣ್ಣ : ಪ್ರ : ಅಂಶು ಪ್ರಕಾಶನ : ೨೦೧೧

15. ಗಾಯತ್ರಿ ನಾವಡ (ಡಾ) : ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು : ಪ್ರ:ರಾಷ್ಟ್ರಕವಿ ಗೋವಿಂದ ಪೈ ಸಂಶೋಧನೆ ಕೇಂದ್ರ ಉಡುಪಿ ಸಿರಿ ಪ್ರಕಾಶನ ಹೊಸಪೇಟೆ : ೧೯೯೯

16. ಚಂದ್ರಕಲಾ ಬಿದರಿ (ಡಾ) : ಮಹಿಳಾ ಬದುಕು :ಪ್ರ: ತನು ಮನ ಪ್ರಕಾಶನ : ೨೦೦೯

17. ಚಂದ್ರಪ್ಪ ಭತಮುರ್ಗೆ (ಡಾ) : ನನ್ನೂರು ನನ್ನವ್ವ :ಪ್ರ: ಪೂರ್ಣಿಮಾ ಪ್ರಕಾಶನ : ೨೦೧೧

18. ಚಿದಾನಂದಮೂರ್ತಿ ಎಂ (ಡಾ) : ಸಾಂಸ್ಕೃತಿಕ ಅದ್ಯಯನ : ಪ್ರ :ಸಪ್ನಾ ಬುಕ ಹೌಸ್ : ೨೦೧೧

19. ಜ್ಯೋತಿ ಶಶಿಕುಮಾರ : ಮಹಿಳಾ ಸಾಮಾಜಿಕತೆ : ಪ್ರ:ಕನ್ನಡ ವಿ. ವಿ. ಹಂಪಿ : ೨೦೦೭

20. ದೇವಿಪ್ರಸಾದ ಚಟ್ಟೋಪಾಧ್ಯಾಯ : ಮಾತೆಯರು ಮಾನ್ಯರಾಗಿದ್ದಾಗ : ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈವೆಟ ಲಿಮಿಟೆಡ : ೨೦೧೧

21. ದೇವಿಪ್ರಸಾದ ಚಟ್ಟೋಪಾಧ್ಯಾಯ : ಪ್ರತಿರೋಧ : ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈವೆಟ ಲಿಮಿಟೆಡ ಮು : ೨೦೧೩

22. ನಾಯಕ ಡಿ . ಬಿ. (ಡಾ) (ಸಂ): ಜಾನಪದ ಲೇಖನಗಳು : ಪ್ರ : ನಿರ್ದೇಶಕರು, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ : ೨೦೦೫

23. ನಾರಾಯಣ ಎಂ. ವಿಶ್ವ: ಜನಸಂಖ್ಯಾ ಅಧ್ಯಯನ: ಪು: ಚೇತನ ಬುಕಹೌಸ್ ಮೈಸೂರು:೨೦೦೦.

24. ನಿರುಪಮಾ (ಡಾ) : ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ : ಪ್ರ : ಆರಥಿ ಪಬ್ಲಿಕೆಷನ ಬೆಂಗಳೂರು : ೧೯೯೭

25. ನಿಂಗಣ್ಣ ಚಿ. ಸಿ. (ಡಾ) (ಸಂ): ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ : ಪ್ರ : ಶ್ರೀ ಸಿದ್ಧಲಿಂಗೇಶ್ವರ, ಸರಸ್ವತಿ ಗೋದಾಮ, ಗುಲಬರ್ಗಾ : ೨೦೧೨

26. ನೀಲಾ ಕೆ.:ಮಹಿಳೆ ಶೋಷಣೆಯ ನೆಲೆಗಳು : ಪ್ರ : ಗುಲ್ಬರ್ಗಾ ವಿಶ್ವವಿದ್ಯಾಲಯ : ೨೦೦೫

27. ನೀಲಾಂಬಿಕಾ ಪೋಲಿಸ ಪಾಟೀಲ (ಡಾ) : ಅವ್ವ ಕಾಡಾದಿ ಗೌರವ್ವ ಹಾಡಿದ ಹಾಡು: ಪ್ರ : ಶ್ರೀಮತಿ ಸರಸ್ವತಿ ಮಲ್ಲಿಕಾರ್ಜುನ ಕಾಡಾದಿ ಗೋದುತಾಯಿನಗರ ಗುಲಬರ್ಗಾ : ೨೦೦೨

28. ನೀಲಾಂಬಿಕಾ ಎ. ಪೋಲಿಸಪಾಟೀಲ : ಗಿರಿ ಕೋಗಿಲೆ: ಪ್ರ: ಶರಣಪ್ಪ ಬಿ. ಗಿರಿ. ಟೆಂಪಲ ಪಾರ್ಕ ವೆಂಕಟೇಶ ನಗರ ಗುಲಬರ್ಗಾ : ೨೦೦೮

29. ನೇಮಿಚಂದ್ರ : ಮಹಿಳಾ ಅಧ್ಯಯನ : ಪ್ರ : ಶ್ಯಾಮಸಿಂಗ ಕಾಂಪ್ಲೆಕ್ಸ ಗಾಂಧಿಬಜಾರ ಮುಖ್ಯರಸ್ತೆ ಬಸವನಗುಡಿ, ಬೆಂಗಳೂರು : ೨೦೦೧

30. ಪ್ರಭಾವತಿ ಎಸ್. ವಿ. (ಡಾ): ಜಾಗತೀಕರಣ ಮತ್ತು ಮಹಿಳೆ ಕನ್ನಡ : ಸಾಹಿತ್ಯ ಪರಿಷತ್ತು ಬೆಂಗಳೂರು : ೨೦೦೬

31. ಪ್ರೀತಿ ಶುಭಚಂದ್ರ : ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು : ಪ್ರ - ಪ್ರಸಾರಾಂಗ ಕನ್ನಡ ವಿ. ವಿ. ಹಂಪಿ : ೨೦೦೨

32. ಪ್ರೇಮಾ ಸಿರ್ಸೆ (ಡಾ) : ಮಹಿಳೆ ಸಮಾಜ ಮತ್ತು ಸವಾಲುಗಳು : ಪ್ರ: ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು : ೨೦೦೬

33. ಪ್ರೇಮಾ ಸಿರ್ಸೆ (ಡಾ) : ಹೊಸ ಬದುಕು : ಆನಂದ ಪ್ರ : ಬೀದರ

34. ಬರಗೂರು ರಾಮಚಂದ್ರಪ್ಪ : ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ: ಪ್ರ: ಅಂಕಿತ ಪುಸ್ತಕ ಶ್ಯಾಮಸಿಂಗ ಕಾಂಪ್ಲೆಕ್ಸ ಗಾಂಧಿಬಜಾರ ಮುಖ್ಯರಸ್ತೆ ಬಸವನಗುಡಿ, ಬೆಂಗಳೂರು : ೨೦೦೧

35. ಬರಗೂರು ರಾಮಚಂದ್ರಪ್ಪ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ: ಪ್ರ: ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ, : ೨೦೦೬

36. ಬಸವಕುಮಾರ ಪಾಟೀಲ (ಡಾ) : 'ಅವ್ವ' :ಪ್ರ : ಕಲ್ಯಾಣ ಕರ್ನಾಟಕ ಪ್ರತಿಷ್ಠಾನ : ೨೦೦೨

37. ಬಸವರಾಜ ಸಬರದ (ಡಾ) : ಜನಪದ ದೈವಗಳು : ಪ್ರ: ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೯

38. ಬಸವರಾಜ ಸಬರದ : ಹೊಸದಿಕ್ಕು: ಪ್ರ : ಪಲ್ಲವಿ : ಪ್ರ : ಬೀದರ : ೧೯೯೦

39. ಬೆನಗಲ್ ರಾಮರಾವ್ : ಪಾನ್ಯ ಸುಂದರಶಾಸ್ತ್ರೀ : ಪುರಾಣನಾಮ ಚೂಡಾಮಣಿ:
ಪ್ರೊ ಆರಿಯಸ. ಸುಂದರ ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ,
ಮೈಸೂರ - ೬ : ೨೦೦೭

40. ಭಾಸ್ಕರ ಎಂ. ಟಿ. (ಡಾ) : ಮಹಿಳೆ ಮತ್ತು ಡಾ. ಅಂಬೇಡ್ಕರ : ಪ್ರ: ಪ್ರಸಾರಾಂಗ ಗುಲಬರ್ಗಾ
ವಿಶ್ವವಿದ್ಯಾಲಯ, : ೨೦೦೫

41. ಮೂರ್ತಿ ಡಿ.ವಿ.ಜಿ : ಮಹಿಳಾ ಅಧ್ಯಯನ ಅರ್ಥ, ಹುಟ್ಟು, ಬೆಳವಣಿಗೆ, ಪರಿಕಲ್ಪನೆ,
ಸಿದ್ಧಾಂತಗಳು : ಪ್ರ : ಕರ್ನಾಟಕ ಪ್ರೆಸ್ , ಮೈಸೂರು : ೨೦೦೭

42. ಮೊಗಳ್ಳಿ ಗಣೇಶ (ಡಾ) : ಅವ್ಯಕ್ತ ಚರಿತ್ರೆ : ಪ್ರ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೦೯

43. ಮೊಗಳ್ಳಿ ಗಣೇಶ (ಡಾ): ಉರಿದಾವೊ ನೇಗಿಲು : ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೯

44. ಮೊಗಳ್ಳಿ ಗಣೇಶ (ಡಾ): ಮೌಖಿಕ ಕಥನ : ಪ್ರ : ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೦೬

45. ಮೊಗಳ್ಳಿ ಗಣೇಶ (ಡಾ): ಆದಿಮ :ಪ್ರ : ಸಾರಾಂಗ ಪ್ರಕಾಶನ ತಿಪಟೂರು : ೨೦೦೫

46. ಯಶೋದಮ್ಮ ಸಿದಬಟ್ಟೆ : ಸಾಹಿತ್ಯ ಸೌರಭ :ಪ್ರ: ಕರ್ನಾಟಕ ಲೇಖಕಿಯರ ಸಂಘ ಬೀದರ :೨೦೦೬

47. ರವಿ ಬೆಳಗೆರೆ : ಹುಟ್ಟು ಮತ್ತು ಪೂರ್ವೋತ್ತರ : ಪ್ರ : ನವಕನಾರ್ಟಕ ಪಬ್ಲಿಕೇಷನ್ಸ
ಪ್ರೈವೆಟ ಲಿಮಿಟೆಡ ಎಂಬೆಸಿ ಸೆಂಟರ, ಕ್ರೆಸೆಂಟ ರಸ್ತೆ, ಬೆಂಗಳೂರು. : ೨೦೧೨

48. ರಹಮತ ತರೀಕರೆ(ಡಾ) : ಪ್ರತಿಸಂಸ್ಕೃತಿ : ಪ್ರ : ಅಭಿನವ ವಿಜಯನಗರ ಬೆಂಗಳೂರು : ೨೦೧೧

49. ರಂಗಾರೆಡ್ಡಿ ಕೋಡಿರಾಂಪುರ (ಡಾ) : ಜಾನಪದ ಅನ್ವಯಿಕತೆ : ಪ್ರ : ರಿಜಿಸ್ಟಾರ,
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು : ೨೦೦೩

50. ರಾಮಚಂದ್ರ ಗಣಾಪೂರ(ಡಾ)(ಸಂ):ಕ್ವಾಟಿ ಜಾನಪದ (ಸ್ಮರಣ ಸಂಚಿಕೆ) ಬೀದರ ತಾಲೂಕ ದ್ವಿತಿಯ
ಜಾನಪದ ಸಮ್ಮೇಳನ ದಿನಾಂಕ ೩೦,೩೧ ಡಿಸೆಂಬರ್ : ೨೦೧೧

51. ರಾಮಚಂದ್ರ ಚಿಂತಾಮಣ ಢೇರೆ : (ಕನ್ನಡಕ್ಕೆ ಅನುವಾದ ಡಾ. ವಿಠಲರಾವ ಗಾಯಕ್ವಾಡ):
'ಲಜ್ಜಾಗೌರಿ' : ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೩

52. ರಾಮಚಂದ್ರ ಜೋಷಿ : ಸಮಗ್ರ ಸಮಾಜಶಾಸ್ತ್ರ : ಪ್ರ : ಸಿದ್ಧಲಿಂಗೇಶ್ವರ ಪ್ರಕಾಶನ ಗುಲ್ಬರ್ಗಾ : ೨೦೧೧

53. ರುಕ್ಮಿಣಿ ಎಂ . ಕೆ. (ಡಾ) : ಜನಪದ ಕಥನಗೀತೆಗಳಲ್ಲಿ ಮಹಿಳೆ ಒಂದು ಸಾಂಸ್ಕೃತಿಕ ಅಧ್ಯಯನ : ಪ್ರ : ಕನ್ನಡ ಸಾಹಿತ್ಯ ಪರಿಷತ್ತು : ೨೦೦೮

54. ಲೀಲಾಪಾಟೀಲ : ಭಾರತೀಯ ಸ್ತ್ರೀ ಜೀವನ :ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೬

55. ಲಿಲಾವತಿ ದೇವದಾಸ (ಡಾ) : 'ಹೆರಿಗೆ' : ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೧೯೯೪

56. ಲೀವಿಂಗ ಸ್ಮೈಲ ವಿದ್ಯಾ : 'ನಾನು ಅವನಲ್ಲ... ಅವಳು... ! (ಕನ್ನಡಕ್ಕೆ ಅನುವಾದ ತಮಿಳ ಸೆಲ್ವಿ : ಬೈರೇಗೌಡ, ಪ್ರಗತಿ ಗ್ರಾಫಿಕ್ಸ ಬೆಂಗಳೂರು : ೨೦೧೨

57. ವಡ್ಡಗೆರೆ ನಾಗರಾಜಯ್ಯ : ವಡ್ಡಗೆರೆ ನಾಗಮ್ಮ ಮಹಾಸತಿ ಕಾವ್ಯ : ಪ್ರ : ಅನ್ನಪೂರ್ಣ ಪಬ್ಲಿಷಿಂಗ ಹೌಸ : ೨೦೧೦

58. ವಿಜಯ್ ಪೂಣಚ್ಚ ತಂಬಂಡ (ಡಾ) : ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ : ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೯

59. ವಿಜಯಶ್ರೀ ಸಬರದ (ಡಾ) : ಮಹಿಳೆ ಶೋಷಣೆ ಸವಾಲುಗಳು : ನಿರ್ದೇಶಕರು, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ : ೨೦೦[illegible]

60. ವೀರಣ್ಣ ದಂಡೆ(ಡಾ):ಕನ್ನಡ ಜಾನಪದ ಪ್ರಜ್ಞೆ : ಪ್ರ: ಕವಿಮಾರ್ಗ ಪ್ರಕಾಶನ : ೧೯೯೩

61. ವೀರಭದ್ರಪ್ಪ ಬಿ.ವಿ. : ವೇದಗಳಲ್ಲಿ ಜನಸಾಮಾನ್ಯರು : ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈವೆಟ ಲಿಮಿಟೆಡ : ೨೦೦೯

62. ವೃಷಭಕುಮಾರ (ಡಾ) : ಜಾನಪದ ದರ್ಪಣ : ಸ್ವಾಗತ ಸಮಿತಿ ಅಖಿಲ ಭಾರತ ಜಾನಪದ ಸಮ್ಮೇಳನ ಕರ್ನಾಟಕ ಸಂಘದ ಕಟ್ಟಡ ಡಾ. ಅಂಬೇಡ್ಕರ ವೃತ : ೨೦೧೧

63. ವೆಂಕಟೇಶ . ಸಿ . ಡಿ.(ಡಾ) : ಜನಪದ ಸಾಹಿತ್ಯದಲ್ಲಿ ಸ್ತ್ರೀ ಪರಿಕಲ್ಪನೆ :ಪ್ರ : ಶ್ರೀ ಶಿರಡಿ ಸಾಯಿ ಎಂಟರಪ್ರೈಸೆಸ ಕಾಮಾಕ್ಷಿಪಾಳ್ಯ ಬೆಂಗಳೂರು : ೨೦೧೦

64. ಶಂಕರ್‌ರಾವ ಚ. ನ್. : ಭಾರತದಲ್ಲಿ ಮಹಿಳಾ ಅಧ್ಯಯನ : ಪ್ರ : ಜೈ ಭಾರತ ಮಂಗಳೂರು : -೨೦೦೯

65. ಶಂಕರರಾವ ಚ.ನ. : ಭಾರತದಲ್ಲಿ ಮಹಿಳಾ ಅಧ್ಯಯನ :ಪ್ರ : ಜೈ ಭಾರತ ಪ್ರಕಾಶ ಮಂಗಳೂರು : ೨೦೦೬

66. ಶಿವರುದ್ರಪ್ಪ ಜಿ. ಎಸ್. (ಡಾ) : ಕನ್ನಡ ಸಾಹಿತ್ಯ ಸಮೀಕ್ಷೆ :ಪ್ರ : ಸಪ್ನಾ ಬುಕ್ ಹೌಸ್, ಬೆಂಗಳೂರು : ೨೦೧೧

67. ಶಿವಾನಂದ ಎಸ್. ವಿರಕ್ತಮಠ (ಡಾ) : ಮಹಿಳೆ ಮತ್ತು ಧರ್ಮ :ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೧೧

68. ಶಿವಾನಂದ ಎಸ್. ವಿರಕ್ತಮಠ (ಡಾ): ಮಹಿಳಾ ಅಧ್ಯಯನ : ಪ್ರ : ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೮

69. ಶ್ರೀಮತಿ ಎಚ್. ಎಸ್. : ಹೆಣ್ಣುತನ ಎಂಬ ಕಣ್ಕಟ್ಟು : ಪ್ರ : ಎಂ. ಬೈರೆಗೌಡ, ಪ್ರಗತಿ ಗ್ರಾಫೀಕ್ಸ ಬೆಂಗಳೂರು : ೨೦೧೦

70. ಶೇಷಗಿರಿರಾವ್ ಎಲ್. ಎಸ್. : ಸಮಗ್ರ ವಿಮರ್ಶಾ ಸಾಹಿತ್ಯ : ಪ್ರ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ : ೨೦೧೦

71. ಶೈಲಜ ಹಿರೇಮಠ (ಡಾ) : ಮಹಿಳಾ ಅಧ್ಯಯನ : ಪ್ರ: ಕನ್ನಡ ವಿಶ್ವವಿದ್ಯಾಲಯ ಹಂಪಿ : ೨೦೦೨

72. ಶೇಖರ್ ಎಂ .ಎಸ್ (ಡಾ): ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಮಹಿಳಾಪರ ಕಾಳಜಿಗಳು :ಪ್ರ: ವಿ. ಎನ್. ಮಲ್ಲಿಕಾರ್ಜುನಸ್ವಾಮಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ ಬೆಂಗಳೂರು : ೨೦೦೦

73. ಸರ್ದೇಸಾಯಿ ಎಸ್. ಜಿ. : ಭಾರತೀಯ ತತ್ವಜ್ಞಾನ ವೈಚಾರಿಕ ಮತ್ತು ಸಾಮಾಜಿಕ ಸಂಘರ್ಷ : ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈವೆಟ್ ಲಿಮಿಟೆಡ : ೨೦೧೪

74. ಸರ್ದೇಸಾಯಿ ಎಸ್. ಜಿ. : ಪ್ರಾಚೀನ ಭಾರತದಲ್ಲಿ ದಾರ್ಶನಿಕ ಸಂಘರ್ಷ ಮತ್ತು ಅದರ ಸಾಮಾಜಿಕ ಮಹತ್ವ : ಪ್ರ : ನವಕರ್ನಾಟಕ ಪಬ್ಲಿಕೇಷನ್ಸ ಪ್ರೈವೆಟ್ ಲಿಮಿಟೆಡ : ೨೦೦೫

75. ಸಬಿಹಾ ಭೂಮಿಗೌಡ (ಡಾ) (ಸಂ): ಮಹಿಳಾ ಸಾಹಿತ್ಯ: ಪ್ರ : ರಾಜಾ ಪ್ರಿಂಟರ್ಸ , ಬೆಂಗಳೂರು : ೨೦೦೬

76. ಸಬಿಹಾ ಭೂಮಿಗೌಡ (ಡಾ) (ಸಂ) : ಮಹಿಳೆ ಸಂಘಟನೆ ಹೋರಾಟ: ಪ್ರ : ಭಾಗ್ಯಂ

ಬೈಂಡಿಂಗ್ ವರ್ಕ್ಸ ಬೆಂಗಳೂರು : ೨೦೦೮

77. ಸಬಿಹಾ ಭೂಮಿಗೌಡ(ಡಾ) ಮಲ್ಲಿಕಾ ಘಂಟಿ(ಡಾ) : ಕನ್ನಡ ಸಾಹಿತ್ಯ ಮತ್ತು

ಮಹಿಳೆ: ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ ಬೆಂಗಳೂರು : ೨೦೦೬

78. ಸಂಧ್ಯಾರೆಡ್ಡಿ ಕೆ. ಆರ್. : ಮಹಿಳಾ ಜಾನಪದ : ಪ್ರ : ಎಂ. ಮುನಿರಾಜು ರಿಜಿಸ್ಟ್ರಾರ,

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಕನ್ನಡ ಭವನ,

ಬೆಂಗಳೂರು : ೨೦೦೩

79. ಸಾರಾ ಅಬೂಬಕ್ಕರ : ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ : ಪ್ರ : ಪ್ರೊ. ಮಲ್ಲೇಪುರಂ

ಜಿ ವೆಂಕಟೇಶ ನಿರ್ದೇಶಕರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ : ೨೦೦೬

80. ಸುಮಂಗಲಾ ಅತ್ತಿಗೇರಿ (ಡಾ):ಕೃಷಿ ಜಾನಪದ ಮತ್ತು ಮಹಿಳೆ : ಪ್ರ : ಡಾ. ಎಸ್.

ಪ್ರಸಾದಸ್ವಾಮಿ ರಿಜಿಸ್ಟ್ರಾರ ಕರ್ನಾಟಕ ಜಾನಪದ ಅಕಾಡೆಮಿ ಕನ್ನಡ ಭವನ

ಬೆಂಗಳೂರು : ೨೦೧೦

81. ಹಲಸಂಗಿಯ ಚನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ (ಹಲಸಂಗಿ ಗೆಳೆಯರು) : ಗರತಿಯ

ಹಾಡು : ಪ್ರ: ಸಮಾಜ ಪುಸ್ತಕಾಲಯ ಶಿವಾಜಿ ಬೀದಿ : ೨೦೦೦

82. ಹಂದ್ರಾಳ ಗವಿಸಿದ್ದಪ್ಪ : ಬೈಗುಳುಗಳಲ್ಲಿ ಮಹಿಳೆ : ಪ್ರ : ಕನ್ನಡ ವಿಶ್ವವಿದ್ಯಾಲಯ

ಹಂಪಿ : ೨೦೧೦

83. ಹೆಬ್ಬಾಳೆ ಜಗನಾಥ(ಡಾ) (ಸಂ) : ಎಸ್ ಬೀದರ ಜಿಲ್ಲೆಯ ಬುಲಾಯಿ ಹಾಡುಗಳು : ಪ್ರ :

ನೀಲಗಂಗಾ ಜಗನ್ನಾಥ ಹೆಬ್ಬಾಳೆ ನಾವದಗೇರಿ, ಜನವಾಡ ರಸ್ತೆ ಬೀದರ : ೧೯೯೬

## 2. ಪತ್ರಿಕೆಗಳು

1. ವಿಜಯವಾಣಿ ದಿನಾಂಕ ೨೧ ಫೆಬ್ರುವರಿ ೨೦೧೬
2. ವಿಜಯವಾಣಿ ದಿನಾಂಕ ೨೭ ಆಗಸ್ಟ ೨೦೧೭
3. ವಿಜಯವಾಣಿ ದಿನಾಂಕ ೨೬ ಆಗಸ್ಟ ೨೦೧೨
4. ವಿಜಯವಾಣಿ (ಅವಳು) ದಿನಾಂಕ ೬ ಅಕ್ಟೋಬರ ೨೦೧೫
5. ವಿಜಯವಾಣಿ ದಿನಾಂಕ (ಲಲಿತಾ) ೧೫ ಆಗಸ್ಟ ೨೦೧೬
6. ಪ್ರಜಾವಾಣಿ (ಭೂಮಿಕಾ) ದಿನಾಂಕ ೨೫ ಜೂನ್ ೨೦೧೭
7. ಪ್ರಜಾವಾಣಿ (ಭೂಮಿಕಾ) ದಿನಾಂಕ ೧೮ ಫೆಬ್ರುವರಿ ೨೦೧೬
8. ಪ್ರಜಾವಾಣಿ (ಭೂಮಿಕಾ) ದಿನಾಂಕ ೨೦ ಮೇ ೨೦೧೬
9. ಪ್ರಜಾವಾಣಿ (ಕ್ಷೇಮಕುಶಲ) ದಿನಾಂಕ ೧೮ ಜನವರಿ ೨೦೧೬
10. ಪ್ರಜಾವಾಣಿ ( ಭೂಮಿಕಾ ) ದಿನಾಂಕ ೬ ಮೇ ೨೦೧೭
11. ಪ್ರಜಾವಾಣಿ (ಭೂಮಿಕಾ) ದಿನಾಂಕ ೧೩ ಆಗಸ್ಟ ೨೦೧೭
12. ಪ್ರಜಾವಾಣಿ (ಭೂಮಿಕಾ) ದಿನಾಂಕ ೪ ಮಾರ್ಚ ೨೦೧೬
13. ಪ್ರಜಾವಾಣಿ (ಭೂಮಿಕಾ) ದಿನಾಂಕ ೨೧ ಮೇ ೨೦೧೭
14. ಪ್ರಜಾವಾಣಿ (ಭೂಮಿಕಾ ) ದಿನಾಂಕ ೧೬ ಡಿಸೆಂಬರ ೨೦೧೭
15. ಪ್ರಜಾವಾಣಿ (ಕ್ಷೇಮಕುಶಲ) ದಿನಾಂಕ ೧೬ ಮೇ ೨೦೧೭
16. ಉದಯವಾಣಿ (ಜೋಶ್ ) ದಿನಾಂಕ ೨೧ ಮಾರ್ಚ ೨೦೧೬
17. ಉದಯವಾಣಿ (ಅವಳು ) ದಿನಾಂಕ ೧೮ ಜನವರಿ ೨೦೧೬
18. ಉದಯವಾಣಿ (ಅವಳು ) ದಿನಾಂಕ ೨೯ ಏಪ್ರೀಲ್ ೨೦೧೫
19. ಉದಯವಾಣಿ (ಸಾಪ್ತಾಹಿಕ ಸಂಪದ ) ದಿನಾಂಕ ೧೪ ಮೇ ರವಿವಾರ
20. ವಿಜಯ ಕರ್ನಾಟಕ ದಿನಾಂಕ ೬ ಮಾರ್ಚ ೨೦೧೬
21. ವಿಜಯ ಕರ್ನಾಟಕ ದಿನಾಂಕ ೧೦ ಮಾರ್ಚ ೨೦೧೬

## ನಿಯತಕಾಲಿಕೆಗಳು

1. 'ಜಾನಪದ ಜಗತ್ತು' ಅಕ್ಟೋಬರ ೨೦೧೬ ಮಾರ್ಚ ೨೦೧೬
2. 'ಜಾನಪದ ಜಗತ್ತು' ಎಪ್ರಿಲ್ ೨೦೧೬ ಜೂನ್ ೨೦೧೬
3. 'ಜಾನಪದ ಜಗತ್ತು' (ನಾಡೋಜ ಎಚ್.ಎಲ್.ನಾಗೇಗೌಡರ ಜನ್ಮ ಶತಮಾನೋತ್ಸವ)-೨೦೧೫
4. ಬೆಳಕಿಂಡಿ ರಾಷ್ಟ್ರೀಯ ಸಂಶೋಧನಾ ತ್ರೈಮಾಸಿಕ ನಿಯತಕಾಲಿಕ ಅಕ್ಟೋಬರ್-ಸೆಂಬರ ೧ ೨೦೧೧
5. ಬೆಳಕಿಂಡಿ ರಾಷ್ಟ್ರೀಯ ಸಂಶೋಧನಾ ತ್ರೈಮಾಸಿಕ ನಿಯತಕಾಲಿಕ ಜುಲೈ-ಡಿಸೆಂಬರ್ - ೨೦೧೧
6. ಹೊತ್ರಳಿ ನೆನಪಿನ ಸಂಚಿಕೆ ಬೀದರ ಜಿಲ್ಲಾ ೯ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೀದರ

   ೨೦೦೮ ಫೆಬ್ರುವರಿ ೨,೩,೪
7. ಸಾಹಿತ್ಯ ಸಿಂಚನ ತ್ರೈಮಾಸಿಕ ಪತ್ರಿಕೆ ಜನವರಿ - ಮಾರ್ಚ ೨೦೧೬

## 3 ಪ್ರಶ್ನಾವಳಿ

### ಸಂಶೋಧನಾ ವಿಷಯ - ತಾಯ್ತನದ ವಿಭಿನ್ನ ಗ್ರಹಿಕೆಗಳು

1. ತಾಯ್ತನದ ಕುರಿತಾದ ನಿಮ್ಮ ಗ್ರಹಿಕೆಗಳು?
2. ತಾಯ್ತನದ ದೈಹಿಕ ಸಂಘರ್ಷ ಎಂಥಹದ್ದು?
3. ತಾಯ್ತನದ ಮಾನಸಿಕ ತೊಳಲಾಟಗಳೇನು?
4. ಬಂಜೆಯ ವೇದನೆ?
5. ವಿವಾಹ ಪೂರ್ವ ತಾಯ್ತನದ ಕುರಿತಂತೆ ನಿಮ್ಮ ಅಭಿಪ್ರಾಯಗಳೇನು?
6. ಬಾಡಿಗೆ ತಾಯ್ತನದ ಅನಿವಾರ್ಯತೆಗಳೇನು?
7. ಬಾಡಿಗೆ ತಾಯ್ತನದ ಗ್ರಹಿಕೆಗಳು?
8. ಒಂಟಿ ತಾಯ್ತನದ ಸಮಸ್ಯೆ ಮತ್ತು ಸವಾಲುಗಳೇನು?
9. ಹದಿಹರೆಯರ ತಾಯ್ತನದಸಮಸ್ಯೆಗಳು?
10. ಬದಲಾಗುತ್ತಿರುವ ತಾಯ್ತನದ ಸ್ಥಿತಿ-ಗತಿ?
11. ಆಧುನಿಕ ವಿಜ್ಞಾನವು ತಾಯಂದಿರ ಮೇಲೆ ಮಾಡಿದ ಪ್ರಭಾವ.

ನಿಮ್ಮ ಸ್ವವಿವರ

ಹೆಸರು:-

ವೃತ್ತಿ:-

ವಯಸ್ಸು:-

ಊರು:-

ಇತರ ವಿವರಗಳು:-

## 4 ವಕ್ತಾರರ ಪಟ್ಟಿ

1. ಹೆಸರು : ಶ್ರೀಮತಿ ತುಳಸಮ್ಮ ಸಿಂಧೆ
   ಊರು : ಬೀದರ
   ವೃತ್ತಿ : ಕೂಲಿ
   ವಯಸ್ಸು : ೯೦

2. ಹೆಸರು : ಪಾರ್ವತಿ ಸೋನಾರೆ
   ಊರು : ರಾಜೇಶ್ವರ ತಾ: ಬಸವಕಲ್ಯಾಣ
   ವೃತ್ತಿ : ಕಿ.ಮ.ಆ. ಸಹಾಯಕಿ (ಆರೋಗ್ಯ ಇಲಾಖೆ), ಬೀದರ.
   ವಯಸ್ಸು : ೪೨

3. ಹೆಸರು : ಡಾ. ಸೋಮನಾಥ ಯಾಳವಾರ
   ಊರು : ಧಾರವಾಡ
   ವೃತ್ತಿ : ನಿವೃತ್ತ ಪ್ರಾಧ್ಯಾಪಕರು
   ವಯಸ್ಸು : ೬೨

4. ಹೆಸರು : ಡಾ. ಹೇಮಲತಾ ವಡ್ಡೆ
   ಊರು : ಬೆಂಗಳೂರು
   ವೃತ್ತಿ : ಕನ್ನಡ ಪ್ರಾಧ್ಯಾಪಕರು ಬೆಂ. ವಿ.ವಿ
   ವಯಸ್ಸು : ೪೯

5. ಹೆಸರು : ಶ್ರೀಮತಿ ಮೀನಾಕುಮಾರಿ ಬೋರಾಳಕರ
   ಊರು : ಹುಮನಾಬಾದ
   ವೃತ್ತಿ : ಸಮುದಾಯ ಸಂಘಟನಾಧಿಕಾರಿ
   ವಯಸ್ಸು : ೪೭

6. ಹೆಸರು : ಶ್ರೀಮತಿ ಮಂಜುಳಾ ಮೇತ್ರೆ
   ಊರು : ಹುಮನಾಬಾದ
   ವೃತ್ತಿ : ಉಪನ್ಯಾಸಕರು ಪ.ಪು. ಕಾಲೇಜು
   ವಯಸ್ಸು : ೩೩

7. ಹೆಸರು : ಶ್ರೀಮತಿ ಸುಶೀಲಾಬಾಯಿ
ಊರು : ಭಾಲ್ಕಿ
ವೃತ್ತಿ : ಗೃಹಿಣಿ
ವಯಸ್ಸು : ೬೫

8. ಹೆಸರು : ಶ್ರೀಮತಿ ಸುರೇಖಾ ಅಷ್ಟೂರೆ
ಊರು : ಬೀದರ
ವೃತ್ತಿ : ಗೃಹಿಣಿ
ವಯಸ್ಸು : ೪೨

9. ಹೆಸರು : ಶ್ರೀಮತಿ ಪ್ರಿಯದರ್ಶಿನಿ ಲಾಡೆ
ಊರು : ಕಲ್ಬುರ್ಗಿ
ವೃತ್ತಿ : ಕಂಪ್ಯೂಟರ ಆಪರೇಟರ್ ಕಡಗಂಚಿ
ವಯಸ್ಸು : ೩೬

10. ಹೆಸರು : ಶ್ರೀಮತಿ ಶಿವಗಂಗಾ ರುಮಾ
ಊರು : ಕಲ್ಬುರ್ಗಿ
ವೃತ್ತಿ : ಎಚ.ಓ.ಡಿ ಕೇಂದ್ರಿಯ ವಿ.ವಿ ಕಡಗಂಚಿ
ವಯಸ್ಸು : ೪೫

11. ಹೆಸರು : ಡಾ.ಅರುಣಾಸುಲ್ತಾನ ಪೂರೆ
ಊರು : ಬೀದರ
ವೃತಿ : ಪ್ರಾಧ್ಯಾಪಕರು ಪದವಿ ಕಾಲೇಜ ಬೀದರ
ವಯಸ್ಸು : ೫೩

12. ಹೆಸರು : ಡಾ.ಧನಲಕ್ಷ್ಮೀ ಪಾಟೀಲ
ಊರು : ಬೀದರ
ವೃತ್ತಿ : ಉಪನ್ಯಾಸಕರು ಪ.ಪೂ.ಕಾಲೇಜ ಬೀದರ
ವಯಸ್ಸು : ೩೫

13. ಹೆಸರು : ಡಾ.ಚಂದ್ರಕಲಾ ಬಿದರಿ
ಊರು : ಸೇಡಂ
ವೃತ್ತಿ : ಪ್ರಾಧ್ಯಾಪಕರು ಕೊತ್ತಲ ಬಸವೇಶ್ವರ ಪದವಿ ಮಹಾವಿದ್ಯಾಲಯ ಸೇಡಂ
ವಯಸ್ಸು : ೪೬

14.ಹೆಸರು : ಡಾ.ಬಂಡಯ್ಯಾ ಸ್ವಾಮಿ
ಊರು : ನಾವದಗೇರಿ ಬೀದರ
ವೃತ್ತಿ : ಪ್ರಾಶುಪಾಲರು ಆರ್.ಆರ್.ಕೆ.ಪದವಿ ಮಹಾವಿದ್ಯಾಲಯ ಬೀದರ
ವಯಸ್ಸು : ೪೪

15.ಹೆಸರು : ಶ್ರೀಮತಿ ಲಕ್ಷ್ಮೀ ಚಿಮಕೊಡೆ
ಊರು : ರಾಯಚೂರು
ವೃತ್ತಿ : ಗ್ರಂಥಪಾಲಕರು
ವಯಸ್ಸು : ೪೩

16.ಹೆಸರು : ಡಾ. ಮಹಾನಂದಾ ಮಡಕಿ
ಊರು : ಶಾಹಾಬಾದ
ವೃತ್ತಿ : ಪ್ರಾಧ್ಯಾಪಕರು ಪಿ.ಜಿ. ಸೆಂಟರ್ ಬೀದರ್
ವಯಸ್ಸು : ೩೫

17.ಹೆಸರು : ಡಾ.ಪ್ರೇಮಾ ಸಿರ್ಸೆ
ಊರು : ನೌಬಾದ
ವೃತ್ತಿ : ನಿವೃತ್ತ ಪ್ರಾಂಶುಪಾಲರು
ವಯಸ್ಸು : ೬೪

18.ಹೆಸರು : ಶ್ರೀಮತಿ ಪ್ರಜ್ಞಾನಿ ಸೆಂದ್ರೆ
ಊರು : ಬಸವಕಲ್ಯಾಣ
ವೃತ್ತಿ : ಗ್ರಹಿಣಿ
ವಯಸ್ಸು : ೩೮

19.ಹೆಸರು : ಶ್ರೀಮತಿ ಬೇಬಿ ಚಿದ್ರೆ
ಊರು : ಭಾಲ್ಕಿ
ವೃತ್ತಿ : ಇತಿಹಾಸ ಉಪನ್ಯಾಸಕರು
ವಯಸ್ಸು : ೩೬

20.ಹೆಸರು : ಡಾ.ಈಶ್ವರಯ್ಯಾ ಮಠ
ಊರು : ಸುರಪುರ
ವೃತ್ತಿ : ಪ್ರಾಂಶುಪಾಲರು ಪದವಿ ಮಹಾವಿದ್ಯಾಲಯ ಕಲಬುರ್ಗಿ
ವಯಸ್ಸು : ೫೪

21.ಹೆಸರು : ಡಾ.ಶಿವಾನಂದ ವಿರಕ್ತ ಮಠ
ಊರು : ಹಂಪಿ
ವೃತ್ತಿ : ಪ್ರಾಧ್ಯಾಪಕರು ಕನ್ನಡ ವಿ.ವಿ.ಹಂಪಿ
ವಯಸ್ಸು : ೫೩

22.ಹೆಸರು : ಶ್ರೀ ಎಂ.ಜೀ.ದೇಶಪಾಂಡೆ
ಊರು : ಬೀದರ
ವೃತ್ತಿ : ಸಾಹಿತಿಗಳು ಹಾಗೂ ನಿವೃತ್ತ ವ್ಯವಸ್ಥಾಪಕರು ಕೃಷ್ಣಾ ಗ್ರಾಮೀಣ ಬ್ಯಾಂಕ ಬೀದರ
ವಯಸ್ಸು : ೬೬

23.ಹೆಸರು : ಶ್ರೀಮತಿ ನೀಲಾ .ಕೆ.
ಊರು : ಕಲಬುರ್ಗಿ
ವೃತ್ತಿ : ಅಧ್ಯಕ್ಷರು ಜನವಾಡ ಮಹಿಳಾ ಸಂಘಟನೆ
ವಯಸ್ಸು : ೫೨

24.ಹೆಸರು : ಶ್ರೀಮತಿ ಕಸ್ತೂರಿ ಪಟಪಳ್ಳಿ
ಊರು : ಬೀದರ
ವೃತ್ತಿ : ಶಿಕ್ಷಕರು ಮತ್ತು ಮಹಿಳಾ ಪ್ರತಿನಿಧಿ ಕ.ಸಾ.ಪ.ಬೀದರ
ವಯಸ್ಸು : ೪೬

25.ಹೆಸರು : ಶ್ರೀಮತಿ ಮೀನಾಕ್ಷಿ ಬಾಳಿ
ಊರು : ಕಲಬುರ್ಗಿ
ವೃತ್ತಿ : ಪ್ರಾಧ್ಯಾಪಕರು ಹಾಗೂ ಸಾಹಿತಿಗಳು
ವಯಸ್ಸು : ೫೫

26.ಹೆಸರು : ಶ್ರೀ ದೇಶಾಂಶ ಹುಡಗಿ
ಊರು : ಬೀದರ
ವೃತ್ತಿ : ನಿವೃತ್ತ ಶಿಕ್ಷಕರು ಹಾಗೂ ಸಾಹಿತಿಗಳು
ವಯಸ್ಸು : ೭೦

27.ಹೆಸರು : ಶ್ರೀಮತಿ ಸಾರಿಕಾದೇವಿ
ಊರು : ಕಲಬುರ್ಗಿ
ವೃತ್ತಿ : ಪ್ರಾಧ್ಯಾಪಕರು ಅಪ್ಪ ವಿ.ವಿದ್ಯಾಲಯ ಕಲಬುರ್ಗಿ
ವಯಸ್ಸು : ೪೪

28.ಹೆಸರು : ಶ್ರೀ ರವೀಂದ್ರ ಲಂಜವಾಡಕರ್
ಅಧ್ಯಕ್ಷರುಅಖಿಲಭಾರತ ದಾಸ ಸಾಹಿತ್ಯ ಪರಿಷತ್ ಬೀದರ
ಊರು : ಬೀದರ
ವೃತ್ತಿ : ಎಸ್.ಡಿ.ಸಿ.ಬಿ.ಓ ಕಛೇರಿ ಬೀದರ
ವಯಸ್ಸು : ೩೬

29.ಹೆಸರು : ಶ್ರೀ ಸಂಜೀವ ಕುಮಾರ ಅತಿವಾಳೆ
ಗೌರವ ಸಲಹೆಗಾರರು ಸಾಹಿತ್ಯ ಸಿಂಚನ ತ್ರೈಮಾಸಿಕ ಪತ್ರಿಕೆ
ಊರು : ಬೀದರ
ವೃತ್ತಿ : ಶಿಕ್ಷಕರು
ವಯಸ್ಸು : ೩೭

30.ಹೆಸರು : ಶ್ರೀಮತಿ ಜಗದೇವಿ
ಊರು : ಕಲಬುರ್ಗಿ
ವೃತ್ತಿ : ಸೌಂದರ್ಯ ತಜ್ಞೆ
ವಯಸ್ಸು : ೩೮

## 5 ಚಿತ್ರಗಳ (ಫೋಟೋಗಳ) ವಿವರ

1) ಚಿತ್ರ ೧ ರಲ್ಲಿ ಮೈನೆರೆದ ಹೆಣ್ಣುಮಗಳಿಗೆ ಅಲಂಕಾರ ಮಾಡಿ ಕೂಡಿಸಿರುವುದು.

2) ಚಿತ್ರ ೨ ರಲ್ಲಿ ಮೈನೆರೆದ ಹೆಣ್ಣಿನ ಪಕ್ಕದಲ್ಲಿ ತಾಯ್ತನದ ಸಂಕೇತವಾಗಿ ಇಡುವ ಕಟ್ಟಿಗೆಯ ಗೊಂಬೆ

3) ಚಿತ್ರ ೩ ಕುಪ್ಪಸ ತೊಡಿಸುವದು.(ಸಿಮಂತ ಕಾರ್ಯ)

4) ಚಿತ್ರ ೪ ರಲ್ಲಿ ತೊಟ್ಟಿಲಿಡುವ ಸಂಧರ್ಭದ ದೃಶ್ಯ.

5) ಚಿತ್ರ ೫ ತೊಟ್ಟಿಲಲ್ಲಿ ಕೂಸು ಆಡಿಸುವ ಸಂಧರ್ಭ

6) ಚಿತ್ರ ೬ ರಲ್ಲಿ ಮಗುವಿಗಾಗಿ ತಯಾರಿಸಿದ ತೊಟ್ಟಿಲ ಕೌದಿ.

7) ಚಿತ್ರ ೭ರಲ್ಲಿ ಮಗುವಿಗೆ ಬಳಸಲಾಗುವ ವಿವಿಧ ಬಗೆಯ ಕುಲಾವಿಗಳು.

8) ಚಿತ್ರ ೮ ಸಪ್ತ ಮಾತ್ರಿಕೆಯರು.

9) ಚಿತ್ರ ೯ ರಲ್ಲಿ ವಾತ್ಸಲ್ಯಕ್ಕೆ ಹೆಸರಾದ ಯಶೋಧೆ.

10) ಚಿತ್ರ ೧೦ ರಲ್ಲಿ ಶಿವಾಜಿಯನ್ನು ಪೋಷಿಸಿದ ಜಿಜಾಮಾತೆ.

11) ಚಿತ್ರ ೧೧ ರಲ್ಲಿ ತಾಯ್ತನದ ಸಂಕೇತವಾಗಿ ಮದರತೇರಿಸಾ.

12) ಚಿತ್ರ ೧೨ ರಲ್ಲಿ ವಾತ್ಸಲ್ಯಮಯ ತಾಯಿಯ ಚಿತ್ರ.

